# ರೈತನ ಪ್ರಪಂಚ

ಡಿ. ಕೃಷ್ಣೈಯ್ಯಂಗಾರ್, ಎಂಎ

ಪ್ರಕಾಶಕರು
ರೈತಜ್ಞಾನ ಪ್ರಚಾರ ಮಂಡಲಿ
ಗೊರೂರು

[ಬೆಲೆ: ರೂ. ೧-೪-೦

THIS BOOK IS RESPECTFULLY DEDICATED

WITH

GRACIOUS PERMISSION

TO

**AMIN-UL-MULK**

**Sir MIRZA M. ISMAIL, KCIE, OBE**

**Dewan of Mysore**

BY

THE AUTHOR

IN ADMIRATION OF HIS ABIDING INTEREST IN THE ADVANCEMENT OF THE RURAL POPULATION

ಗ್ರಾಮೋದ್ಧಾರಕಾರ್ಯಗಳಲ್ಲಿ ವಿಶೇಷ ಆದರೋತ್ಸಾಹವುಳ್ಳವರೂ

ಮೈಸೂರು ಸಂಸ್ಥಾನದ ಸಚಿವ ಶ್ರೇಷ್ಠರೂ ಆಗಿರುವ

ಅಮೀನ್-ಉಲ್ ಮುಲ್ಕ್

**ಸರ್ ಮಿರ್ಜಾ ಎಂ. ಇಸ್ಮಾಯಿಲ್,** ಕೆ ಸಿ ಐ ಇ, ಒ ಬಿ ಇ

ಅವರ ಸನ್ನಿಧಿಯಲ್ಲಿ

ಕೃಪಾಪೂರಿತ ಅನುಮತಿಯನ್ನು ಪಡೆದು

ಈ ಗ್ರಂಥವು

ಭಕ್ತಿವಿಶ್ವಾಸಗಳೊಡನೆ ಅರ್ಪಿತವಾಗಿದೆ

"Our most pressing problem at present is the improvement of the economic condition of the people, in other words, the raising of their standard of living I am thinking more especially of the RAIYAT Even a slight rise in his standard of living will have a far-reaching effect upon the problem of unemployment and upon the general economic condition of the State To achieve this end, it is necessary that both the administration and the people, especially those living in rural areas, should work hand in hand, each making a contribution towards a common purpose

* * *

" No people or community can prosper, if they lack the virtues of Self-help and Self-reliance No amount of outside help can make up for a deficiency in those respects and no Grace can save us, unless we help ourselves Let us all, therefore, do what we can, both as individuals and as a people, to develop the productive capacity of our State and to make it, in an ever increasing degree, a happy, prosperous and united land "

—Extract from the speech of Sir Mirza M Ismail, at the Mysore Representative Assembly, October 1938

# FOREWORD

It is a great pleasure that I comply with the request of my friend and pupil, Mr D Krishna Iyengar that I should write a foreword to his interesting book on Rural Reconstruction Mr Krishna Iyengar has brought to his task valuable equipment in the shape of a good knowledge of Economics, while in the preparation of the present work, he has read widely and carefully The result, happily, is not so much an erudite treatise, but a vivid and helpful description of the world of the peasant and the directions in which that world may be improved for him to live a prosperous and happy life I have not the slightest doubt that the work will prove useful and stimulating, and I commend it to the attention of all interested in rural reconstruction and therefore in the abiding prosperity of our country

*Mysore,*
26–3–1939

N S SUBBA RAO

# ಮುನ್ನುಡಿ

ನನ್ನ ಮಿತ್ರರೂ ಮತ್ತು ವಿದ್ಯಾರ್ಥಿಗಳೂ ಆದ ಶ್ರೀಮಾನ್ ಡಿ ಕೃಷ್ಣೈಯ್ಯಂಗಾರ್ಯರ ಪ್ರಾರ್ಥನೆಯಂತೆ, ಅವರು ಬರೆದಿರುವ ಅತ್ಯುಪಯುಕ್ತವಾದ ಗ್ರಾಮಪುನರುದ್ಧಾರಕ್ಕೆ ಸಂಬಂಧಿಸಿದ ಈ ಪುಸ್ತಕಕ್ಕೆ ಮುನ್ನುಡಿಯನ್ನು ಬರೆಯಲು ನನಗೆ ಬಹಳ ಸಂತೋಷವಾಗುತ್ತದೆ ಈ ಗ್ರಂಥರಚನೆಗೆ ಆವಶ್ಯಕವಾದ ಅರ್ಥಶಾಸ್ತ್ರದ ಪಾಂಡಿತ್ಯವು ಶ್ರೀಮಾನ್ ಕೃಷ್ಣೈಯ್ಯಂಗಾರ್ಯರಿಗೆ ಇರುವುದಲ್ಲದೆ, ಇದಕ್ಕಾಗಿ ಅವರು ಅನೇಕ ವಿಷಯಗಳನ್ನು ಗ್ರಂಥಾವಲೋಕನಮಾಡಿ, ವಿಚಕ್ಷಣೆಯಿಂದ ಸಂಗ್ರಹಿಸಿದ್ದಾರೆ ಇದರ ಪರಿಣಾಮವಾಗಿ, ನಮ್ಮ ಸುಯೋಗವೋ ಎಂಬಂತೆ, ಅವರ ಗ್ರಂಥದಿಂದ ಕೇವಲ ಪಂಡಿತರಂಜನೆಯಾಗುವುದು ಮಾತ್ರವಲ್ಲದೆ, ರೈತರ ಸ್ಥಿತಿಗತಿಗಳನ್ನು ಮನಮುಟ್ಟುವಂತೆ ತಿಳಿಯುವುದಕ್ಕೂ ಮತ್ತು ಅವರ ಜೀವನದ ಮಟ್ಟವನ್ನು ಹೆಚ್ಚಿಸಿ, ಅದನ್ನು ಸುಖಮಯವನ್ನಾಗಿ ಮಾಡಲು ಕೈಕೊಳ್ಳಬೇಕಾದ ಪ್ರಗತಿಮಾರ್ಗಗಳನ್ನು ತಿಳಿಯುವುದಕ್ಕೂ ಸಹಕಾರಿಯಾಗಿದೆ ಈ ಪುಸ್ತಕವು ಉಪಯುಕ್ತಕರವೂ, ಉತ್ತೇಜಕವೂ ಆಗಿದೆ ಎನ್ನುವುದರಲ್ಲಿ ಸ್ವಲ್ಪವೂ ಸಂಶಯವಿಲ್ಲ ಗ್ರಾಮಾಭಿವೃದ್ಧಿಕಾರ್ಯಗಳಲ್ಲಿಯೂ, ತನ್ಮೂಲಕ ನಮ್ಮ ದೇಶದ ಏಳಿಗೆಗಾಗಿಯೂ, ಹಂಬಲಿಸುತ್ತಿರುವವರೆಲ್ಲರ ಅವಗಾಹನೆಗೂ ಈ ಪುಸ್ತಕವು ಅರ್ಹವಾಗಿದೆ

ಮೈಸೂರು,
26–3–1939.

ಎನ್. ಎಸ್. ಸುಬ್ಬರಾವ್

# ಪ್ರಸ್ತಾವನೆ

ಭರತಖಂಡವು ಹಳ್ಳಿಗಳ ದೇಶ ಇಲ್ಲಿಯ ಜನಗಳ ಮುಖ್ಯವೃತ್ತಿ ವ್ಯವಸಾಯ ಅದನ್ನು ಉತ್ತಮಪಡಿಸುವುದರಿಂದಲೇ ದೇಶೋನ್ನತಿಯಾಗಬೇಕು ಕಳೆದ ಒಂದೆರಡು ಶತಮಾನಗಳಿಂದೀಚೆಗೆ ಈ ವೃತ್ತಿಯ ವಿಷಯದಲ್ಲಿ ಜನರ ಗಮನವು ಕಡಿಮೆಯಾಗಿ, ದೇಶಾಭಿವೃದ್ಧಿಗೆ ಹಾನಿಯುಂಟಾಗುತ್ತಿದೆ ಈ ಗುಟ್ಟನ್ನು ತಿಳಿದೇ ಪ್ರಭುತ್ವದವರೂ, ದೇಶಾಭಿಮಾನಿಗಳೂ ಮತ್ತು ಅರ್ಥಶಾಸ್ತ್ರಜ್ಞರೂ ರೈತರ ಪ್ರಗತಿಗಾಗಿ ಪ್ರಯತ್ನಿಸುತ್ತಿದ್ದಾರೆ ರೈತರ ಜೀವನವನ್ನೂ ಮತ್ತು ಅವರ ಜೀವನಕ್ಕೆ ಸಂಬಂಧಪಟ್ಟ ವ್ಯವಸಾಯವನ್ನೂ ಉತ್ತಮಪಡಿಸುವುದು ಮುಖ್ಯವಾದ ಪವಿತ್ರಕಾರ್ಯವಾಗುತ್ತಿದೆ

ರೈತರ ಸ್ಥಿತಿಯು ದಿನೇ ದಿನೇ ಶೋಚನೀಯವಾಗುತ್ತಿದೆ ಒಂದು ಕಡೆ ಹೊರಲಾರದ ಸಾಲದ ಭಾರ, ಇನ್ನೊಂದು ಕಡೆ ಮಧ್ಯಸ್ಥಗಾರರ ಸೂರೆ, ಮತ್ತೊಂದು ಕಡೆ ಎಷ್ಟು ದುಡಿದರೂ ಹೊಟ್ಟೆಬಟ್ಟೆಗೆ ಸಾಕಾಗದ ವರಮಾನ ಹೀಗೆ ಅವರು ಕಷ್ಟಪರಂಪರೆಗಳಿಗೆ ಸಿಕ್ಕಿ ನರಳುತ್ತಿದ್ದಾರೆ ಈ ಸ್ಥಿತಿಯನ್ನು ಉತ್ತಮಪಡಿಸಬೇಕಾದರೆ ಗ್ರಾಮ ಪುನರುದ್ಧಾರ ಕಾರ್ಯಗಳನ್ನು ಕೈಗೊಳ್ಳಬೇಕು ಸುಲಭವಾದ ಮತ್ತು ಸುಲಲಿತವಾದ ಉದಾಹರಣೆಗಳನ್ನು ಅವರ ಮುಂದಿಟ್ಟು ವ್ಯವಸ್ಥಿತವಾದ ಸಂಸ್ಥೆಗಳ ಮೂಲಕ ಅಭಿವೃದ್ಧಿಕಾರ್ಯಗಳನ್ನು ಪ್ರಾರಂಭಿಸಬೇಕು ಇಂತಹ ಕಾರ್ಯಗಳಲ್ಲಿ ರೈತರು ಆಸಕ್ತಿ ವಹಿಸಿ ತಮ್ಮ ಸಹಕಾರವನ್ನು ನೀಡುವಂತೆ ಮಾಡಬೇಕು ಗ್ರಾಮ ಪಾಠಶಾಲೆ, ಗ್ರಾಮ ಪಂಚಾಯಿತಿ, ಗ್ರಾಮ ಪರಸ್ಪರ ಸಹಾಯ ಸಂಘ— ಮುಂತಾದುವುಗಳ ಮೂಲಕ ಹಳ್ಳಿಗಳಲ್ಲಿ ಹೆಚ್ಚು ಜ್ಞಾನಪ್ರಚಾರಮಾಡಬೇಕು

ಯಾವ ರೀತಿಯಲ್ಲಿ ಗ್ರಾಮ ಪುನರುಜ್ಜೀವನ ಕೆಲಸಗಳನ್ನು ಪ್ರಾರಂಭಿಸಬೇಕು, ಇಂತಹ ಕೆಲಸಗಳು ಮುಂದುವರಿದಿರುವ ದೇಶಗಳಲ್ಲಿ ಹೇಗೆ ನಡೆಯುತ್ತಿವೆ—ಎಂಬ ವಿಷಯಗಳನ್ನು ಸ್ವಲ್ಪ ಮಟ್ಟಿಗೆ ವಿಶದಪಡಿಸಲು ಈ ಸಣ್ಣ ಪುಸ್ತಕದಲ್ಲಿ ಪ್ರಯತ್ನಿಸಲಾಗಿದೆ ನಮ್ಮ ಹಳ್ಳಿಗಳ

ದುಸ್ಥಿತಿಯನ್ನು ಪರಿಚಯಮಾಡಿಸಿ ಇತರ ದೇಶಗಳಲ್ಲಿ ಈ ಬಗೆಯ ಕಷ್ಟಗಳನ್ನು ಹೇಗೆ ನಿವಾರಣೆಮಾಡಿಕೊಂಡಿರುವರು ಎಂಬುದನ್ನು ತಿಳಿಸಿ, ಹಾಗೆಯೇ ಇಲ್ಲಿಯೂ ಕೂಡ ಅವಶ್ಯಕವಾದ ನಿವಾರಣೋಪಾಯಗಳನ್ನು ಸೂಚಿಸಲು ಪ್ರಯತ್ನಿಸಿದೆ

ಸಾಮಾನ್ಯವಾಗಿ ವಿದ್ಯಾವಂತರು ರೈತರ ಋಣಿಗಳು ಎಂಬುದು ಎಲ್ಲರಿಗೂ ತಿಳಿದ ವಿಷಯ ಈಗಿನ ಸಂದರ್ಭದಲ್ಲಿ ವಿದ್ಯಾವಂತರಾದ ಪ್ರತಿಯೊಬ್ಬರೂ ಸಾಧ್ಯವಾದ ಮಟ್ಟಿಗೆ ರೈತರ ಏಳಿಗೆಗೆ ಪ್ರಯತ್ನ ಪಡಬೇಕು ನಮ್ಮ ರೈತರಲ್ಲಿ ಹೆಚ್ಚು ಜಾಗೃತಿಯುಂಟಾಗಿ ಅವರು ಗ್ರಾಮ ಪುನರುದ್ಧಾರ ಕಾರ್ಯಗಳಲ್ಲಿ ಆಸಕ್ತಿಯನ್ನು ವಹಿಸಬೇಕಾದರೆ ವಿದ್ಯಾವಂತರು, ವಿದ್ಯಾಶಾಲೆಗಳ ಅಧ್ಯಾಪಕರು ಹಳ್ಳಿಗಳಿಗೆ ಹೋಗಿ, ಪ್ರಚಾರ ಕಾರ್ಯವನ್ನು ನಡೆಸಿ, ಹಳ್ಳಿಯ ಜೀವನದಲ್ಲಿ ಪ್ರೀತಿಯನ್ನೂ ಅಭಿರುಚಿಯನ್ನೂ ಹೆಚ್ಚಿಸಬೇಕು ಈ ಉದ್ದೇಶದಿಂದಲೇ ಈ ಗ್ರಂಥವನ್ನು ಬರೆಯಲಾಗಿದೆ

ರೈತರ ಉದ್ಧಾರವಾಗಬೇಕಾದರೆ ಗ್ರಾಮ ಪುನರುದ್ಧಾರ ಕಾರ್ಯಗಳು ಆಚರಣೆಯಲ್ಲಿ ಬರಬೇಕು ವ್ಯವಸಾಯಾಭಿವೃದ್ಧಿ, ವಿದ್ಯಾಪ್ರಚಾರ, ರೈತರ ಸಾಲದ ಭಾರವನ್ನು ಕಡಿಮೆಮಾಡುವುದು, ರೈತರ ಜಮೀನು ತಾಕುಗಳನ್ನು ಒಟ್ಟುಗೂಡಿಸುವುದು, ನಣ್ಣ ಕೈಗಾರಿಕೆಗಳಿಗೆ ಪ್ರೋತ್ಸಾಹ, ಉತ್ತಮ ಸಹಕಾರ ಸಂಘಗಳ ಸ್ಥಾಪನೆ— ಇವೇ ಮುಂತಾದ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕು ಈ ವಿಷಯಗಳನ್ನೆಲ್ಲಾ ಒಂದೊಂದಾಗಿ ಚರ್ಚಿಸಿ, ಇತರ ದೇಶಗಳ ಉದಾಹರಣೆಗಳನ್ನೂ ಈ ಗ್ರಂಥದಲ್ಲಿ ನಮೂದಿಸಿದೆ ಈ ಉದಾಹರಣೆಗಳನ್ನು ಮೇಲ್ಪಂಕ್ತಿಯನ್ನಾಗಿ ಇಟ್ಟುಕೊಂಡು ಸುಲಭವಾದ ಮತ್ತು ಸುವ್ಯವಸ್ಥಿತವಾದ ಗ್ರಾಮಾಭಿವೃದ್ಧಿ ಕಾರ್ಯಗಳನ್ನು ವಿಸ್ತರಿಸಬೇಕೆಂಬುದೇ ಗ್ರಂಥಕರ್ತನ ಹಾರೈಕೆಯಾಗಿದೆ

ಹೊಸ ವಿಷಯವಾಗಲಿ, ಹೊಸ ಪದ್ಧತಿಗಳಾಗಲಿ ಈ ಗ್ರಂಥದಲ್ಲಿ ಇಲ್ಲದೇ ಇರಬಹುದು ಆದರೂ, ನಮ್ಮ ದೇಶದ ಆಧುನಿಕ ಸನ್ನಿವೇಶಗಳಿಗೆ ಅನ್ವಯವಾಗುವಂತಹ ಕೆಲವು ಸಲಹೆಗಳನ್ನು ಅಲ್ಲಲ್ಲಿ ಕೊಟ್ಟಿದೆ

ಅವುಗಳನ್ನು ಸರಿಯಾದ ಕ್ರಮದಲ್ಲಿ ಆಚರಣೆಗೆ ತಂದರೆ ರೈತರ ಉದ್ಧಾರ ವಾದೀತೆಂಬುದೇ ನನ್ನ ದೃಢವಾದ ನಂಬುಗೆ

ರಾಜಕಾರ್ಯಪ್ರವೀಣ ಶ್ರೀಮಾನ್ ಎನ್ ಎಸ್ ಸುಬ್ಬರಾವ್, ಎಂ ಎ (ಕ್ಯಾಂಟಬ್), ಬಾರ್-ಅಟ್-ಲಾ, ಅವರು ಗ್ರಂಥಕರ್ತನ ಪೂಜ್ಯ ಗುರುಗಳು ಗ್ರಂಥಕರ್ತನಿಗೆ ಅರ್ಥಶಾಸ್ತ್ರದ ಪ್ರಥಮ ಪರಿಚಯ ವನ್ನು ಮಾಡಿಕೊಟ್ಟವರೇ ಅವರು ಅವರಿಗೆ ಭಕ್ತಿಪುರಸ್ಸರವಾದ ವಂದನೆ ಗಳನ್ನು ಅರ್ಪಿಸುವುದು ಗ್ರಂಥಕರ್ತನ ಪ್ರಥಮ ಕರ್ತವ್ಯವಾಗಿದೆ. ಅರ್ಥಶಾಸ್ತ್ರಪ್ರವೀಣರೂ ಮೈಸೂರು ವಿಶ್ವವಿದ್ಯಾನಿಲಯದ ಸ್ಥಾನಪತಿ ಗಳೂ ಮತ್ತು ಹಳ್ಳಿಯ ಜೀವನದ ಗುಟ್ಟನ್ನು ಚೆನ್ನಾಗಿ ಅರಿತವರೂ ಆದ ಈ ಮಹನೀಯರು ಸಂತೋಷದಿಂದ ಒಪ್ಪಿ ಈ ಸಣ್ಣ ಪುಸ್ತಕಕ್ಕೆ ಮುನ್ನುಡಿಯನ್ನು ಅನುಗ್ರಹಿಸಿದುದು ಗ್ರಂಥಕರ್ತನ ಭಾಗ್ಯ ಇದಕ್ಕಾಗಿ ಮಾತ್ರವಲ್ಲದೆ, ಅನೇಕ ಇತರ ವಿಷಯಗಳಲ್ಲಿಯೂ ಗ್ರಂಥಕರ್ತನು ಇವರಿಗೆ ಚಿರಋಣಿಯಾಗಿರುವನು

ಮೈಸೂರು ವಿಶ್ವವಿದ್ಯಾನಿಲಯದ ಅರ್ಥಶಾಸ್ತ್ರ ನಿಪುಣರಾದ ಶ್ರೀಮಾನ್ ವಿ ಎಲ್ ಡಿ'ಸೌಜಾ, ಬಿ ಎ ಬಿ ಕಾಮ್(ಲಂಡನ್)ಅವರು ಗ್ರಂಥಕರ್ತನಿಗೆ ಅರ್ಥಶಾಸ್ತ್ರದ ಹೆಚ್ಚು ಪರಿಚಯವನ್ನು ಮಾಡಿಸಿ ಕೊಟ್ಟವರು ಗ್ರಾಮ ಆರ್ಥಿಕ ವಿಚಾರಣೆಯನ್ನು ನಡೆಸಲು, ಗ್ರಂಥ ಕರ್ತನನ್ನು ಒತ್ತಾಯಪಡಿಸಿ, ಎಲ್ಲಾ ಸಲಕರಣೆಗಳನ್ನು ಒದಗಿಸಿಕೊಟ್ಟು, ಪ್ರೋತ್ಸಾಹಪಡಿಸಿದ ಗುರುಗಳು ಅವರು ಈ ಗ್ರಂಥದ ಎರಡನೇ ಪರಿ ಶಿಷ್ಟದ ಪ್ರಶ್ನಾವಳಿಗೆ ಶ್ರೀಮಾನ್ ವಿ ಎಲ್ ಡಿ'ಸೌಜಾರವರ ಪುಸ್ತಕವೇ ಮೂಲಾಧಾರವಾಗಿದೆ ಎಲ್ಲ ವಿಷಯಗಳಲ್ಲಿಯೂ ಉತ್ತಮ ಸಲಹೆಗಳನ್ನು ಕೊಟ್ಟು ಸಹಾಯಮಾಡಿರುವ ಈ ಮಹನೀಯರಿಗೆ ಗ್ರಂಥಕರ್ತನು ತನ್ನ ಕೃತಜ್ಞತಾಪೂರ್ವಕ ಧನ್ಯವಾದಗಳನ್ನು ಅರ್ಪಿಸುವನು

ಕರ್ನಾಟಕ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರೂ, ನವೀನ ಕನ್ನಡ ಸಾಹಿತ್ಯ ಪ್ರಥಮಾಚಾರ್ಯರೂ, ಉಜ್ವಲ ಕರ್ನಾಟಕ ದೇಶಾಭಿಮಾನಿ ಗಳೂ ಮತ್ತು ಗ್ರಂಥಕರ್ತನ ಗುರುಗಳೂ ಆದ ರಾಜಸೇವಾಸಕ್ತ ಶ್ರೀಮಾನ್ ಬಿ ಎಂ ಶ್ರೀಕಂಠಯ್ಯ, ಎಂ ಎ, ಬಿ ಎಲ್. ಅವರು

ಈ ಗ್ರಂಥವನ್ನು ಆಮೂಲಾಗ್ರವಾಗಿ ಶೋಧಿಸಿ, ಉತ್ತಮವಾದ ಮತ್ತು ಅಮೂಲ್ಯವಾದ ಬುದ್ಧಿವಾದವನ್ನು ಇತ್ತು, ಕೃಪಾಪೂರಿತ ಅಭಿಪ್ರಾಯ ವನ್ನು ಸೂಚಿಸಿದ್ದಕ್ಕಾಗಿ, ಇವರಿಗೆ ಗ್ರಂಥಕರ್ತನು ತನ್ನ ಭಕ್ತಿಪುರಸ್ಸರ ವಾದ ವಂದನೆಗಳನ್ನು ಅರ್ಪಿಸುವನು

ಶ್ರೀಮಾನ್ ಗೊರೂರು ರಾಮಸ್ವಾಮ್ಯೈಯ್ಯಂಗಾರ್ಯರು ಈ ಗ್ರಂಥದ ಹಸ್ತಪ್ರತಿಯನ್ನು ಆಮೂಲಾಗ್ರವಾಗಿ ಶೋಧಿಸಿ ಅದರ ಶೈಲಿಯನ್ನು ಬಹುವಾಗಿ ಕ್ರಮಪಡಿಸಿರುವರು ಈ ಗ್ರಂಥ ರಚನೆಗೆ ಅವರ ಉದಾರ ಸಹಾಯವೂ ಮತ್ತು ಉತ್ತೇಜನವೂ ದೊರೆಯದಿದ್ದರೆ, ಇಷ್ಟು ಜಾಗ್ರತೆ ಗ್ರಂಥವು ಹೊರಬೀಳಲು ಅವಕಾಶವಿರುತ್ತಿರಲಿಲ್ಲ ಶ್ರೀಮಾನ್ ಸಿ ಎಸ್ ಶ್ರೀನಿವಾಸರಾವ್, ಬಿ ಎ, ಬಿ ಟಿ ಅವರು ಅನೇಕ ಉತ್ತಮ ಸಲಹೆ ಗಳನ್ನು ಇತ್ತು, ಗ್ರಂಥದ ಅಚ್ಚುಪ್ರತಿಯನ್ನು ಶೋಧಿಸಿರುವರು ಅನೇಕ ಮಹನೀಯರು ಈ ಗ್ರಂಥವನ್ನು ಅವಲೋಕಿಸಿ, ತಮ್ಮ ಅಮೂಲ್ಯವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ ಇವರೆಲ್ಲರಿಗೂ ಮತ್ತು ಮುದ್ರಣಕಾರ್ಯವನ್ನು ಅಂದವಾಗಿಯೂ ಮತ್ತು ಜಾಗ್ರತೆ ಯಾಗಿಯೂ ಮುಗಿಸಿಕೊಟ್ಟ ಬೆಂಗಳೂರು ಪ್ರೆಸ್ ಸೂಪರಿಂಟೆಂಡೆಂಟ ರವರಿಗೂ ಅನೇಕವಾದ ವಂದನೆಗಳು

**ಡಿ. ಕೃಷ್ಣೈಯ್ಯಂಗಾರ್**

## ವಿಷಯ ಸೂಚಿ

# ರೈತನ ಪ್ರಪಂಚ

## ೧. ಪೀಠಿಕಾ ಪ್ರಕರಣ

ಮಾನವನಿಗೆ ಅತ್ಯವಶ್ಯಕವಾದದ್ದು ಆಹಾರ ಸಾಮಾನ್ಯವಾಗಿ ಆಹಾರವು, ಭೂಮಿ ಮತ್ತು ನೀರಿನ ಸಂಯೋಗದಿಂದ ಉಂಟಾಗುತ್ತದೆ ಇಂತಹ ಅವಶ್ಯಕವಾದ ಆಹಾರವನ್ನು ಹಚ್ಚಾಗಿ ಉತ್ಪತ್ತಿ ಮಾಡುವ ಕ್ರಮವೇ ವ್ಯಾವಸಾಯಿಕ ಅರ್ಥಶಾಸ್ತ್ರದ ಮುಖ್ಯ ಗುರಿಯಾಗಿದೆ (ರೈತರ ಆರ್ಥಿಕ ಜೀವನಕ್ಕೂ, ಸಾಮಾನ್ಯ ಅರ್ಥಶಾಸ್ತ್ರಕ್ಕೂ ಹತ್ತಿರ ಸಂಬಂಧ ವಿದೆ ವ್ಯಾವಸಾಯಿಕ ರಸಾಯನಶಾಸ್ತ್ರವು ಸಾಮಾನ್ಯ ರಸಾಯನಶಾಸ್ತ್ರದ ಒಂದು ಶಾಖೆಯಾಗಿರುವಂತೆ, ವ್ಯಾವಸಾಯಿಕ ಅರ್ಥಶಾಸ್ತ್ರವೂ ಕೂಡ, ಸಾಮಾನ್ಯ ಅರ್ಥಶಾಸ್ತ್ರದ ಶಾಖೆ ಎಂಬುದಾಗಿ ಹೇಳಬಹುದು ವ್ಯಕ್ತಿ ಲಾಭ, ಸಮಾಜೋನ್ನತಿ ಮತ್ತು ದೇಶಭಕ್ತಿ, ಇವುಗಳೇ ಈ ಶಾಸ್ತ್ರದ ಮುಖ್ಯ ತತ್ವಗಳು )

ನಾನಾವಿಧವಾದ ನೂತನ ಕ್ರಮಗಳನ್ನು ಜಮೀನಿನಮೇಲೆ ಪ್ರಯೋಗಮಾಡಿ, ಹಚ್ಚು ಪ್ರತಿಫಲವನ್ನು ಪಡೆಯಬೇಕೆಂಬುದು ವ್ಯವಸಾಯಶಾಸ್ತ್ರದ ಮುಖ್ಯ ಗುರಿ ಮನುಷ್ಯನು ತನ್ನ ಪ್ರಯತ್ನದಿಂದ, ಜಮೀನಿನ ಪ್ರತಿಫಲವನ್ನು ತಾನು ಪಡೆಯುವುದಲ್ಲದೆ, ಅದನ್ನು ಇತರರಿಗೂ ಹಂಚುತ್ತಾನೆ ಇದರಿಂದ ವ್ಯವಸಾಯವು ಇತ್ತೀಚೆಗೆ ಕೆಲವು ದೇಶಗಳಲ್ಲಿ ಜನರ ಮುಖ್ಯ ವೃತ್ತಿಯಾಗುತ್ತಿದೆ ಈ ವೃತ್ತಿಯನ್ನು ಅವಲಂಬಿಸು ವವರಿಗೆ ತಾವೇ ಸ್ವತಂತ್ರವಾಗಿ, ಉತ್ತಮವಾದ ಕ್ರಮಗಳನ್ನು ಕಂಡು ಹಿಡಿದು, ಜಮೀನಿನಿಂದ ಹೆಚ್ಚು ಸಂಪಾದನೆ ಮಾಡಿ, ಸುಖವಾದ ಜೀವನ ನಡೆಸಲು ಹೆಚ್ಚು ಅವಕಾಶವಿರುವುದು

ವ್ಯಾವಸಾಯಿಕ ಅರ್ಥಶಾಸ್ತ್ರವು, ಮೊದಲು ರೈತರು ತಮ್ಮ ಲಾಭ ನಷ್ಟವನ್ನು ಹಚ್ಚು ಗಣನೆಗೆ ತಂದುಕೊಳ್ಳುವಂತೆ ಮಾಡಬೇಕು

# ರೈತನ ಪ್ರಪಂಚ

## ೧. ಪೀಠಿಕಾ ಪ್ರಕರಣ

ಮಾನವನಿಗೆ ಅತ್ಯಾವಶ್ಯಕವಾದದ್ದು ಆಹಾರ. ಸಾಮಾನ್ಯವಾಗಿ ಆಹಾರವು, ಭೂಮಿ ಮತ್ತು ನೀರಿನ ಸಂಯೋಗದಿಂದ ಉಂಟಾಗುತ್ತದೆ. ಇಂತಹ ಅವಶ್ಯಕವಾದ ಆಹಾರವನ್ನು ಹೆಚ್ಚಾಗಿ ಉತ್ಪತ್ತಿ ಮಾಡುವ ಕ್ರಮವೇ ವ್ಯಾವಸಾಯಿಕ ಅರ್ಥಶಾಸ್ತ್ರದ ಮುಖ್ಯ ಗುರಿಯಾಗಿದೆ. (ರೈತರ ಆರ್ಥಿಕ ಜೀವನಕ್ಕೂ, ಸಾಮಾನ್ಯ ಅರ್ಥಶಾಸ್ತ್ರಕ್ಕೂ ಹತ್ತಿರ ಸಂಬಂಧವಿದೆ. ವ್ಯಾವಸಾಯಿಕ ರಸಾಯನಶಾಸ್ತ್ರವು ಸಾಮಾನ್ಯ ರಸಾಯನಶಾಸ್ತ್ರದ ಒಂದು ಶಾಖೆಯಾಗಿರುವಂತೆ, ವ್ಯಾವಸಾಯಿಕ ಅರ್ಥಶಾಸ್ತ್ರವೂ ಕೂಡ, ಸಾಮಾನ್ಯ ಅರ್ಥಶಾಸ್ತ್ರದ ಶಾಖೆ ಎಂಬುದಾಗಿ ಹೇಳಬಹುದು. ವ್ಯಕ್ತಿ ಲಾಭ, ಸಮಾಜೋನ್ನತಿ ಮತ್ತು ದೇಶಭಕ್ತಿ, ಇವುಗಳೇ ಈ ಶಾಸ್ತ್ರದ ಮುಖ್ಯ ತತ್ವಗಳು.)

ನಾನಾವಿಧವಾದ ನೂತನ ಕ್ರಮಗಳನ್ನು ಜಮೀನಿನಮೇಲೆ ಪ್ರಯೋಗಮಾಡಿ, ಹೆಚ್ಚು ಪ್ರತಿಫಲವನ್ನು ಪಡೆಯಬೇಕೆಂಬುದು ವ್ಯವಸಾಯಶಾಸ್ತ್ರದ ಮುಖ್ಯ ಗುರಿ. ಮನುಷ್ಯನು ತನ್ನ ಪ್ರಯತ್ನದಿಂದ, ಜಮೀನಿನ ಪ್ರತಿಫಲವನ್ನು ತಾನು ಪಡೆಯುವುದಲ್ಲದೆ, ಅದನ್ನು ಇತರರಿಗೂ ಹಂಚುತ್ತಾನೆ. ಇದರಿಂದ ವ್ಯವಸಾಯವು ಇತ್ತೀಚೆಗೆ ಕೆಲವು ದೇಶಗಳಲ್ಲಿ ಜನರ ಮುಖ್ಯ ವೃತ್ತಿಯಾಗುತ್ತಿದೆ. ಈ ವೃತ್ತಿಯನ್ನು ಅವಲಂಬಿಸುವವರಿಗೆ ತಾವೇ ಸ್ವತಂತ್ರವಾಗಿ, ಉತ್ತಮವಾದ ಕ್ರಮಗಳನ್ನು ಕಂಡು ಹಿಡಿದು, ಜಮೀನಿನಿಂದ ಹೆಚ್ಚು ಸಂಪಾದನೆ ಮಾಡಿ, ಸುಖವಾದ ಜೀವನ ನಡೆಸಲು ಹೆಚ್ಚು ಅವಕಾಶವಿರುವುದು.

ವ್ಯಾವಸಾಯಿಕ ಅರ್ಥಶಾಸ್ತ್ರವು, ಮೊದಲು ರೈತರು ತಮ್ಮ ಲಾಭ ನಷ್ಟವನ್ನು ಹೆಚ್ಚು ಗಣನೆಗೆ ತಂದುಕೊಳ್ಳುವಂತೆ ಮಾಡಬೇಕು.

ಎರಡನೆಯದಾಗಿ, ತಮ್ಮ ಬಂಡವಾಳ, ದೇಹಶ್ರಮ, ಮತ್ತು ಇತರ ಯಂತ್ರೋಪಕರಣಗಳನ್ನು ಹೆಚ್ಚು ಲಾಭ ಬರುವ ರೀತಿಯಲ್ಲಿ ಉಪಯೋಗಿಸುವುದನ್ನು ಕಲಿಯಬೇಕು ಮೂರನಯದಾಗಿ, ರೈತರಿಗೆ ತಮ್ಮ ದವಸಗಳ ಮಾರಾಟದ ಬೆಲೆ, ತಾವು ಕೊಳ್ಳುವ ಯಂತ್ರಸಾಮಗ್ರಿ, ಬೀಜ, ಗೊಬ್ಬರ— ಇವುಗಳ ತಿಳಿವನ್ನು ಉಂಟುಮಾಡಿ, ಒಟ್ಟಿನಲ್ಲಿ ಅವರಲ್ಲಿ ಒಂದು ವಿಧವಾದ ವ್ಯಾಪಾರ ದೃಷ್ಟಿಯನ್ನುಂಟುಮಾಡಬೇಕು.*

ಇಂಡಿಯಾ ದೇಶವು ಬಹಳ ಹಿಂದುಳಿದಿದೆ ಎಂಬುದೇನೋ ಎಲ್ಲರಿಗೂ ತಿಳಿದಿದೆ ಇದಕ್ಕೆ ಅನೇಕ ಕಾರಣಗಳಿವೆ ಇವುಗಳಲ್ಲಿ ಜನರ ಅಜ್ಞಾನ, ವ್ಯವಸಾಯಕ್ರಮದಲ್ಲಿ ಅಶ್ರದ್ಧೆ — ಇವು ಮುಖ್ಯವಾದುವುಗಳು ನಮ್ಮ ಜನರಿಗೆ ತಮ್ಮ ಕಲಸಗಳಲ್ಲಿ ಹಚ್ಚು ಶ್ರದ್ಧ, ಶಿಸ್ತು ಇಲ್ಲ ಸಾಮಾನ್ಯವಾಗಿ ಹಳ್ಳಿಯ ರೈತರು ಒಂದು ವರ್ಷದಲ್ಲಿ ನಾಲ್ಕರಿಂದ† ಆರು ತಿಂಗಳು ಮಾತ್ರ ಕೆಲಸ ಮಾಡುತ್ತಾರೆ ನಮ್ಮ ದೇಶದ ಒಟ್ಟು ಜನಸಂಖ್ಯೆಯಲ್ಲಿ ಶೇಕಡಾ ೩೮ರಷ್ಟು ಜನಗಳು ಕೈಗಾರಿಕಯನ್ನು ಅವಲಂಬಿಸಿದ್ದರೆ, ವ್ಯವಸಾಯವನ್ನು ಶೇಕಡಾ ೭೩ರಷ್ಟು ಜನಗಳು ಅವಲಂಬಿಸಿರುವರು ಇಷ್ಟು ಹಚ್ಚು ಜನರು ವಿರಾಮಕಾಲಗಳಲ್ಲಿ ಲಾಭದಾಯಕವಾದ ಕೈಗಾರಿಕೆಗಳನ್ನು ಮಾಡುವಂತೆ ಮಾಡಿದರ, ದೇಶದ ಸಂಪತ್ತು ಹಚ್ಚುವುದಲ್ಲದೆ, ರೈತರ ಜೀವನವೂ ಉತ್ತಮವಾಗುತ್ತದ

ಸಾಮಾನ್ಯವಾಗಿ, ರೈತರ ಏಳಿಗೆಗೆ ಅವರ ಮೂಢತನವು ಒಂದು ಮುಖ್ಯ ಅಡಚಣೆ ಎಂಬುದು ಕಲವರ ಅಭಿಪ್ರಾಯವಾಗಿದೆ ಇದರಲ್ಲಿ ಹಚ್ಚು ಸತ್ಯಾಂಶವಿದೆ ರೈತರಿಗೆ ಹಿಂದಿನ ಪದ್ಧತಿಯನ್ನು ಬಿಡಲು ಇಷ್ಟವಿಲ್ಲ ಅವರು ಸಂಪ್ರದಾಯ ಪ್ರಿಯರು ಅವರ ವಿವಾಹ ಪದ್ಧತಿ, ಅವಿಭಕ್ತ ಕುಟುಂಬ, ಜಾತಿ ಪದ್ಧತಿ, ಸಮಾಜದಲ್ಲಿ ಸ್ತ್ರೀಯರ ಸ್ಥಾನ— ಇವುಗಳೆಲ್ಲಾ ಒಂದೊಂದು ರೀತಿಯಲ್ಲಿ ಅವರ ವೆಚ್ಚವನ್ನು ಹೆಚ್ಚು ಮಾಡಿ, ಬಡತನವನ್ನು ವೃದ್ಧಿಗೊಳಿಸುತ್ತಿವೆ ಆದಾಯವನ್ನೂ ಕೂಡ ಕಮ್ಮಿ ಮಾಡುತ್ತಿವೆ ಆದುದರಿಂದ, ಅವರ ಜೀವನವನ್ನು ಉತ್ತಮಪಡಿಸಿ,

---

* "Agricultural Economics" by Prof Nourse, p 3

† "Planned Economy for India", by Sir M Visvesvaraya p 32

ವ್ಯವಸಾಯಕ್ರಮವನ್ನು ವೃದ್ಧಿಪಡಿಸುವ, ಸರಿಯಾದ ಕಾರ್ಯಕ್ರಮವನ್ನು ವ್ಯವಸ್ಥೆಪಡಿಸಬೇಕು

(ಡೆನ್ಮಾರ್ಕ್ ದೇಶದ ವ್ಯವಸಾಯ ಪುನರುಜ್ಜೀವನವು ನಮ್ಮ ದೇಶಕ್ಕೆ ಒಳ್ಳೆಯ ಮಾರ್ಗದರ್ಶಕವಾಗಿದೆ (೧೮೬೪ರ ಸುಮಾರಿನಲ್ಲಿ ಉಂಟಾದ ಭಯಾನಕ ಯುದ್ಧದನಂತರ, ದೇಶದಲ್ಲೆಲ್ಲಾ ಹೊಸ ಚಳುವಳಿಯುಂಟಾಗಿ, ಜನರಲ್ಲಿ ಸ್ವದೇಶಾಭಿಮಾನವು ಹೆಚ್ಚಿತು ಇದರ ಪರಿಣಾಮವಾಗಿ ನಾನಾವಿಧವಾದ ಸಹಕಾರ ಸಂಘಗಳು ಸ್ಥಾಪಿತವಾಗಿ, ಉತ್ತಮ ಕೆಲಸ ಮಾಡಲಾರಂಭಿಸಿದುವು ಅರ್ಧ ಶತಮಾನದೊಳಗೆ ಈ ಸುಧಾರಣೆಗಳು, ದೇಶದ ಸಂಪತ್ತನ್ನು ಹೆಚ್ಚಿಸಿದ್ದಲ್ಲದೆ, ಉತ್ತಮ ಗ್ರಾಮ ಪುನರ್ರಚನೆಯ ಕೆಲಸಗಳಿಗೆ ಒಳ್ಳೆಯ ಉದಾಹರಣೆಗಳಾದುವು ವ್ಯವಸಾಯಾಭಿವೃದ್ಧಿಗೂ, (ರೈತರ ಜೀವನವನ್ನು ಉತ್ತಮಪಡಿಸುವುದಕ್ಕೂ, ದೇಶದ ಜನಗಳು ಐಕಮತ್ಯದಿಂದ, ಸಂತೋಷವಾಗಿ ಕೆಲಸಮಾಡಿದರೆ, ದೇಶದಲ್ಲಿ ಸೌಖ್ಯವನ್ನೂ, ಸಂಪತ್ತನ್ನೂ, ಹರಡಬಹುದೆಂಬ ಸತ್ಯಾಂಶವನ್ನು ಡೆನ್ಮಾರ್ಕ್ ದೇಶವು ಪ್ರಪಂಚಕ್ಕೆ ತೋರಿಸಿತೆನ್ನಬಹುದು )

(ನಮ್ಮ ದೇಶದಲ್ಲಿ ಗ್ರಾಮ ಪುನರುದ್ಧಾರಕಾರ್ಯಕ್ಕೆ ಕೈಹಚ್ಚುವ ಮೊದಲು, ಗ್ರಾಮಗಳ ನಿಜವಾದ ಸ್ಥಿತಿಯನ್ನು ತಿಳಿದುಕೊಳ್ಳಬೇಕು ರೋಗಿಯ ರೋಗವನ್ನು ಅರಿತಲ್ಲದೆ, ಅವನಿಗೆ ಔಷಧಕೊಡುವುದು ಹೇಗೆ ಸಾಧ್ಯವಲ್ಲವೋ, ಹಾಗೆಯೇ ಗ್ರಾಮಗಳ ಕಷ್ಟಸುಖಗಳನ್ನೂ, ನಿಜಸ್ಥಿತಿಯನ್ನೂ ತಿಳಿದಲ್ಲದ, ಗ್ರಾಮಜೀವನದ ಸಮಸ್ಯೆಗಳನ್ನು ಬಗೆಹರಿಸುವುದು ಸಾಧ್ಯವಲ್ಲ ನಮ್ಮ ರೈತರ ಕಷ್ಟಪರಂಪರೆಗಳನ್ನು ನಿವಾರಿಸುವುದಕ್ಕೆ ಪ್ರಯತ್ನಮಾಡುವ ಮೊದಲೇ, ಅವರ ವಾಸ್ತವಿಕ ಚಿತ್ರಗಳನ್ನು ಅರಿತುಕೊಳ್ಳಬೇಕು ಆದುದರಿಂದ, ನಮ್ಮ ಹಳ್ಳಿಗಳ ಪರಿಸ್ಥಿತಿಯನ್ನು ತಿಳಿದುಕೊಳ್ಳುವುದಕ್ಕೆ ಹಳ್ಳಿಗಳ ಆರ್ಥಿಕ ವಿಚಾರಣೆಯು ಮುಖ್ಯವಾದುದು ಅಂತಹ ವಿಚಾರಣೆಯ ಕ್ರಮವನ್ನು ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ

## ೨. ಹಳ್ಳಿಯ ಆರ್ಥಿಕ ವಿಚಾರಣೆ

ಭರತಖಂಡವು ಹಳ್ಳಿಗಳ ನಾಡು  ಒಂದಾನೊಂದು ಕಾಲದಲ್ಲಿ ಇಲ್ಲಿಯ ಹಳ್ಳಿಗಳಲ್ಲಿ ವಾಸಮಾಡುತ್ತಿದ್ದ ಜನಗಳು ಹೊರಗಿನ ಸಂಪರ್ಕವಿಲ್ಲದ, ಜೀವನದ ಎಲ್ಲಾ ಸೌಕರ್ಯಗಳನ್ನು ತಾವೇ ಏರ್ಪಡಿಸಿಕೊಳ್ಳುತ್ತಿದ್ದರು  ಪ್ರತಿಯೊಂದು ಗ್ರಾಮವೂ ಸ್ವಸಂಪೂರ್ಣವಾದ ಕೂಡಿದ ಪ್ರಜಾಧಿಪತ್ಯವೆನಿಸಿಕೊಂಡಿದ್ದಿತು  ಇವುಗಳ ಆರ್ಥಿಕ ಜೀವನದಲ್ಲಿ ಒಂದು ವಿಧವಾದ ಹಂಚಿಕ ಇದ್ದಿತು  ಆರ್ಯರ ಕಾಲದಲ್ಲಿ ಗ್ರಾಮದೇವಸ್ಥಾನ, ಗ್ರಾಮಠಾಣ, ಗ್ರಾಮತೋಪು, ಕುಂಟೆ, ಇವುಗಳಿಗಾಗಿ ಗ್ರಾಮಸ್ಥರು, ಶ್ರದ್ಧೆ ಮತ್ತು ಐಕಮತ್ಯದಿಂದ ಕೆಲಸಮಾಡುತ್ತಿದ್ದುದು ನಮಗೆ ತಿಳಿದು ಬರುವುದು  ದ್ರಾವಿಡರ ಕಾಲದಲ್ಲಿಯೂ ಇದೇ ರೀತಿಯಲ್ಲಿತ್ತು, ಗ್ರಾಮಗಳಲ್ಲಿ ವೈದ್ಯಸಹಾಯವನ್ನು ಅಶೋಕ ಚಕ್ರವರ್ತಿಯು ಕಲ್ಪಿಸಿದ್ದ ಸಂಬಂದನ್ನು ನಾವು ಶಾಸನಗಳಿಂದ ತಿಳಿಯಬಹುದು  ರೈತರು ಉಪವೃತ್ತಿಗಳನ್ನು ಕಲ್ಪಿಸಿಕೊಂಡು, ಗ್ರಾಮಗಳಲ್ಲ, ಸುಖವಾಗಿ ಜೀವನಮಾಡುತ್ತಿದ್ದರು  ನಾಯಿಂದ, ಕುಂಬಾರ, ಕಮ್ಮಾರ, ಅಗಸ, ಬಡಗಿ, ಇವರಲ್ಲಾ ಉಂಬಳಿ ಜಮೀನುಗಳನ್ನು ಅನುಭವಿಸುತ್ತಾ, ಗ್ರಾಮದ ಜನಗಳಿಗೆ ಸಹಾಯಕರಾಗಿ, ಮೈತ್ರಿಯಿಂದಿರುತ್ತಿದ್ದರು

ಗ್ರಾಮದಲ್ಲಿ, ಪ್ರತಿಯೊಬ್ಬರೂ ಬೇರೆ ಬೇರೆ ಕಸಬುಗಳನ್ನು ಅವಲಂಬಿಸಿದ್ದರೂ, ಅವರಲ್ಲಿ ಒಂದು ವಿಧವಾದ ಸಜಾತೀಯ ಬಾಂಧವ್ಯ ಮತ್ತು ಐಕಮತ್ಯ ಇದ್ದುವು  ಹಳ್ಳಿಯಲ್ಲಿದ್ದ ಛತ್ರ, ತೋಪುಗಳು, ಅಲ್ಲಿಯ ಸೊಬಗನ್ನು ಹೆಚ್ಚಿಸಿ, ಜನಗಳ ಅಭಿಮಾನವನ್ನು ಪ್ರಕಟಿಸುತ್ತಿದ್ದುವು  ಊರೊಟ್ಟಿನ ಕೆಲಸವೆಂದರೆ ಎಲ್ಲರಿಗೂ ಸಂತೋಷ, ಹೆಮ್ಮೆಯಿಂದ ಬಂದು ಕೆಲಸಮಾಡುತ್ತಿದ್ದರು  ಅಲ್ಲಿಯ ಸಮಾಜದಲ್ಲಿ ಒಂದು ವಿಧವಾದ ಕಟ್ಟು ಇದ್ದಿತು  ಪಂಚಾಯಿತಿ ತೀರ್ಮಾನಗಳು ರೈತರನ್ನು ಹತೋಟಿಯಲ್ಲಿ ಇಡುತ್ತಿದ್ದವು

ಭಾರತದ ಸಂಸ್ಕೃತಿಯು ಈ ಹೊತ್ತಿನವರೆಗೂ ಇಂತಹ ಹಳ್ಳಿಗಳನ್ನೇ ಆಶ್ರಯಿಸಿದೆ  ಅನೇಕ ಇತರ ದೇಶಗಳ ಪುರಾತನ ಸಂಸ್ಕೃತಿಗಳು

ಪರಕೀಯರ ಧಾಳಿಯಿಂದ ನಾಶವಾದರೂ, ನಮ್ಮ ಸಂಸ್ಕೃತಿಯು ಇನ್ನೂ ಹಾಳಾಗಿಲ್ಲ ಅನೇಕ ಚಕ್ರಾಧಿಪತ್ಯಗಳು ಏರಿ ಇಳಿದರೂ, ಅನೇಕ ಇತರ ಸಂಸ್ಕೃತಿಗಳು ನಮ್ಮ ದೇಶದಲ್ಲಿ ಬೇರೂರಿದರೂ, ನಮ್ಮ ಸಂಸ್ಕೃತಿಯು ಇನ್ನೂ ಉಳಿದಿದೆ ಹಿಂದಲ ಕಾಲದಲ್ಲಿ ಹಳ್ಳಿಯ ಗಾನ, ಕುಣಿತ, ಬೈಲಾಟ, ಹಬ್ಬ — ಇವುಗಳೆಲ್ಲಾ ಜನರನ್ನು ಹುರಿದುಂಬಿಸುತ್ತಿದ್ದವು ಜನರು ಸಂತೋಷದಿಂದ ಜೀವಿಸುತ್ತಿದ್ದರು ಜನರು ತಮ್ಮ ಪಿತ್ರಾರ್ಜಿತ ವಾದ ಕಸಬುಗಳನ್ನು ಕೈಗೊಂಡು, ದೃಢಕಾಯರಾಗಿ, ದೀರ್ಘಕಾಲ, ಬದುಕುತ್ತಿದ್ದರು ಜೀವನದಲ್ಲಿ ಅವರಿಗೆ ಜುಗುಪ್ಸೆ ಇರುತ್ತಿರಲಿಲ್ಲ ಒಟ್ಟಿನಲ್ಲಿ, ಪ್ರತಿಯೊಂದು ಹಳ್ಳಿಯೂ, ಸ್ವಸಂಪೂರ್ಣವಾಗಿ, ಸಂತೋಷ ಭರಿತವಾದ ಒಂದು ದೊಡ್ಡ ಸಂಸಾರದಹಾಗೆ ಇದ್ದಿತೆನ್ನಬಹುದು

ಇಷ್ಟು ಸಂತೋಷಭರಿತವಾದ, ಸ್ವಸಂಪೂರ್ಣವಾದ ಹಳ್ಳಿಗಳು ಒಂದೆರಡು ಶತಮಾನಗಳಿಂದೀಚೆಗೆ ಕಳೆಗುಂದಿ, ಆರ್ಥಿಕ ಸ್ವಾತಂತ್ರ್ಯ ವನ್ನು ಕಳೆದುಕೊಳ್ಳುತ್ತಾ ಇವೆ ಈಗ ನಮ್ಮ ಹಳ್ಳಿಗಳು ಬಡತನಗಳ ತವರುಮನೆ ಬೆಳಗಿನಿಂದ ಸಾಯಂಕಾಲದವರೆಗೆ ದುಡಿದರೂ ರೈತರಿಗೆ ಹೊಟ್ಟೆ ತುಂಬ ಆಹಾರವಿಲ್ಲ ಮೈತುಂಬ ಬಟ್ಟೆ ಇಲ್ಲ ವಾಸಿಸಲು ಯೋಗ್ಯವಾದ ಮನೆಗಳಿಲ್ಲ ಹಳ್ಳಿಗಳ ಬಡತನವನ್ನು ವರ್ಣಿಸುವುದು ಅಸಾಧ್ಯವಾಗಿದೆ ನಮ್ಮ ದೇಶದ ಹಳ್ಳಿಗಳಲ್ಲಿರುವಷ್ಟು ದಾರಿದ್ರ್ಯವು, ಪ್ರಪಂಚದ ಮತ್ತಾವ ಭಾಗದಲ್ಲಿಯೂ ಇಲ್ಲವೆಂದು ಧೈರ್ಯವಾಗಿ ಹೇಳಬಹುದು ನಮ್ಮ ರೈತರು, "ಋಣದಲ್ಲಿಯೇ ಹುಟ್ಟಿ, ಋಣ ದಲ್ಲಿಯೇ ಬೆಳೆದು, ಋಣದಲ್ಲಿಯೇ ಮಡಿಯುತ್ತಾರೆ"

ಅಹನ್ಯಹನಿ ಕಾಲಕ್ಷೇಪದಿಂದ ಜೀವಿಸುತ್ತಿರುವ ಬಡರೈತರಿಗೆ ರೋಗಾದಿ ಉಪದ್ರವಗಳು ಬಂದರೆ, ಅವರು ಉಪವಾಸವಿರಬೇಕಾಗು ತ್ತದೆ ಈ ಜನಗಳ ಆರ್ಥಿಕಾಭ್ಯುದಯವು, ಅವರ ದೇಹದಾರ್ಢ್ಯವ ಕಸುಬುಗಳನ್ನೇ ಅವಲಂಬಿಸಿರುವುದು ನಮ್ಮ ರೈತರ ಆರ್ಥಿಕೋನ್ನತಿಗೂ ಮತ್ತು ದೇಶದ ಆರೋಗ್ಯಕ್ಕೂ ಬಹಳ ಹತ್ತಿರ ಸಂಬಂಧವಿದೆ ಎಂಬುದಾಗಿ ೧೯೩೦ನೆಯ ಇಸವಿಯ ವ್ಯವಸಾಯ ಸಮಿತಿಯವರು ಅಭಿಪ್ರಾಯ ಪಟ್ಟಿದ್ದಾರೆ ನಮ್ಮ ದೇಶದಲ್ಲಿ ಬೆಳೆಯುತ್ತಿರುವ ರೈತರ ಆರ್ಥಿಕ

ದೌರ್ಬಲ್ಯಕ್ಕೆ, ಇಲ್ಲಿಯ ನಿವಾರಿಸಲಸಾಧ್ಯವಾದ ರೋಗಗಳೇ ಕಾರಣವೆಂದು ೧೯೩೬ನೆಯ ಇಸವಿಯ ಅಖಿಲ ಭಾರತ ವೈದ್ಯವಿದ್ಯಾ ಸಂಘದವರು ಹೇಳಿದ್ದಾರೆ (ನಮ್ಮ ಹಳ್ಳಿಯ ಜನಗಳಲ್ಲಿ ಈಗ ಶಕ್ತಿಯಿಲ್ಲ, ಉತ್ಸಾಹವಿಲ್ಲ ಅವಿದ್ಯೆ, ಅಜ್ಞಾನ, ಅಹಂಕಾರ, ಇವುಗಳೆಲ್ಲಾ ಜನರನ್ನು ಆವರಿಸಿವೆ ಹಿಂದಿನ ಮೂಢಾಚಾರಗಳನ್ನೇ, ಜನರು ಅಜ್ಞಾನದಿಂದ ಅನುಸರಿಸುತ್ತಿರುವರು ಮೌಢ್ಯವು, ಆರ್ಥಿಕ ಜೀವನವನ್ನು ಉತ್ತಮಪಡಿಸುವುದಕ್ಕೆ ಅವಕಾಶ ಕೊಡುತ್ತಿಲ್ಲ ಅವರು ಅಹಂಕಾರಿಗಳಾದುದರಿಂದ ತಮಗೆ ಸಹಾಯ ಮಾಡಬರುವ ನಿಪುಣರಿಗೆ ಅವರು ಆಸ್ಪದ ಕೊಡುತ್ತಿಲ್ಲ)

ಬಾದರಾಯಣ ಕಾಲದ ವ್ಯವಸಾಯಕ್ರಮ, ಸಮಾಜದ ಕಟ್ಟು ಸಂಪ್ರದಾಯ, ಜಮೀನು ಹಂಚುವಳಿಯಲ್ಲಿ ನ್ಯೂನತೆ, ಬಡತನ—ಇವುಗಳೆಲ್ಲಾ ವ್ಯವಸಾಯಾಭಿವೃದ್ಧಿಗೆ ಕಂಟಕಗಳಾಗಿವೆ ಇವುಗಳ ಜೊತೆಗೆ ರೋಗಾದಿಗಳು ಒಂದೊಂದು ಸಲವೂ ಅನೇಕ ಜೀವಗಳನ್ನು ತೆಗೆದುಕೊಳ್ಳುತ್ತವೆ ಪ್ಲೇಗು, ಕಾಲರಾ ರೋಗಗಳಂತೂ ಒಟ್ಟಿಗೇ ಜನರನ್ನು ಗುಡಿಸಿಬಿಡುತ್ತವೆ

ಹಳ್ಳಿಗಳಲ್ಲಿ ಜನರಿಗೆ ಪುಷ್ಟಿಯಾದ ಆಹಾರವೇ ಇಲ್ಲ ಪುಷ್ಟಿಯಾದ ಆಹಾರದ ಮಾತು ಹಾಗಿರಲಿ, ಹೊಟ್ಟೆ ತುಂಬ ಆಹಾರವಿಲ್ಲ ಅವರ ಒಟ್ಟು ವರಮಾನದಲ್ಲಿ ಶೇಕಡಾ ಎಂಭತ್ತರಷ್ಟನ್ನು ಆಹಾರಕ್ಕೇ ಉಪಯೋಗಿಸಿದರೂ ಕೂಡ, ಅವರಿಗೆ ಹೊಟ್ಟೆ ತುಂಬುವಷ್ಟು ಆಹಾರವು ದೊರೆಯುವುದಿಲ್ಲ ಸಾಮಾನ್ಯವಾಗಿ ಒಬ್ಬ ರೈತನು ಒಂದು ವರ್ಷಕ್ಕೆ, ಅವನ ಆಹಾರಕ್ಕಾಗಿಯೇ ಒಂದು ನೂರು ರೂಪಾಯಿಗಳನ್ನು ಖರ್ಚುಮಾಡಬೇಕಾಗುವುದು ಅವನ ಆದಾಯವೇ ವರ್ಷಕ್ಕೆ ಐವತ್ತು ರೂಪಾಯಿಗೆ ಮೇಲ್ಪಟ್ಟು ಇಲ್ಲದೇ ಇರುವಾಗ, ಅಷ್ಟು ಹಣವನ್ನು ಅವನು ಎಲ್ಲಿಂದ ತಂದಾನು! ರೈತನು ತಾನು ಬೆಳೆದ ಕಾಯಿಪಲ್ಯ, ಹಣ್ಣು—ಇವುಗಳನ್ನು ತಾನು ಉಪಯೋಗಿಸದೆ, ನಗರಗಳಿಗೆ ಸಾಗಿಸುತ್ತಾನೆ ಹಾಲು-ತುಪ್ಪಗಳನ್ನೂ ಕೂಡ ಉಪಯೋಗಿಸುವುದಿಲ್ಲ ಹೀಗಿರುವಲ್ಲಿ ಅವನಿಗೆ ಪುಷ್ಟಿಯಾದ ಆಹಾರವು ಎಲ್ಲಿಂದ ಬರಬೇಕು?

ಇಂದಿನ ಹಳ್ಳಿಯ ಜೀವನವನ್ನು ಇನ್ನೂ ಹೆಚ್ಚಾಗಿ ವಿಮರ್ಶೆ ಮಾಡಿ ನೋಡಿದರೆ, ಅಲ್ಲಿಯ ವಾಸವೇ ಅಸಹ್ಯವಾಗಿ ತೋರುವುದು ಪವಿತ್ರವಾಗಿದ್ದ ದೇವಸ್ಥಾನಗಳು ಅನೇಕ ಸ್ಥಳಗಳಲ್ಲಿ ಪಾಳುಬಿದ್ದಿವೆ ಪುರಾಣ, ಹರಿಕಥೆ, ಯಕ್ಷಗಾನ—ಇವುಗಳಿಗೆ ಮಾತೃಸ್ಥಾನವಾಗಿದ್ದ ಹಳ್ಳಿಗಳಲ್ಲಿ, ಇವು ಯಾವುವೂ ಕಾಣುವುದಿಲ್ಲ ಎಲ್ಲವೂ ಹಾಳಾಗಿವೆ ಆಧುನಿಕ ನಾಗರಿಕತೆಯ ಸಂಪರ್ಕದಿಂದ, ಅವರು ಹಳೆಯ ಸಂಪ್ರದಾಯಗಳನ್ನು ಬಿಡುತ್ತಿದ್ದಾರೆ ಹೊಸ ಉಪಕರಣಗಳು ಅವರಿಗೆ ಸಿಕ್ಕುತ್ತಿಲ್ಲ, ಸಿಕ್ಕುವ ಹಾಗೂ ಇಲ್ಲ ನಮ್ಮ ಹಳ್ಳಿಯವರು ಹಳೆಯ ಹಣತೆಯನ್ನು ಈಗ ಉಪಯೋಗಿಸುತ್ತಿಲ್ಲ ವಿದ್ಯುಚ್ಛಕ್ತಿ ದೀಪಗಳು ಅವರೆಲ್ಲರಿಗೂ ಸಿಕ್ಕುವುದಿಲ್ಲ ಈ ವಿಧವಾದ ಇಕ್ಕಟ್ಟಿನಲ್ಲಿ ಸಿಕ್ಕಿ, ಅವರು ಬಹಳ ಶೋಚನೀಯ ಸ್ಥಿತಿಯಲ್ಲಿದ್ದಾರೆ

ಇತಿಹಾಸಕರು ಯಾವ ಹಳ್ಳಿಯ ವಾಸವನ್ನು ಸ್ವರ್ಗಸಮಾನವೆಂದು ಸಾರಿದ್ದರೋ, ಅಂತಹ ಹಳ್ಳಿಗಳು ಈಗ ಪಾಪಕೂಪಗಳಾಗಿ, ಅಶಕ್ತರಿಗೂ, ವೃದ್ಧರಿಗೂ, ಅಬಲೆಯರಿಗೂ ಆವಾಸಸ್ಥಾನಗಳಾಗಿವೆ ಆಧುನಿಕ ನಾಗರಿಕತೆಗೆ ಮನಸೋತು, ಹಳ್ಳಿಯ ತರುಣರು, ನಗರಗಳಿಗೆ ಹೋಗಿ ನೆಲಸುತ್ತಿದ್ದಾರೆ ವಿದ್ಯಾವಂತರೂ, ದೃಢಾಂಗರೂ, ಸುಸಂಸ್ಕೃತರೂ ಆದ ಹಳ್ಳಿಯ ತರುಣರಿಗೆ, ಹುಟ್ಟಿದ ಊರು ಅಸಹ್ಯವಾಗುತ್ತಿದೆ ಹಳ್ಳಿಗಳಿಗೆ ಹೋಗಬೇಕೆಂದರೇ ಅವರಿಗೆ ಬೇಜಾರು ಹೀಗಿರುವಾಗ ಹಳ್ಳಿಗಳು ಹೇಗೆ ಉದ್ಧಾರವಾಗಬೇಕು ? ಕಷ್ಟಪಟ್ಟು ದುಡಿಯುತ್ತಿರುವ ಅವರ ಸೋದರ ಸೋದರಿಯರು ಹೇಗೆ ಅಭಿವೃದ್ಧಿ ಹೊಂದಬೇಕು ? ಪುರಾತನ ಪ್ರಸಿದ್ಧವಾದ ಅವರ ಸಂಸ್ಕೃತಿಯು ಪಾಶ್ಚಾತ್ಯ ನಾಗರಿಕತೆಯ ಧಾಳಿಯಿಂದ ಹೇಗೆ ತಪ್ಪಿಸಿಕೊಂಡು ಉಳಿಯಬೇಕು ?

ಈ ವಿಚಾರಗಳನ್ನು ನಾವು ವಿಮರ್ಶಿಸಬೇಕು ದೇಶದ ಜನಸದ ಪರಿಗಣನೆಯ ಪಟ್ಟಿಯನ್ನು ನೋಡಿದರೆ, ಹಳ್ಳಿಯ ಜನರು ಹೇಗೆ ನಗರಗಳನ್ನು ಸೇರುತ್ತಿದ್ದಾರೆಂಬುದು ಮುಂದಟ್ಟಾಗುವುದು ಮೈಸೂರು ಸಂಸ್ಥಾನದ ೧೯೨೧ನೆಯ ಇಸವಿಯ ಸೆನ್ಸಸ್ ಲೆಕ್ಕದ ಪ್ರಕಾರ, ಒಂದು ಸಾವಿರ ಜನಕ್ಕೆ ೧೪೮ರಂತೆ ಇದ್ದ ನಗರವಾಸಿಗಳ ಸಂಖ್ಯೆಯು ೧೯೩೧ರಲ್ಲಿ

ಗೀಂಕ್ಕೆ ಏರಿದೆ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ವಾಸಮಾಡುವ ಜನಗಳ ಜನ್ಮಸ್ಥಳವನ್ನು ವಿಚಾರಿಸಿದರೆ, ಇದು ಚೆನ್ನಾಗಿ ವ್ಯಕ್ತವಾಗುವುದು ಇದೇ ರೀತಿಯಲ್ಲಿ ಇಂಡಿಯಾ ದೇಶದ ಪ್ರತಿಯೊಂದು ಪ್ರಾಂತದಲ್ಲಿಯೂ ನಡೆಯುತ್ತಾ ಇದೆ ಹೀಗೆ ಜನರು ತಮ್ಮ ಗ್ರಾಮಗಳನ್ನು ಬಿಟ್ಟು, ನಗರಗಳನ್ನು ಸೇರುತ್ತಾ ಬಂದರೆ, ಕಾಲಾನುಕ್ರಮದಲ್ಲಿ ಅನೇಕ ಗ್ರಾಮಗಳು ನಾಶವಾಗುವುದಲ್ಲದೆ, ಅಲ್ಲಿಯ ಜೀವನವೂ ಕೂಡ ಅಸಹ್ಯ ವಾಗುವುದು

ಪಾಶ್ಚಾತ್ಯ ದೇಶಗಳಲ್ಲಿ ಕೂಡ, ಹಳ್ಳಿಯ ಜನಗಳು ನಗರಗಳನ್ನು ಸೇರುತ್ತಿದ್ದಾರೆ "ಹಳ್ಳಿಗಳಲ್ಲಿ ಜನಗಳಿಗ ಸೌಖ್ಯವಿಲ್ಲ, ಅನುಕೂಲ ವಿಲ್ಲ, ವಾಸಿಸುವುದಕ್ಕೆ ಸರಿಯಾದ ಮನೆಗಳಿಲ್ಲ ಆಹಾರ ಮತ್ತು ಸರಿಯಾದ ನೆರೆ ಮೊದಲೇ ಇಲ್ಲ ಹೀಗಿರುವಾಗ ಅವರು ಅಭಿವೃದ್ಧಿ ಯಾಗುವುದೆಂತು" ಎಂಬದಾಗಿ ಹನ್ರಿಫ್ರುಲ್ಸ್ ಎಂಬವರು ಬರಯುತ್ತಾರ ಅಮೇರಿಕಾ ದೇಶದ ಸಂಯುಕ್ತ ರಾಷ್ಟ್ರದ ಹಳ್ಳಿಗಳಲ್ಲಿ ಅಲ್ಲಿಯ ಜನರ ಬಡತನ, ನೀರಸವಾದ ಸನ್ನಿವೇಶ, ಅನಾರೋಗ್ಯ ಜೀವನ ಮತ್ತು ವಿದ್ಯಾಭ್ಯಾಸಕ್ಕ ಅಡಚಣೆ — ಇವುಗಳು ಹಳ್ಳಿಯವರು ನಗರಗಳಿಗ ಹೋಗಿ ನೆಲಸುವಂತ ಮಾಡುತ್ತಿವೆ ಎಂಬದಾಗಿ, ಆ ದೇಶದ ಆರ್ಥಿಕ ಸಮಿತಿಯವರು ಅಭಿಪ್ರಾಯಪಟ್ಟಿದ್ದಾರ

ಪಾಶ್ಚಾತ್ಯರ ದೃಷ್ಟಿಯಿಂದಲೇ ನಾಗರಿಕರಾಗಿ ಮುಂದಾಗಿರುವ ದೇಶಗಳಲ್ಲೇ ಹೀಗಿರುವಾಗ, ನಮ್ಮ ದೇಶದ ಹಳ್ಳಿಗಳ ಸ್ಥಿತಿಯನ್ನು ವಿವರಿಸಬೇಕಾಗಿಯೇ ಇಲ್ಲ ನಮ್ಮ ಹಳ್ಳಿಗಳಲ್ಲಿ ಕುಡಿಯಲು ಹಸನಾದ ನೀರಿಲ್ಲ ಗಾಳಿ ಬೆಳಕಿಗೆ ಅನುಕೂಲವಾದ ಮನೆಗಳಿಲ್ಲ ಸಾಂಕ್ರಾಮಿಕ ರೋಗಗಳು ರೈತರನ್ನು ಪೀಡಿಸುತ್ತಿವೆ ಬಡತನವೂ, ಸಾಲದ ಹೊರೆಯೂ, ಅವರನ್ನು ನಿರುತ್ಸಾಹಿಗಳನ್ನಾಗಿ ಮಾಡುತ್ತಿವೆ ಇವುಗಳೆಲ್ಲ ಕ್ಕಿಂತಲೂ, ಹೆಚ್ಚಾಗಿ ಅವರು ನಿರಕ್ಷರಕುಕ್ಷಿಗಳು ಅಜ್ಞಾನವು ಅವರನ್ನು ಸದಾ ಆವರಿಸಿದೆ ನಮ್ಮ ದೇಶವು ಅಭಿವೃದ್ಧಿಯಾಗಬೇಕಾದರ, ಮೊದಲು ನಮ್ಮ ಹಳ್ಳಿಗಳ ಉದ್ಧಾರವಾಗಬೇಕು

ವ್ಯವಸಾಯವೇ ಪ್ರಧಾನ ವೃತ್ತಿಯಾಗಿರುವ ನಮ್ಮ ದೇಶದಲ್ಲಿ,

ನೂರಕ್ಕೆ ಎಂಭತ್ತು ಮಂದಿ ವ್ಯವಸಾಯದಿಂದಲೇ ಜೀವನ ಮಾಡುತ್ತಿದ್ದಾರೆ "ಒಂದು ಹಳ್ಳಿಯ ಉದಾಹರಣೆಯನ್ನು ನೋಡಿ ಒಬ್ಬ ರೈತನ ವರಮಾನ ಸುಮಾರು ೧೧೪ ರೂಪಾಯಿಗಳು ಅವನಿಗೆ ಜೀವನಕ್ಕೆ ಬೇಕಾಗಿರುವ ಕನಿಷ್ಟ ಮೊಗಲಗು ೧೩೬ ರೂಪಾಯಿಗಳು ಅವನ ಸಾಲ ೧೮೭ ರೂಪಾಯಿಗಳು ಭರತಖಂಡದಲ್ಲಿ ಸಾಗುವಳಿಯಾಗುತ್ತಿರುವ ಜಮೀನು ಇಲ್ಲಿಯ ರೈತರಿಗೆ ಸಾಲದು ಪ್ರತಿ ರೈತನಿಗೂ ಸುಮಾರು ಒಂದೂವರೆ ಎಕರೆ ಬರುತ್ತದೆ ಈ ೬೦ ಗುಂಟೆಯಲ್ಲಿ, ಅವನ ತೋಟ, ಗದ್ದೆ, ಹೊಲ, ಇವುಗಳೆಲ್ಲಾ ಅಡಗಿವೆ" ಎಂಬದಾಗಿ ನಮ್ಮ ದೇಶದ ಕೇಂದ್ರ ವ್ಯವಸಾಯ ಪರಿಶೀಲನಾ ಸಮಿತಿಯ ಉಪಾಧ್ಯಕ್ಷರಾಗಿದ್ದ ಸರ್ ಟಿ ವಿಜಯರಾಘವಾಚಾರ್ಯರು ಹೇಳಿದ್ದಾರೆ *

ನಮ್ಮ ಗ್ರಾಮಗಳ ರೈತರ ದುರವಸ್ಥೆಯನ್ನು ಇನ್ನೊಬ್ಬ ನಿಪುಣರು ಹೀಗೆ ವರ್ಣಿಸಿದ್ದಾರೆ —

"ಮುಂಗಾರು ಮಳೆ ಒಂದೆರಡು ಹದ ಬಿದ್ದಮೇಲೆ, ರೈತರು ತಮ್ಮ ಭೂಮಿಯನ್ನು ಉತ್ತು ಹದಮಾಡಿ ಬಿತ್ತುತ್ತಾರೆ ಪೈರೇನೋ ಚೆನ್ನಾಗಿ ಬರುತ್ತದೆ ಆದರೆ ಮಳೆಯು ಕಾಲಕ್ಕೆ ಬರದೆ, ಪೈರು ಒಣಗಿ, ರೈತರಿಗೆ ನಷ್ಟವಾಗುತ್ತದೆ ಮಳೆಯು ಹೀಗೆ ಕ್ರಮತಪ್ಪಿ ಬರುವುದರಿಂದ, ಅವರು ಉಪಯೋಗಿಸಿದ ಗೊಬ್ಬರವು ಫಲಕಾರಿಯಾಗುವುದಿಲ್ಲ ಮಳೆ, ಗೊಬ್ಬರ, ಇವು ಇಲ್ಲದುದರಿಂದಲೂ ಅಥವಾ ಫಲಕಾರಿಯಾಗದುದರಿಂದಲೂ, ಇತರ ದೇಶದವರು ತೆಗೆಯುವ ಬೆಳೆಯಲ್ಲಿ ಅರ್ಧ ಅಥವಾ ಮೂರನೇ ಒಂದು ಭಾಗ ಕೂಡ ನಮ್ಮ ರೈತನಿಗೆ ಲಭಿಸುವುದಿಲ್ಲ ಆದುದರಿಂದ ನಮ್ಮ ದೇಶವು ಐಶ್ವರ್ಯದಿಂದ ಬೆಳಗಬೇಕಾದರೆ ಮೊದಲು ವ್ಯವಸಾಯವು ಅಭಿವೃದ್ಧಿಯಾಗಬೇಕು ವ್ಯವಸಾಯವು ಅಭಿವೃದ್ಧಿಯಾಗಬೇಕಾದರೆ ಗೊಬ್ಬರ, ನೀರು ಕ್ರಮವಾಗಿ ಒದಗುವ ವ್ಯವಸ್ಥೆಯಾಗಬೇಕು"† ಆಗ ನಮ್ಮ ರೈತನು ಬದುಕುತ್ತಾನೆ ಹಳ್ಳಿಗಳು ಅಭಿವೃದ್ಧಿಯಾಗುತ್ತವೆ

* "Speech at Bengal Chamber of Commerce," by Sir T V Acharya on 25 1 1937

† 'Speech at the Civil Service Association", by Dewan Bahadur N N Iyengar, Chief Engineer, Mysore, June 1936

ಒಟ್ಟಿನಲ್ಲಿ ಹೇಳುವುದಾದರೆ, ನೂರಾರು ವರ್ಷಗಳಿಂದ ನಮ್ಮ ದೇಶದ ರೈತರ ಸೂರೆಯಾಗುತ್ತಾ ಇದೆ ಅವನ ಶಕ್ತಿ, ಸಹನೆ, ತ್ರಾಣ, ಎಲ್ಲವೂ ಕೊನೆಗೆ ಬಂದಿವೆ ಬುದ್ಧಿ ಮಂಕಾಗಿದೆ ಮೈ ನಿತ್ರಾಣವಾಗಿದೆ ಇನ್ನು ಕಲವು ಕಾಲ ಹೀಗೆಯೇ ನಡೆದರೆ, ಹಳ್ಳಿಗಳು ನಾಶವಾಗುವುದರಲ್ಲಿ ಸಂದೇಹವಿಲ್ಲ ಆದರ ಇತ್ತೀಚಗ ರೈತರಲ್ಲಿ ಎಲ್ಲರೂ ಕನಿಕರಗೊಳ್ಳುತ್ತಿದ್ದಾರೆ ಅವರ ಉದ್ಧಾರಕಾರ್ಯಗಳು ಒಂದೊಂದಾಗಿ ಆರಂಭವಾಗುತ್ತಿವೆ ಅನೇಕ ಪ್ರಾಂತೀಯ ಸರಕಾರಗಳು, ದೇಶದ ಬೆನ್ನುಮೂಳೆಯಂತಿರುವ ರೈತರ ಜೀವನವನ್ನು ಉತ್ತಮಪಡಿಸುವುದಕ್ಕೆ ಪ್ರಯತ್ನಿಸುತ್ತಿವೆ "ದೇಶದ ಅಭಿವೃದ್ಧಿಯಲ್ಲಾ ಬಡ ರೈತನ ಉದ್ಧಾರದಮೇಲೆ ನಿಂತಿದೆ" ಎಂಬ ತತ್ವವು ಜನಗಳಲ್ಲಿಯೂ, ಪ್ರಭುತ್ವಗಳಲ್ಲಿಯೂ ಈಗೀಗ ಹರಡುತ್ತಿದೆ ರೈತರ ಜೀವನವು ಉತ್ತಮವಾಗಿ ಸಂಸ್ಥಾನಗಳು ಸಂಪದ್ಯುಕ್ತವಾಗಬೇಕಾದರ ಗ್ರಾಮ ಪುನರುಜ್ಜೀವನ ಕಾರ್ಯಗಳು ಚೆನ್ನಾಗಿ ನಡೆಯಬೇಕು ಇವುಗಳು ಆಚರಣೆಗೆ ಬರಬೇಕಾದರೆ, ಹಳ್ಳಿಗಳ ನಿಜಸ್ಥಿತಿಯು ಚೆನ್ನಾಗಿ ತಿಳಿಯಬೇಕು

ರೈತರ ಉದ್ಧಾರಕಾರ್ಯಗಳಿಗೆ ಸೂಕ್ತ ಸಾಧನಗಳನ್ನು ಸೂಚಿಸುವುದಕ್ಕೆ ಮುಂಚೆ, ನಮ್ಮ ಹಳ್ಳಿಗಳ ಸ್ಥಿತಿಯನ್ನು ಪರಿಶೀಲಿಸಬೇಕು ಹಳ್ಳಿಗಳಿಗೆ ಸಂಬಂಧಪಟ್ಟ ಲೆಕ್ಕಪತ್ರಗಳನ್ನು ವಿಮರ್ಶೆ ಮಾಡುವುದರಿಂದ, ಅವುಗಳ ಪರಿಸ್ಥಿತಿಯು ಸ್ವಲ್ಪಮಟ್ಟಿಗ ಮುಂದಟ್ಟಾಗಬಹುದು ಆದರೆ ನಮ್ಮ ಹಳ್ಳಿಗಳ ಅವಸ್ಥೆಯನ್ನು ತೋರಿಸುವ ಅಂಕಿಗಳ ತಃಖ್ತೆಯೂ, ಅವುಗಳನ್ನು ತಯಾರಿಸುವ ವಿಧಾನವೂ, ಅಷ್ಟು ಸಮರ್ಪಕವಾಗಿಲ್ಲ ಒಂದು ವರ್ಷದಲ್ಲಿ ಬರೆಯಲ್ಪಟ್ಟ ಅಂಕಿಗಳೇ ಸಾಮಾನ್ಯವಾಗಿ ಪ್ರತಿ ವರ್ಷದಲ್ಲಿಯೂ ಪುನರುಚ್ಚಾರವಾಗುತ್ತಿವೆ ಉತ್ತಮ ಅಂಕಿಗಳ ತಃಖ್ತೆಯ ಮಹತ್ವವು ನಮ್ಮ ಜನಗಳಿಗೆ ತಿಳಿದಿಲ್ಲ "ಒಟ್ಟಿನಲ್ಲಿ, ಜಮೀನಿನ ಒಟ್ಟು ಹುಟ್ಟುವಳಿಯ ವಿಷಯದಲ್ಲಾಗಲಿ, ಅಥವಾ ವ್ಯವಸಾಯದಿಂದ ಉಂಟಾಗುವ ಆದಾಯದ ವಿಷಯದಲ್ಲಾಗಲಿ, ಈ ತಃಖ್ತೆಗಳು ಸರಿಯಾಗಿರುವುದೇ ಇಲ್ಲ"* ಎಂಬದಾಗಿ ಅರ್ಥಶಾಸ್ತ್ರ

* Report of Dr A I Bowley and D H Robertson, 1936

ವಿಮರ್ಶಕರು ಅಭಿಪ್ರಾಯಪಟ್ಟಿದ್ದಾರೆ ನಮ್ಮ ಗ್ರಾಮಗಳ ಆರ್ಥಿಕ ಜೀವನದಲ್ಲಿ ಒಂದು ವಿಧವಾದ ಹಂಚಿಕೆಯನ್ನು ಏರ್ಪಡಿಸುವುದಕ್ಕೇ ಆಗಲಿ, ಅಥವಾ ಅವುಗಳ ಅಭಿವೃದ್ಧಿಗೆ ಮುಖ್ಯವಾದ ಸಲಹೆಗಳನ್ನು ಸೂಚಿಸುವುದಕ್ಕೇ ಆಗಲಿ, ಇಂತಹ ತಃಖ್ತೆ ಅವಶ್ಯಕ ಅವುಗಳನ್ನು ಸರಿಯಾದ ರೀತಿಯಲ್ಲಿ ತಯಾರಿಸಬೇಕಾದದ್ದು ಅಗತ್ಯವಾಗಿದೆ *

ನಮ್ಮ ಹಳ್ಳಿಗಳ ಆರ್ಥಿಕೋನ್ನತಿಗೆ ಯಾವ ಸಲಹೆಯನ್ನು ಕೊಟ್ಟರೂ ಅವು ವಸ್ತುಸ್ಥಿತಿಗೆ ಅನುಗುಣವಾಗಿರಬೇಕು ಜರ್ಮನಿ, ಇಂಗ್ಲೆಂಡ್, ಅಮೇರಿಕಾ, ಜಪಾನ್ ದೇಶಗಳಲ್ಲಿ ಇಂತಹ ಅಂಕಿಗಳ ತಃಖ್ತೆಯನ್ನು (Statistics) ಬಹಳ ಜಾಗರೂಕತೆಯಿಂದಲೂ, ಸಾಮರ್ಥ್ಯದಿಂದಲೂ ತಯಾರುಮಾಡುತ್ತಿದ್ದಾರೆ ಅವುಗಳ ಸಹಾಯದಿಂದ, ಅಲ್ಲಿಯ ನಿಜವಾದ ಸ್ಥಿತಿಯನ್ನು ಕೂಡಲೇ ತಿಳಿದುಕೊಳ್ಳಬಹುದು ಆದರೆ ಭರತ ಖಂಡದಲ್ಲಿ ಅನುಕೂಲವಾದ ಅಥವಾ ನಿಜವಾದ ನೆಲೆಯನ್ನು ತೋರಿಸುವ ಲೆಕ್ಕದ ಪಟ್ಟಿಗಳು ಅಪರೂಪ ಅವುಗಳಲ್ಲಿ ಯಾವುದಾದರೂ ನ್ಯೂನತೆ ಇದ್ದೇ ಇರುವುದು "ಭರತಖಂಡದಲ್ಲಿ ಆರ್ಥಿಕ ವಿಧಾನದ ಹಂಚಿಕೆಯ ಕಾರ್ಯಕ್ರಮವನ್ನು ಕೈಗೊಳ್ಳಬೇಕಾದರೆ, ಇಲ್ಲಿಯ ವಸ್ತುಸ್ಥಿತಿಯನ್ನು ಸರಿಯಾಗಿ ತೋರಿಸುವುದಕ್ಕೆ, ಸರಿಯಾದ, ತರಪೇತಾದ ಸಂಸ್ಥೆಗಳನ್ನೇ ಏರ್ಪಡಿಸಬೇಕು" † ಎಂಬದಾಗಿ ಹಿಂದಿನ ವೈಸ್ರಾಯರು ಹೇಳಿದ್ದಾರೆ

ನಮ್ಮ ಗ್ರಾಮಗಳ ಇರುವಿಕೆಯನ್ನು ವಿಭಜನ ಮಾಡಬೇಕಾದರೆ, ವೈಯಕ್ತಿಕ ವಿಚಾರಣೆಯೇ (Personal Investigation) ಶ್ರೇಷ್ಠ ವಾದುದು ಇದರಿಂದ ನಮ್ಮ ಗ್ರಾಮಗಳ ಆರ್ಥಿಕ ವಿಚಾರಣೆ (Economic Surveys)ಯು ಬಹಳ ಚೆನ್ನಾಗಿ ನಡೆಯುವುದು ಆದರೆ ಎಲ್ಲಾ ಸಂದರ್ಭ ಗಳಲ್ಲಿಯೂ, ವೈಯಕ್ತಿಕ ತನಿಖೆಯು ಸಾಧ್ಯವಾಗಲಾರದು ಆದುದ ರಿಂದ, ಸರಿಯಾದ ಲೆಕ್ಕಪತ್ರಗಳ ಸಹಾಯವೂ ಬೇಕಾಗುತ್ತದೆ ಇನ್ನೂ ಕೆಲವು ಸಂದರ್ಭಗಳಲ್ಲಿ ಸ್ಥಳೀಯ ಜನಗಳ ಮತ್ತು ಸಂಸ್ಥೆಗಳ ವಿಚಾರಣೆ ಯಿಂದ, ತನಿಖೆಯನ್ನು ಮುಂದುವರಿಸಬೇಕಾಗುತ್ತದೆ ಗ್ರಾಮಗಳ

---

* "Planned Economy for India", by Sir M V, p 11

† 'Address', by H E the Viceroy Lord Willingdon, at the Meeting of Associated Chamber of Commerce, 8-1-34

ಆರ್ಥಿಕ ವಿಚಾರಣೆಯು ಅಲ್ಲಿಯ ನಿಜವಾದ ಜೀವನವನ್ನೂ, ಅಲ್ಲಿಯ ಪರಿಸ್ಥಿತಿಯನ್ನೂ ತೋರಿಸುವುದಾಗಿರಬೇಕು ಶೋಧನಕಾರನು, ಹಳ್ಳಿಗಳಲ್ಲಿ ಕಲವು ಕಾಲ ಇದ್ದು, ಅಲ್ಲಿಯ ಸ್ಥಿತಿಯನ್ನು ಕಣ್ಣಾರ ನೋಡಿ, ಅಲ್ಲಿಯ ವಿದ್ಯಮಾನಗಳನ್ನು ಚೆನ್ನಾಗಿ ತಿಳಿದು, ವಿಷಯಸಂಗ್ರಹ ಮಾಡಬೇಕು ಅಧಿಕಾರಿಗಳಿಂದ ಮತ್ತು ಖಾಸಗಿ ದೊಡ್ಡ ಮನುಷ್ಯರಿಂದ ವಿಶೇಷ ವರ್ತಮಾನವನ್ನು ಗಳಿಸಬೇಕು ಶೋಧನಕಾರನು, ಗ್ರಾಮದ ಸರಿಯಾದ ಜೀವನವನ್ನು ಚಿತ್ರಿಸಿ, ನಿಜವಾದ ಸಂಗತಿಗಳನ್ನೇ ಬರೆಯಬೇಕು ಯಾವ ವಿಷಯವೂ, ಅವನ ಕಲ್ಪನಾ ಶಕ್ತಿಗೆ ಸಂಬಂಧಿಸಿದ್ದಾಗಿರಕೂಡದು ಶಾಸ್ತ್ರರೀತ್ಯಾ ನಡೆಸಿದ ಆರ್ಥಿಕ ವಿಚಾರಣೆಯು, ಪೂರ್ಣವಾಗಿಯೂ, ಸಾಂಗವಾಗಿಯೂ ಇರಬೇಕು ಈ ರೀತಿಯಲ್ಲಿ ಎಲ್ಲಾ ಗ್ರಾಮಗಳ ಆರ್ಥಿಕ ವಿಚಾರಣೆ ನಡೆಸದಿದ್ದರೂ ಕೂಡ, ಒಂದೊಂದು ಭಾಗದಲ್ಲಿ ಒಂದೊಂದು ನಮೂನೆಯ ಗ್ರಾಮಗಳ ತನಿಖೆಯನ್ನು ನಡೆಸಿದರೂ, ಎಷ್ಟೋ ಪ್ರಯೋಜನವಾಗುವುದು

ಸಾಮಾನ್ಯವಾಗಿ ಹಳ್ಳಿಯ ಆರ್ಥಿಕ ವಿಚಾರಣೆ ನಡೆಸುವುದಕ್ಕೆ ಎರಡು ವಿಧಾನಗಳಿವೆ ಒಂದು, ದಕ್ಷಿಣ ಇಂಡಿಯಾ ದೇಶದಲ್ಲಿ ಡಾಕ್ಟರ್ ಮನ್‌ರವರು ನಡೆಸಿರುವ ವಿಚಾರಣೆಯ ರೀತಿ ಇನ್ನೊಂದು, ಮಾ॥ ಡಾರ್ಲಿಂಗ್ ಅಥವಾ ಕ್ಯಾಲ್‌ವರ್ಟ್‌ರವರು ಪಂಜಾಬು ದೇಶದಲ್ಲಿ ನಡೆಸಿರುವ ವಿಚಾರಣಾ ಗುಂಪಿಗೆ* ಸೇರಿದಹಾಗೆ ಇರುವುದು ಡಾ॥ ಮನ್‌ರವರು ನಡೆಸಿರುವುದು ಕಲವು ಹಳ್ಳಿಗಳ ತನಿಖೆ ಮಾತ್ರ ಡಾರ್ಲಿಂಗ್, ಕ್ಯಾಲ್‌ವರ್ಟ್‌ರವರು ನಡೆಸಿರುವದು ಒಟ್ಟು ಪ್ರಾಂತದ ವಿಚಾರಣೆ ಭರತಖಂಡದ ವ್ಯವಸಾಯ ಸಮಸ್ಯೆಗಳನ್ನೂ, ಹಳ್ಳಿಗಳ ಆರ್ಥಿಕಜೀವನವನ್ನೂ, ಸರಿಯಾಗಿ ತಿಳಿದುಕೊಳ್ಳುವುದಕ್ಕೆ, ಈ ಎರಡು ವಿಧವಾದ ಪರೀಕ್ಷೆಗಳೂ ಅಗತ್ಯವಾಗಿವೆ ಆದರೆ, ನಮೂನಾ ಹಳ್ಳಿಗಳ ಆರ್ಥಿಕಸ್ಥಿತಿಯನ್ನು ತಿಳಿದುಕೊಳ್ಳುವುದು ಈಗ ಮುಖ್ಯವಾಗಿದೆ ಗ್ರಾಮ ಪುನರುಜ್ಜೀವನಕಾರ್ಯಗಳನ್ನು ಕೈಗೊಳ್ಳಬೇಕಾದರೆ, ಮುಖ್ಯವಾದ ಕಲವು ಹಳ್ಳಿಗಳ ಆರ್ಥಿಕ

* "Wealth and Welfare in the Panjab", by Calvert
"Panjab Peasant in Prosperity and Debt", by M L Darling

ವಿಚಾರಣೆಯಿಂದ ಅಗತ್ಯವಾದ ಸಾಧನೋಪಾಯಗಳನ್ನು ಕಂಡುಹಿಡಿಯಬೇಕು. ಸ್ವವಿದ್ಯಮಾನಗಳನ್ನು ಕೂಲಂಕಷವಾಗಿ ಪರಿಶೀಲಿಸಿದಲ್ಲದೆ, ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವುದಕ್ಕಾಗಲಿ, ಅಥವಾ ಸೂಕ್ತ ಸಲಹೆಯನ್ನು ಸೂಚಿಸುವುದಕ್ಕಾಗಲಿ, ಆಗುವುದಿಲ್ಲ *

ಗ್ರಾಮ ಆರ್ಥಿಕ ವಿಚಾರಣೆಯನ್ನು ನಡೆಸುವುದರಲ್ಲಿ ಡಾ॥ ಮನ್ ರವರು ಮೊದಲನೆಯವರಾದ ಮಾರ್ಗದರ್ಶಕರಾಗಿದ್ದಾರೆ ಅವರ ಆರ್ಥಿಕ ತನಿಖೆಯ ಕ್ರಮವು, ಹಳ್ಳಿಯ ಆರ್ಥಿಕ ಜೀವನವನ್ನೂ, ವ್ಯವಸಾಯ ಕ್ರಮವನ್ನೂ, ಅಲ್ಲಿಯ ಪ್ರಕೃತಿ ಲಕ್ಷಣ ಮತ್ತು ಭೂಮಿಯ ವಿಭಜನೆಯನ್ನೂ ಚೆನ್ನಾಗಿ ತೋರಿಸುತ್ತದೆ ಹಳ್ಳಿಯ ಆರ್ಥಿಕಸ್ಥಿತಿ, ಆದಾಯ, ಸಾಲ, ಒಟ್ಟು ಬಂಡವಾಳ— ಇವುಗಳನ್ನು ತಿಳಿದುಕೊಳ್ಳಲೂ ಕೂಡ ಸಹಾಯವಾಗಿದೆ ಇಂತಹ ಶಾಸ್ತ್ರೀಯ ವಿಚಾರಣೆಯು ಡಾ॥ ಮನ್ ರವರಿಂದ ಪ್ರಕಟವಾದಮೇಲೆ, ನಮ್ಮ ದೇಶದ ಅನೇಕ ಭಾಗಗಳಲ್ಲಿ, ಇನ್ನೂ ಅನೇಕ ವಿಚಾರಣೆಗಳು † ನಡೆದಿವೆ

ಅವುಗಳಲ್ಲಿ ಕೆಲವು ಹಳ್ಳಿಯ ಆರ್ಥಿಕ ಜೀವನವನ್ನೂ, ಇನ್ನು ಕೆಲವು ಹಳ್ಳಿಯ ಸಮಾಜ ಮತ್ತು ಜೀವನ ಪದ್ಧತಿಗಳನ್ನೂ, ಮತ್ತೆ ಕೆಲವು ಹಳ್ಳಿಯ ಕೈಗಾರಿಕೆ, ವ್ಯಾಪಾರ, ವಿದ್ಯಾಭ್ಯಾಸ ಮತ್ತು ಆರೋಗ್ಯ— ಇವುಗಳನ್ನೂ, ಚಿತ್ರಿಸಿವೆ ಒಂದೊಂದು ವಿಚಾರಣೆಯು, ಒಂದೊಂದು ವಿಷಯಕ್ಕೆ ಹೆಚ್ಚು ಪ್ರಾಧಾನ್ಯಕೊಟ್ಟಿರುತ್ತದೆ ಹಳ್ಳಿಯ, ಮುಖ್ಯ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಯನ್ನು ಚೆನ್ನಾಗಿ ವಿವರಿಸಿ, ಅವುಗಳ

* "Land and Labour in a South Gujarat Village", by G C Mukhtyar p 53

† "Some South Indian Villages" by Dr Slater
"Economic Life in a Bengal District", by Dr Jack
"Economic Life in a Panjab District" by Lucas
"Economic Life in a Malabar Village", by S S Iyer
"A Social and Economic Survey of Konkan", by Ranade
"Report on the Economic Survey of Bairampur" by Ram Lal Bhalla.
"Land and Labour in a South Gujarat Village", by G C Mukhtyar
"Studies in South Indian Villages", by Dr H Mann
"Panjab Peasant in Prosperity and Debt", by M L Darling

# ೩. ಗ್ರಾಮ ಪುನರುಜ್ಜೀವನ

ನಮ್ಮ ಗ್ರಾಮಗಳಲ್ಲಿ ವಾಸಮಾಡುವ ಜನಗಳ ಈಗಿನ ಸ್ಥಿತಿಯನ್ನು ಉತ್ತಮಪಡಿಸುವ ಉದ್ಯಮಗಳಿಗೆ ಗ್ರಾಮ ಪುನರುಜ್ಜೀವನವೆಂಬದಾಗಿ ಹೇಳಬಹುದು (ರೈತರ ಜೀವನವನ್ನು ಸರಿಪಡಿಸಿ, ಅವರಲ್ಲಿ ಆತ್ಮಾವಲಂಬನೆಯನ್ನುಂಟುಮಾಡುವುದೇ ಇದರ ಮುಖ್ಯ ಗುರಿಯಾಗಿದೆ ಹಳ್ಳಿಯಲ್ಲಿರುವ ಜನಗಳನ್ನು ಎಚ್ಚರಿಸಿ, ಅವರು, ವರಮಾನವನ್ನು ಹೆಚ್ಚಿಸಿಕೊಂಡು, ಆರ್ಥಿಕ ಜೀವನವನ್ನು ಉತ್ತಮಪಡಿಸಿಕೊಳ್ಳುವ, ವ್ಯವಸ್ಥಾಕ್ರಮವೆಂದೂ, ಇದನ್ನು ಹೇಳಬಹುದು ಸ್ವಪ್ರಯತ್ನದಿಂದ ರೈತರು ಹೆಚ್ಚು ಸಂಪಾದನೆ ಮಾಡುವ ಕ್ರಮವನ್ನು ಅವರಿಗೆ ತಿಳಿಸಿ, ಸ್ವಸಾಮರ್ಥ್ಯದಿಂದ ಕೆಲಸಮಾಡುವ ವಿಧಾನವನ್ನು ತಿಳಿಸತಕ್ಕ ಕಾರ್ಯಕ್ರಮಗಳು, ಪುನರುಜ್ಜೀವನದ ತತ್ವಗಳಾಗಿವೆ

ಇತ್ತೀಚೆಗೆ ಗ್ರಾಮೋದ್ಧಾರ ವಿಷಯವು ಎಲ್ಲೆಲ್ಲೂ ಹರಡುತ್ತಿದೆ ಪ್ರಜಾಪ್ರಮುಖರು, ಪ್ರಭುತ್ವದವರು, ಅರ್ಥಶಾಸ್ತ್ರಜ್ಞರು ಮತ್ತು ವಿದ್ಯಾವಂತರೂ ಈ ಪ್ರಶ್ನೆಯನ್ನು ವಿಮರ್ಶೆಮಾಡುತ್ತಿದ್ದಾರೆ ದೇಶದ ಹೀನಸ್ಥಿತಿಯೇ ಇದಕ್ಕೆ ಮುಖ್ಯಕಾರಣವಾಗಿದೆ ನಮ್ಮ ದೇಶದಲ್ಲಿ ನೂರರಲ್ಲಿ ಸುಮಾರು ತೊಂಭತ್ತು (ಜನರು ಹಳ್ಳಿಗಳಲ್ಲಿ ವಾಸಮಾಡುತ್ತಿದ್ದಾರೆ ಇವರಲ್ಲಿ ಅನೇಕರು ನಿರುದ್ಯೋಗಿಗಳಾಗಿದ್ದಾರೆ ಈ ನಿರುದ್ಯೋಗವು ಅವರ ಜೀವನದ ಮಟ್ಟವನ್ನು ಕ್ಷೀಣಸ್ಥಿತಿಗೆ ತಂದಿದೆ ಅವರನ್ನು ಬಡತನವಲ್ಲಿ ನರಳಿಸುತ್ತಿದೆ ಅವರ ಜೀವನವು ಉತ್ತಮವಾಗಬೇಕಾದರೆ, ಪುನರುದ್ಧಾರ ಕಾರ್ಯಕ್ರಮವು ಅತ್ಯವಶ್ಯಕವಾಗಿದೆ

ನಮ್ಮ ಹಳ್ಳಿಗಳಲ್ಲಿರುವ ಸಂಸ್ಥೆಗಳಲ್ಲಿ ಅನೇಕ ನ್ಯೂನಾತಿರಿಕ್ತಗಳಿವೆ ಇವುಗಳಲ್ಲದೆ, ರೈತರ ಮಿತಿಮೀರಿದ ಸಾಲ, ಲಾಭವಿಲ್ಲದ ವ್ಯಾಪಾರ, ಅವರ ಅಜ್ಞಾನ, ಅವರ ಬಡಕಲು ದನಕರುಗಳು — ಇವುಗಳೆಲ್ಲವೂ ಒಂದೊಂದು ರೀತಿಯಲ್ಲಿ, ದೇಶದ ಹೀನಸ್ಥಿತಿಗೆ ಕಾರಣಗಳಾಗಿವೆ ಪ್ರಪಂಚದ ಅನೇಕ ದೇಶಗಳು, ತಮ್ಮ ಕೈಗಾರಿಕಾ ಕ್ಷೇತ್ರಗಳನ್ನು ವಿಸ್ತರಿಸಿ, ಉತ್ತಮ ನಿರ್ಮಾಣ ಕಾರ್ಯಕ್ರಮಗಳನ್ನು ಅನುಸರಿಸಿ, ಜನಗಳ

ಸಂಪಾದನೆಯನ್ನೂ, ಜೀವನವನ್ನೂ, ಉತ್ತಮಪಡಿಸುತ್ತಾ ಇದ್ದರೂ, ನಮ್ಮ ದೇಶದಲ್ಲಿ ಅಂತಹ ಉದ್ಯಮಗಳ ಪ್ರಭಾವವೇ ಹೆಚ್ಚುತ್ತ ಇಲ್ಲ ಇಲ್ಲಿ ವ್ಯವಸಾಯದಿಂದ ಜೀವಿಸುವವರ ಸಂಖ್ಯೆಯು ದಿನೇ ದಿನೇ ಹೆಚ್ಚುತ್ತಿದೆ ೧೮೯೧ನೆಯ ಇಸವಿಯ ಸೆನ್ಸಸ್ ವರದಿಯ ಪ್ರಕಾರ ನೂರರಲ್ಲಿ ೬೧ ಜನಗಳು ಬೇಸಾಯದಿಂದ ಜೀವಿಸುತ್ತಿದ್ದರೆ, ೧೯೩೧ರಲ್ಲಿ ಇದು ೭೩ಕ್ಕೆ ಏರಿದೆ ಈಗ ನೂರರಲ್ಲಿ ಸುಮಾರು ೭೫ ಜನಗಳು ವ್ಯವಸಾಯದಿಂದಲೇ ಜೀವಿಸಬೇಕಾಗಿದೆ ಈ ವಿಚಾರದಲ್ಲಿ ನಮ್ಮ ದೇಶಕ್ಕೂ, ಮುಂದುವರಿದ ಇತರ ದೇಶಗಳಿಗೂ ಇರುವ ವ್ಯತ್ಯಾಸವನ್ನು ಈ ಕೆಳಗಿನ ತಃಖ್ತೆಯಿಂದ ತಿಳಿಯಬಹುದು —

| ದೇಶದ ಹೆಸರು | ವರ್ಷ | ವ್ಯವಸಾಯ ಮತ್ತು ಮೀನು ಹಿಡಿಯುವ ಕೆಲಸದಿಂದ ಜೀವಿಸುವ ಜನಗಳ ಶೇಕಡಾ ದರ |
|---|---|---|
| ಇಂಗ್ಲೆಂಡ್ ಮತ್ತು ವೇಲ್ಸ್ | 1921 | 7 1 |
| ಅಮೇರಿಕಾ | 1931 | 22 0 |
| ಕಾನಡಾ | 1931 | 31 0 |
| ಜರ್ಮನಿ | 1925 | 30 5 |
| ಫ್ರಾನ್ಸ್ | 1926 | 38 3 |
| ಜಪಾನ್ | 1930 | 50 3 |
| *ಇಂಡಿಯಾ | 1931 | 67 2 |

ಸಾಮಾನ್ಯವಾಗಿ ಒಂದು ದೇಶದ ಸಂಪತ್ತು ಮತ್ತು ಅಭಿವೃದ್ಧಿಯು ಅಲ್ಲಿಯ ಸ್ವಭಾವಸಿದ್ಧವಾದ ಆಸರೆ, ಇಂತಹ ಸನ್ನಿವೇಶಗಳನ್ನು ಸರಿಯಾಗಿ ಉಪಯೋಗಿಸಿಕೊಳ್ಳಲು ಜನರಿಗಿರುವ ಶಕ್ತಿ, ಇವುಗಳ ವಿಧಾನವನ್ನು ಅನುಸರಿಸಿವೆ ಭರತಖಂಡದಲ್ಲಿ ಹೆಚ್ಚುತ್ತಿರುವ ಜನಸಮುದಾಯಕ್ಕೆ, ಅವರ ಮುಖ್ಯ ವೃತ್ತಿಯಾಗಿರುವ ವ್ಯವಸಾಯವು ಇಲ್ಲಿಯ ಆರ್ಥಿಕ ಜೀವನದ ಹವಣಿಕೆಯನ್ನು ಸರಿಯಾದ ಸ್ಥಿತಿಯಲ್ಲಿರಿಸಲು ಅವಕಾಶ ವೀಯುತ್ತಿಲ್ಲ ಇದಲ್ಲದೆ ಜಮೀನನ್ನು ಅವಲಂಬಿಸುತ್ತಿರುವವರ ಸಂಖ್ಯೆಯು ಹೆಚ್ಚುತ್ತಿರುವುದರಿಂದ, ಇದು ಸಾಗುವಳಿ ಜಮೀನಿನ ವಿಭಜನೆಯನ್ನು

* "Planned Economy for India", by Sir M V, p 34

ಹೆಚ್ಚಿಸುವುದರ ಜೊತೆಗೆ, ಜಮೀನಿಲ್ಲದ ವ್ಯವಸಾಯಿಕ ಕೂಲಿಗಾರರ ಸಂಖ್ಯೆಯನ್ನೂ ಹೆಚ್ಚಿಸುತ್ತಿದೆ

ಭರತಖಂಡದಲ್ಲಿ ಪುರಾತನವಾದ ಮುಖ್ಯವೃತ್ತಿಯು ವ್ಯವಸಾಯವಾದರೂ, ವಿದ್ಯಾವಂತರಾದ ಹಳ್ಳಿಯ ಜನರು ಇಂತಹ ವೃತ್ತಿಯನ್ನು ಅಲಕ್ಷ್ಯದಿಂದ ಕಾಣುತ್ತಿದ್ದಾರೆ ( ಬುದ್ಧಿವಂತರಾದ ತರಪೇತಾದ ಹಳ್ಳಿಯ ಯುವಕರು, ಹಳ್ಳಿಯಲ್ಲಿ ವಾಸಮಾಡುವುದಕ್ಕೆ ಇಷ್ಟಪಡುತ್ತಿಲ್ಲ ಅವರ ಬುದ್ಧಿಶಕ್ತಿ, ಕ್ರಿಯಾಶಕ್ತಿಗಳು, ಹಳ್ಳಿಯ ಪಾಲಿಗೆ ಇಲ್ಲವಾಗಿವೆ ಮುಖ್ಯವೃತ್ತಿಯಾದ ವ್ಯವಸಾಯವು ಹೆಚ್ಚು ವಿದ್ಯಾವಂತರಲ್ಲದ, ಹೆಚ್ಚು ಪರಿಜ್ಞಾನವಿಲ್ಲದ, ಹಳ್ಳಿಯ ರೈತರ ವಶವಾಗಿ, ಹೆಚ್ಚು ಅಭಿವೃದ್ಧಿಗೂ, ಹೆಚ್ಚು ಸಂಪಾದನೆಗೂ ಅವಕಾಶವಿಲ್ಲವಾಗಿದೆ ಹೀಗೆ ವಿದ್ಯಾವಂತರಾದವರು ಹಳ್ಳಿಗಳನ್ನು ಬಿಡುತ್ತಿರುವುದರಿಂದ, ಹೇಡಿತನ, ಬಡತನ, ಅಜ್ಞಾನ, ಇವೆಲ್ಲಾ ಅಲ್ಲಿ ಹೆಚ್ಚುತ್ತಾ ಇವೆ ಎಂದು ಹೇಳಬಹುದು.

ಸಾಮಾನ್ಯವಾಗಿ ವ್ಯವಸಾಯವನ್ನೇ ಅವಲಂಬಿಸಿರುವ ದೇಶಗಳು, ಶಾಸ್ತ್ರರೀತಿಯಲ್ಲಿ ವ್ಯವಸಾಯಕ್ರಮವನ್ನು ಉತ್ತಮಪಡಿಸಲು ಅಶಕ್ತರಾಗಿರುವವರೆಗೂ, ಹೀನಸ್ಥಿತಿಯಲ್ಲೇ ಇರಬೇಕಾಗುವುದು (ಅನೇಕ ಪಾಶ್ಚಾತ್ಯ ದೇಶಗಳು, ಅಲ್ಲಿಯ ಶಿಕ್ಷಣಕ್ರಮವನ್ನು ಉತ್ತಮಪಡಿಸಿ, ವ್ಯವಸ್ಥಿತವಾದ ತಿದ್ದುಪಾಟುಗಳನ್ನು ಆಚರಣೆಗೆ ತಂದು ಬಹಳ ಮುಂದೆ ಬಂದಿವೆ ನಮ್ಮ ದೇಶದಲ್ಲಿರುವ ಅನುಕೂಲ ಸನ್ನಿವೇಶಗಳಿಲ್ಲದಿದ್ದರೂ, ತ್ಯಾಗಬುದ್ಧಿಯನ್ನುಂಟುಮಾಡುವ ಸಂಸ್ಥೆಗಳ ಸ್ಥಾಪನೆಯಿಂದಲೂ, ಜನಗಳನ್ನು ಒಂದು ವಿಧವಾದ ಶಿಸ್ತಿನಲ್ಲಿ ತರಪೇತುಮಾಡುವ ಕ್ರಮದಿಂದಲೂ, ಆ ದೇಶಗಳು ಅಭಿವೃದ್ಧಿಕಾರ್ಯಗಳನ್ನು ಮುಂದುವರಿಸಿವೆ ಇಂತಹ ಜನಸಮುದಾಯದ ಅಭಿವೃದ್ಧಿಯೂ, ಸಂಪತ್ತೂ, ಅದರ ಪ್ರತಿಯೊಬ್ಬ ವ್ಯಕ್ತಿಯ ಉತ್ಸಾಹವನ್ನೂ, ಕಾರ್ಯೋಪಕ್ರಮವನ್ನೂ ಅವಲಂಬಿಸಿವೆ ಹೀಗಿರುವ ಸಮಾಜದಲ್ಲಿ ಎಂತಹ ಕಷ್ಟಕಾರ್ಯಕ್ರಮವನ್ನಾದರೂ ಕೈಗೊಂಡು, ದೇಶವನ್ನು ಅಭಿವೃದ್ಧಿಗೆ ತರಬಹುದು *

* ' The Wealth and Welfare of the Bengal Delta'', by S G Panandikar, p 346 'Rural Reconstruction in Island'', p 16

ನಮ್ಮ ದೇಶವು ಕ್ರಮಬದ್ಧವಾದ ಮತ್ತು ಫಲದಾಯಕವಾದ ಕಾರ್ಯಕ್ರಮವನ್ನು ಕೈಗೊಳ್ಳಬೇಕಾದರೆ, ಇತರ ದೇಶಗಳಲ್ಲಿ ಪ್ರಚಾರಕ್ಕೆ ತಂದಿರುವ ಕ್ರಮಗಳನ್ನು ಚೆನ್ನಾಗಿ ತಿಳಿದುಕೊಂಡು, ಮಾದರಿಯಾಗಿ ಇಟ್ಟುಕೊಳ್ಳಬೇಕು ಡೆನ್ಮಾರ್ಕ್, ಜರ್ಮನಿ, ಕಾನಡಾ, ಜಪಾನ್ ದೇಶಗಳ ಆರ್ಥಿಕಾಭ್ಯುದಯಕ್ರಮವು, ಹೆಚ್ಚಿನ ಬೆಲೆಯುಳ್ಳ ನಿದರ್ಶನಗಳಾಗಿವೆ ಅಲ್ಲಿ ಕೈಗೊಂಡಿರುವ ಕಾರ್ಯಕ್ರಮಗಳನ್ನು ವಿಮರ್ಶೆಮಾಡಿ, ಸ್ಥಳೀಯ ವಿದ್ಯಮಾನಗಳಿಗೆ ಅನುಸರಿಸುವಂತೆ ಅದೇ ರೀತಿಯಲ್ಲಿ ನಮ್ಮ ದೇಶದಲ್ಲಿಯೂ, ಆಚರಿಸಿದರೆ ರೈತರ ಜೀವನವು ಉತ್ತಮವಾಗುವುದಲ್ಲದೆ, ಅವರ ಸಂಪಾದನಾ ಶಕ್ತಿಯು ವೃದ್ಧಿಯಾಗುವುದು ಆದುದರಿಂದ ಇತರ ದೇಶಗಳ ಗ್ರಾಮ ಪುನರುಜ್ಜೀವನ ಕಾರ್ಯಕ್ರಮಗಳನ್ನು ನಾವು ಇಲ್ಲಿ ವಿಚಾರಮಾಡುವುದು ಸೂಕ್ತವಾಗಿದೆ

ನಪೋಲಿಯನ್ ಯುದ್ಧದ ಫಲವಾಗಿ ಡೆನ್ಮಾರ್ಕ್ ದೇಶವು, ತನಗೆ ಸೇರಿದ ಭೂಪ್ರದೇಶಗಳನ್ನು ಕಳೆದುಕೊಂಡದ್ದಲ್ಲದೆ, ತನ್ನ ವ್ಯಾಪಾರೋದ್ಯಮಗಳನ್ನು ಕೂಡ ಹಾಳುಮಾಡಿಕೊಂಡಿತು ಯುದ್ಧದ ಲುಕ್ಸಾನು ಹಣವನ್ನು ಕಟ್ಟುವುದಕ್ಕಾಗಿ ಸಾಲ ಮಾಡಬೇಕಾಯಿತು ಆ ಕಾಲಕ್ಕೆ ಸರಿಯಾಗಿ ದವಸಧಾನ್ಯಗಳ ಬೆಲೆಯು ಇಳಿದುಹೋದುದರಿಂದ, ವ್ಯವಸಾಯವೃತ್ತಿಯು, ಫಲದಾಯಕವಾಗಿರಲಿಲ್ಲ ದೇಶದಲ್ಲಿ ಬಡತನ, ಅಶಾಂತಿ, ಅತೃಪ್ತಿ — ಇವುಗಳೆಲ್ಲಾ ಹರಡುತ್ತಿದ್ದವು ಈ ಕಾಲದಲ್ಲಿ ದೇಶದ ಕೆಲವು ಕಾಡುಪ್ರದೇಶಗಳನ್ನು ಸಾಗುವಳಿ ಮಾಡುವುದಕ್ಕೋಸ್ಕರ "ಡೇನಿಷ್ ಹೆಲ್ತ್ ಸೊಸೈಟಿ" ಎಂಬ ಕೆಲವು ಸಹಕಾರ ಸಂಘಗಳು ಸ್ಥಾಪಿಸಲ್ಪಟ್ಟವು. ಈ ಸಂಘಗಳು ಸಾಗುವಳಿಗೆ ಅನುಕೂಲವಾದ ನೀರು, ಗೊಬ್ಬರ, ಬೀಜ ಮತ್ತು ಅನುಕೂಲವಾದ ದಾರಿ, ಇವೇ ಮುಂತಾದ ವ್ಯವಸಾಯ ಸೌಕರ್ಯಗಳನ್ನು ಕಲ್ಪಿಸುತ್ತಿದ್ದವು ಸ್ವಲ್ಪಕಾಲದಲ್ಲಿಯೇ ವ್ಯವಸಾಯಕ್ಕೆ ಸಂಬಂಧಪಟ್ಟ ಪ್ರತಿಯೊಂದು ಉದ್ಯಮದಲ್ಲಿಯೂ, ಸಹಕಾರ ಸಂಘಗಳನ್ನು ಸ್ಥಾಪಿಸಲಾಯಿತು ಈ ಸಹಕಾರ ಸಂಘಗಳು ಉತ್ತಮವಾಗಿ ಕೆಲಸಮಾಡಿ ಸುಲಭವಾಗಿಯೂ, ಹೆಚ್ಚು ವೆಚ್ಚವಿಲ್ಲದೆಯೂ, ವ್ಯವಸಾಯದಿಂದ ಪೂರ್ಣ ಪ್ರತಿಫಲವನ್ನು ಡೆನ್ಮಾರ್ಕ್

ರೈತರಿಗೆ ಉಂಟುಮಾಡಿದುವು. ಈ ರೀತಿ ಅತ್ಯುತ್ತಮ ಕೆಲಸ ಮಾಡಿದು ದಲ್ಲದೆ, ಈ ಸಂಘಗಳು ಅಲ್ಲಿಯ ಜನರಲ್ಲಿ ಉತ್ಕಟ ದೇಶಪ್ರೇಮ ಮತ್ತು ಸಹೋದರ ವಾತ್ಸಲ್ಯವನ್ನೂ ವೃದ್ಧಿಪಡಿಸಿದುವು ಇವೇ ಮುಂತಾದ ಕಾರ್ಯಕ್ರಮಗಳಿಂದ ಡೆನ್ಮಾರ್ಕ್ ದೇಶವು, ಉಳಿದ ದೇಶಗಳಿಗಲ್ಲಾ ಆದರ್ಶಪ್ರಾಯವಾಗಿದೆ ಎಂದು ಹೇಳಬಹುದು *

ವ್ಯವಸಾಯಕ್ರಮವನ್ನು ಉತ್ತಮಪಡಿಸುವುದಕ್ಕೆ, ಸುಲಭವಾದ ಮತ್ತು ಆದಾಯಕರವಾದ ಶಾಸ್ತ್ರೀಯ ವಿಧಾನವನ್ನು, ನಾವು ಜರ್ಮನಿ ದೇಶದಿಂದ ಬಹಳ ಚೆನ್ನಾಗಿ ತಿಳಿಯಬಹುದು ೧೮ನೆಯ ಇಸವಿಯ ವರೆಗೆ ಜರ್ಮನಿ ದೇಶದಲ್ಲಿ ಸಾಗುವಳಿಯು, ಕೂಲಿ ಅಥವಾ ಮನುಷ್ಯರ ಕೈಯಿಂದಲೇ ನಡೆಯುತ್ತಿತ್ತು ಜಮೀನು ತಾಕುಗಳು, ಬಹಳ ಸಣ್ಣ ವಾಗಿ, ವ್ಯವಸಾಯಕ್ರಮವೂ ಕೂಡ ಪುರಾತನವಾಗಿತ್ತು ಇದರಿಂದ ಜನರಿಗೆ ಹೆಚ್ಚು ಲಾಭ ಬರುತ್ತಿರಲಿಲ್ಲ ವ್ಯವಸಾಯ ಪದ್ಧತಿಯನ್ನು ಉತ್ತಮಪಡಿಸಬೇಕೆಂಬ ಉತ್ಕಟೇಚ್ಛೆಯು, ದೇಶದಲ್ಲೆಲ್ಲಾ ಹರಡಿತು ಆ ಕಾಲಕ್ಕೆ ಸರಿಯಾಗಿ ಪ್ರಭುತ್ವದವರು ಅಲ್ಲಿಯ ಪ್ರಾಥಮಿಕ ಶಿಕ್ಷಣ ಪದ್ಧತಿಯನ್ನು ವ್ಯವಸ್ಥೆಮಾಡಿ, ಪ್ರತಿಯೊಂದು ಪಾಠಶಾಲೆಯಲ್ಲಿಯೂ, ವ್ಯವಸಾಯ ಬೋಧನಾಕ್ರಮವನ್ನು ಪ್ರಾರಂಭಿಸಿದರು ಅನಂತರ ವ್ಯವಸಾಯಕ್ಕೆ ಸಂಬಂಧಪಟ್ಟ ಪ್ರತಿಯೊಂದು ಶಾಖೆಯಲ್ಲಿಯೂ, ಹೆಚ್ಚು ಸೌಕರ್ಯಗಳು ದೊರೆತವು ವಿಜ್ಞಾನಕ್ರಮದಿಂದ ಉತ್ತಮ ವಾಗಿ, ಬೆಳೆಯನ್ನು ತೆಗೆಯುವ ವಿಧಾನಗಳನ್ನು, ರೈತರಿಗೆ ಬೋಧಿಸ ಲಾಯಿತು ಈ ವಿಧವಾದ ಎಲ್ಲಾ ಅಭಿವೃದ್ಧಿ ಕಾರ್ಯಗಳಿಗೂ ಶಕ್ತವಾದ ಸಹಕಾರ ಸಂಘಗಳು ಸಹಾಯಮಾಡಿದುವು ಹೀಗೆ ಜರ್ಮನಿ ದೇಶವು ತನ್ನ ರೈತರ ಜೀವನವನ್ನು ವಿಸ್ತಾರವಾದ ವ್ಯವಸಾಯ ಶಿಕ್ಷಣಕ್ರಮ ದಿಂದಲೂ, ಪರಿಷ್ಕೃತವಾದ ಸಾಲದ ಸಂಸ್ಥೆಗಳ ಸ್ಥಾಪನೆಯಿಂದಲೂ ಉತ್ತಮಪಡಿಸಿತು ಇದರಿಂದ ರೈತರ ಉತ್ಪತ್ತಿಯು ಹೆಚ್ಚಿ ದೇಶವು ಅಭಿವೃದ್ಧಿಗೆ ಬಂದಿತು ಪ್ರಭುತ್ವದವರೂ, ಖಾಸಗಿ ದೊಡ್ಡ ಮನುಷ್ಯರೂ ಸಹಕರಿಸಿ, ವಿಜ್ಞಾನ ಮತ್ತು ಕೈಗಾರಿಕೋದ್ಯಮಗಳಲ್ಲಿ, ಹೆಚ್ಚು ಶ್ರದ್ಧೆ

* 'Organisation of Agriculture" by Edwin Pratt, p 35

ವಹಿಸಿದುದರಿಂದ, ಜರ್ಮನಿ ದೇಶದ ವ್ಯವಸಾಯಕ್ರಮವು ಲಾಭಕರ ವಾದುದಲ್ಲದೆ, ಅಲ್ಲಿಯ ರೈತರ ಜೀವನವೂ, ಅವರ ದನಕರುಗಳ ಆರೋಗ್ಯವೂ ಕೂಡ ಸರ್ವೋತ್ತಮವಾಯಿತು *

ವ್ಯವಸಾಯವನ್ನು ಅಭಿವೃದ್ಧಿಪಡಿಸುವುದಕ್ಕೆ ಯೂರೋಪ್ ಖಂಡದ ಕೆಲವು ದೇಶಗಳಲ್ಲಿ ಸ್ಥಾಪಿಸಲ್ಪಟ್ಟಂಥ ಸಹಕಾರ ಸಂಘಗಳು ಕಾನಡಾ ದೇಶಕ್ಕೆ ಸರಿಬೀಳಲಿಲ್ಲ ವಿಧವಾದ ಸಂಘಗಳು ಅಲ್ಲಿ ಪ್ರಯೋಜನ ಕಾರಿಗಳಾಗಲಿಲ್ಲ ಆದುದರಿಂದ ಕಾನಡಾ ದೇಶವು ಅಲ್ಲಿಯ ಸ್ಥಳವಿದ್ಯಮಾನ ಗಳಿಗ ಅನುಕೂಲವಾಗಿ ಪ್ರತ್ಯೇಕ ತರಹೆಯ ಸಂಘಗಳನ್ನು ಸ್ಥಾಪಿಸಿತು, ಅವುಗಳು ಅಮೇರಿಕಾ ದೇಶದ "ಫಾರ್ಮರ್ಸ್ ಇನ್‌ಸ್ಟಿಟ್ಯೂಟ್" ಕ್ರಮಕ್ಕೆ ಸಂಬಂಧಪಟ್ಟಹಾಗೆ ಇವೆ ಈ ಸಂಸ್ಥೆಗಳ ಏರ್ಪಾಡನ್ನು ಒಬ್ಬ ಅಧಿಕಾರಿ ಗಳು ಈ ರೀತಿ ವರ್ಣಿಸಿದ್ದಾರೆ —

"ಈ ಸಂಸ್ಥೆಯ ಮೂಲಕ ರೈತರು ಉತ್ತಮ ವ್ಯವಸಾಯಕ್ರಮ ವನ್ನು ಕಲಿತು, ತಮ್ಮ ಜ್ಞಾನವನ್ನು ಹೆಚ್ಚಿಸಿಕೊಳ್ಳಬೇಕೆಂಬುದೇ ನಮ್ಮ ಉದ್ದೇಶ ಆಗಾಗ ಸಭೆಗಳನ್ನು ಸೇರಿಸಿ, ಪ್ರತಿಯೊಬ್ಬ ರೈತನೂ ತನಗ ಕಷ್ಟವಾದ ವ್ಯವಸಾಯ ಸಮಸ್ಯೆಗಳನ್ನು ಚರ್ಚಿಸಿ, ಅವುಗಳ ಪರಿಹಾರೋ ಪಾಯಗಳನ್ನು ಸೂಚಿಸುವಂತ ಅನುಕೂಲಗಳನ್ನು ಕಲ್ಪಿಸಲಾಗಿದ ರೈತರು ದನಕರುಗಳನ್ನು ಸಾಕುವುದಕ್ಕೂ, ಪೈರುಪಚ್ಚೆಗಳನ್ನು ಲಾಭ ದಾಯಕವಾದ ರೀತಿಯಲ್ಲಿ ಬೆಳಸುವುದಕ್ಕೂ, ಸರಿಯಾದ ಸಲಹೆಗಳನ್ನು ಈ ಸಂಸ್ಥೆಗಳು ಕೊಡುತ್ತಿವೆ " †

ವ್ಯವಸಾಯಶಾಸ್ತ್ರದಲ್ಲಿ ನಿಪುಣರಾದ ವಿದ್ವಾಂಸರಿಂದ ಭಾಷಣ ಗಳನ್ನು ಏರ್ಪಡಿಸುವುದು, ವಿಜ್ಞಾನ ರೀತಿಯ ವ್ಯವಸಾಯಕ್ರಮದಲ್ಲಿ ಹೆಚ್ಚು ಅನುಭವವುಳ್ಳ ಅಧಿಕಾರಿಗಳು ಮತ್ತು ಖಾಸಗಿ ದೊಡ್ಡ ಮನುಷ್ಯರುಗಳು ದೇಶದ ಅನೇಕ ಭಾಗಗಳಲ್ಲಿ ಸಂಚಾರಮಾಡಿ,

* "Economic Development of Germany and France", by J H Clapham, p 158

'Organisation of Agriculture', by I Pratt, p 56

'Recent Development in German Agriculture", by Middleton 1917, London

† Report of the Superintendent of Farmer's Institute of Ontario, 1903

ಉದಾಹರಣೆ ಮತ್ತು ಪ್ರದರ್ಶನ ಮೂಲಕ, ರೈತರಲ್ಲಿ ಹೆಚ್ಚು ಜ್ಞಾನ ಪ್ರಚಾರ ಮಾಡುವುದು— ಇವೇ ಮುಂತಾದ ಕಾರ್ಯಕ್ರಮಗಳನ್ನು ಕಾನಡಾ ದೇಶದ ಪ್ರಭುತ್ವದವರು ಏರ್ಪಡಿಸಿದ್ದಾರೆ. ಹೀಗೆ ಸುವ್ಯವಸ್ಥಿತ ವಾಗಿ ಅಭಿವೃದ್ಧಿ ಕೆಲಸಗಳನ್ನು ಆಚರಣೆಯಲ್ಲಿ ತಂದಿರುವುದರಿಂದ, ಅಲ್ಲಿಯ ರೈತರು ವ್ಯವಸಾಯದಿಂದ ಹೊಂದುವಷ್ಟು ಲಾಭವನ್ನು ಇನ್ನಾವ ವೃತ್ತಿಯಿಂದಲೂ ಈಗ ಹೊಂದುತ್ತಾ ಇಲ್ಲ.

ಜಪಾನ್ ದೇಶದ ಪ್ರಕೃತಿ ಸನ್ನಿವೇಶವು ಬಹಳ ಕಷ್ಟತರವಾದದ್ದು. ಒಂದು ಕಡೆ ವಿಶಾಲವಾದ ಸಮುದ್ರ, ಇನ್ನೊಂದು ಕಡೆ ಅಪ್ರಯೋಜಕ ವಾದ ಬೆಟ್ಟಗುಡ್ಡ, ಮತ್ತೊಂದು ಕಡೆ ಆಳವಾದ ಕಣಿವೆ. ರೈತರ ಜಮೀನುಗಳು ಕೂಡ ಬಹಳ ಸಣ್ಣ ತಾಕುಗಳಾಗಿ ವಿಂಗಡಿಸಲ್ಪಟ್ಟಿವೆ. ಹೀಗೆ ಅಲ್ಲಿಯ ಸನ್ನಿವೇಶಕ್ಕೆ ಸರಿಯಾಗಿ ಜನಗಳೂ ಕೂಡ, ಈಗ್ಗೆ ೩೦ ವರ್ಷಗಳ ಹಿಂದೆ ಅಜ್ಞಾನಿಗಳಾಗಿ ಬಹಳ ಹೀನಸ್ಥಿತಿಯಲ್ಲಿದ್ದರು. ದೇಶವು ಒಟ್ಟಿನಲ್ಲಿ ನಮ್ಮ ದೇಶದ ಸಂಜಾಬು ಪ್ರಾಂತದಷ್ಟೂ ಕೂಡ ಮುಂದುವರಿದಿರಲಿಲ್ಲವೆಂದು ಹೇಳಬಹುದಾಗಿತ್ತು. ಆಗ ಶಿಶುಹತ್ಯೆ ಕೂಡ ಅಲ್ಲಿ ಆಚರಣೆಯಲ್ಲಿತ್ತು. ಆದರೆ ಜಪಾನ್ ಸರ್ಕಾರದವರು ದೇಶದ ವ್ಯವಸಾಯಕ್ರಮವನ್ನು ಉತ್ತಮಪಡಿಸುವುದಕ್ಕೆ, ಪುನರುಜ್ಜೀವನ ಕಾರ್ಯ ಕ್ರಮವನ್ನು ಆಚರಣೆಯಲ್ಲಿ ತರುವುದಕ್ಕೆ ಪ್ರಯತ್ನಪಟ್ಟರು. ಅವರ ಪ್ರಯತ್ನವು ಅಲ್ಲಿಯ ಜನರ ದೇಶಪ್ರೇಮ ಮತ್ತು ಅವರ ಸಹಕಾರಗಳಿಂದ ಸುಲಭವಾಯಿತು. ಅನಂತರ ನೀರಾವರಿ ಕೆಲಸಗಳು, ಕೃಷಿಕ್ಷೇತ್ರಗಳ ಎಲ್ಲೆಕಟ್ಟು ಕ್ರಮಪಡಿಸುವುದು, ದಾರಿಗಳನ್ನು ಮಾಡುವುದು, ಉತ್ತಮ ವಾದ ಗೊಬ್ಬರ ಮತ್ತು ಬೀಜಗಳನ್ನು ಹಂಚುವುದು—ಇವೇ ಮುಂತಾದ ವ್ಯವಸಾಯಕ್ಕೆ ಸಂಬಂಧಪಟ್ಟ ಉದ್ಯಮಗಳಲ್ಲದೆ, ಸಂಸ್ಥೆಗಳನ್ನು ಸ್ಥಾಪಿಸಲಾಯಿತು. ವ್ಯವಸಾಯಕ್ರಮವನ್ನೇ ಪ್ರಧಾನವಾಗಿ ಬೋಧಿಸತಕ್ಕ ಅನೇಕ ಪಾಠಶಾಲೆಗಳೂ, ಪಶುವೈದ್ಯ ಸಂಸ್ಥೆಗಳೂ, ವ್ಯವಸಾಯ ಪರೀಕ್ಷಾ ಕ್ಷೇತ್ರಗಳೂ, ದೇಶದ ಎಲ್ಲಾ ಭಾಗಗಳಲ್ಲಿಯೂ ಕೆಲಸಮಾಡತೊಡಗಿದವು.

ಈಗ ಜಪಾನ್ ದೇಶದಲ್ಲಿ ಬಲಾತ್ಕಾರ ಶಿಕ್ಷಣಕ್ರಮವು ಆಚರಣೆ ಯಲ್ಲಿದೆ. ವಿಭಾಗಿಸಲ್ಪಟ್ಟಿದ್ದ ಸಾಗುವಳಿ ಜಮೀನಿನ ಸಣ್ಣ ಸಣ್ಣ

ತಾಕುಗಳು ಸಾಧ್ಯವಾದ ಮಟ್ಟಿಗೆ ಒಟ್ಟುಗೂಡಿಸಲ್ಪಟ್ಟಿವೆ ಉತ್ತಮ ವ್ಯವಸಾಯ ಸಂಘಗಳಿಲ್ಲದ ಹಳ್ಳಿಗಳೇ ಅಲ್ಲಿ ಇಲ್ಲ ಖಾಸಗಿ ದೊಡ್ಡ ಮನುಷ್ಯರ ದೇಶಪ್ರೇಮ ಮತ್ತು ಮನಃಪೂರ್ವಕ ಒತ್ತಾಸೆಯಿಂದ ಅನೇಕ ಮಾದರಿ ಗ್ರಾಮಗಳು ಅಭಿವೃದ್ಧಿಹೊಂದುತ್ತಾ ಇವೆ ತಮ್ಮ ತಮ್ಮ ಗ್ರಾಮಕ್ಕೆ ಸಂಬಂಧಪಟ್ಟ ಪ್ರಾಥಮಿಕ ವಿದ್ಯಾಭ್ಯಾಸ, ಆರೋಗ್ಯ, ನೈರ್ಮಲ್ಯ, ಓಡಾಸರಿ— ಇವೇ ಮುಂತಾದ ಕೆಲಸಗಳಲ್ಲಿ ಹಳ್ಳಿಯ ಆಲೋಚನಾ ಸಭೆಗಳು, ಸರ್ವಾಧಿಕಾರವನ್ನು ಹೊಂದಿವೆ ವ್ಯವಸಾಯ, ಆರೋಗ್ಯ ಮತ್ತು ಕೈಗಾರಿಕಾ ಶಾಖೆಗಳಿಂದ ನೇಮಿಸಲ್ಪಟ್ಟ ಅಧಿಕಾರಿಗಳು (Inspectors), ಆಗಾಗ ಗ್ರಾಮಗಳ ಆಲೋಚನಾ ಸಭೆಗಳಿಗೆ ಒಂದು ಉಚಿತ ರೀತಿಯಲ್ಲಿ ಅಭಿವೃದ್ಧಿಕಾರ್ಯಗಳನ್ನು ಕೈಗೊಳ್ಳಲು ಸಲಹೆಯನ್ನು ಕೊಡುತ್ತಿರುತ್ತಾರೆ* ಹೀಗೆ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ಕ್ರೀಡಾಕ್ಷೇತ್ರಗಳಲ್ಲಿ ದೇಶದ ಗ್ರಾಮಗಳಲ್ಲೆಲ್ಲಾ ಅಭಿವೃದ್ಧಿ ಕಾರ್ಯಗಳು ಮುಂದುವರಿಯುತ್ತಾ ಇವೆ

ಈಗ್ಗೆ ಕೆಲವು ವರ್ಷಗಳ ಹಿಂದೆ ರಷ್ಯಾದೇಶವು ಭರತಖಂಡಕ್ಕಿಂತಲೂ ಹಿಂದುಳಿದ ದೇಶವಾಗಿತ್ತು ವ್ಯವಸಾಯಕ್ಕೆ ಸಂಬಂಧಪಟ್ಟ ಯಂತ್ರೋಪಕರಣಗಳನ್ನು ತಯಾರಿಸುವುದಾಗಲಿ ಅಥವಾ ಸಾಗುವಳಿ ಜಮೀನನ್ನು ಫಲವತ್ತು ಮಾಡುವ ಉದ್ಯಮಗಳಾಗಲಿ, ಅವರಿಗೆ ತಿಳಿದೇ ಇರಲಿಲ್ಲ ದೇಶದ ಸಾಗುವಳಿ ಜಮೀನಿನ ಹೆಚ್ಚು ಭಾಗವು ಐಶ್ವರ್ಯವಂತರ ಪಾಲಾಗಿ ಬಡರೈತರು ಜಮೀನಿನಿಂದ ಜೀವನಮಾಡುವುದೇ ಕಷ್ಟವಾಗಿತ್ತು ಹೀಗಿರುವಲ್ಲಿ ಸ್ವಲ್ಪಕಾಲದಲ್ಲಿಯೇ ರಾಜ್ಯಾಡಳಿತದಲ್ಲಿ ಬದಲಾವಣೆಯುಂಟಾಯಿತು ಕೂಡಲೇ ದೇಶದ ವ್ಯವಸಾಯದ ಜಮೀನೆಲ್ಲಾ ರಾಷ್ಟ್ರದ ಸ್ವತ್ತೆಂಬ ಭಾವನೆಯುಂಟಾಯಿತು ಅನಂತರ ವ್ಯವಸಾಯವನ್ನು ಉತ್ತಮವಾದ ಮತ್ತು ಲಾಭದಾಯಕವಾದ ವೃತ್ತಿಯನ್ನಾಗಿ ಮಾಡುವುದಕ್ಕೆ ಪ್ರಯತ್ನಗಳಾರಂಭವಾದುವು ಇವಕ್ಕೆ ಅನುಕೂಲವಾದ ಸಂಸ್ಥೆಗಳೂ ಸ್ಥಾಪಿತವಾದವು

* "The Panjab Peasent in Prosperity and Debt", by M L Darling, p 186
"Rural Reconstruction in India", by Sir M V, p 20

ಹೀಗೆ ನೂತನ ರೀತಿಯಲ್ಲಿ ಸ್ಥಾಪಿಸಿದ ಸಂಸ್ಥೆಗಳಿಗೆ 'ಕೊಲ್‌ಹೋಜ್' (Kolhoz) ಎಂದು ಹೆಸರು ಈ ಸಂಸ್ಥೆಗಳು ಅನೇಕ ರೈತರ ಸಂಸಾರಗಳನ್ನೊಳಗೊಂಡಿವೆ ಪರಸ್ಪರ ಸಹಕಾರದಿಂದ ಎಲ್ಲಾ ಸಾಗುವಳಿ ಕಾರ್ಯಗಳೂ ನಡೆಯುತ್ತಿವೆ ವಿಸ್ತಾರವಾದ ವ್ಯವಸಾಯ ಕ್ಷೇತ್ರಗಳಲ್ಲಿ ಎಲ್ಲರೂ ಒಟ್ಟಿಗೆ ಸೇರಿ ಕೆಲಸಮಾಡಿ, ಕ್ಷೇತ್ರದ ಒಟ್ಟು ಉತ್ಪತ್ತಿಯ ಕೆಲವು ಭಾಗವನ್ನು ಸರ್ಕಾರಕ್ಕೆ ಮಾರುವುದು, ಇನ್ನು ಕೆಲವು ಭಾಗವನ್ನು ಒಳ್ಳೆಯ ಬೆಲೆಗೆ ಮಾರುವುದಕ್ಕೆ ದೊಡ್ಡ ಮಂಡಿಗಳಿಗೆ ಕಳುಹಿಸುವುದು ಮತ್ತು ಕ್ಷೇತ್ರದಿಂದ ಉಂಟಾದ ಲಾಭವನ್ನು ಪ್ರತಿಯೊಬ್ಬರೂ ಸರಿಯಾಗಿ ಹಂಚಿಕೊಳ್ಳುವುದು — ಇವೇ ಮುಂತಾದ ಕೆಲಸಗಳನ್ನು ಸುವ್ಯವಸ್ಥಿತ ರೀತಿಯಲ್ಲಿ 'ಕೊಲ್‌ಹೋಜ್' ಸಂಸ್ಥೆಗಳು ನಡೆಸುತ್ತಿವೆ

ರಷ್ಯಾ ದೇಶದ ಈ ಹೊಸ ಕಾರ್ಯಕ್ರಮವು ಅತ್ಯುತ್ತಮವಾದುದೆಂದು ತೋರುತ್ತದೆ ನಾವಿರಾರು ಜನಗಳು ಒಂದೇ ಒಂದು ಸಂಸಾರದ ಹಾಗೆ ಒಟ್ಟಿಗೆ ಸೇರಿ ಕೆಲಸಮಾಡಿ, ತಮ್ಮ ವ್ಯಕ್ತಿ ಸ್ವಾತಂತ್ರ್ಯಗಳನ್ನು ಕಳೆದುಕೊಳ್ಳದೆ, ಸುಖವಾಗಿ ಜೀವನಮಾಡುತ್ತಿದ್ದಾರೆ ಕೆಲವು ಕ್ಷೇತ್ರಗಳು ಕ್ಷೀರಶಾಲೆಗಳನ್ನು ಸ್ಥಾಪಿಸಿವೆ ಇನ್ನು ಕೆಲವು ಕ್ಷೇತ್ರಗಳು ವೈದ್ಯ ಪಶುವೈದ್ಯ ಶಾಖೆಗಳಲ್ಲಿ ಪರಿಶೋಧನಗಳನ್ನು ನಡೆಸಿ, ವ್ಯವಸ್ಥಿತವಾದ ಕಾರ್ಯಕ್ರಮವನ್ನು ಪ್ರಚಾರಮಾಡುತ್ತಿವೆ ಇಲ್ಲಿ ದನಕರುಗಳ ಪಾಲನೆಯು ಒಂದು ವಿಧವಾದ ವೈಶಿಷ್ಟ್ಯದಿಂದ ಕೂಡಿದೆ ರಷ್ಯಾ ದೇಶದ ಪ್ರತಿ ಮೂಲೆಯಲ್ಲಿಯೂ 'ಕೊಲ್‌ಹೋಜ್' ಸಂಸ್ಥೆಗಳು ಪ್ರಾರಂಭವಾಗಿ ಪ್ರತಿಯೊಂದು ಹಳ್ಳಿಯ ಜನಗಳ ಸುಖಜೀವನಕ್ಕೆ ಅನುಕೂಲಗಳನ್ನು ಕಲ್ಪಿಸುತ್ತಾ ಇವೆ ಅನೇಕ ಹಳ್ಳಿಗಳ ಗುಡಿಸಲುಗಳಲ್ಲಿ ನವೀನ ನಾಗರಿಕತೆಯ ಕುರುಹಾಗಿರತಕ್ಕ ಗ್ರಾಮಫೋನ್, ಪುಸ್ತಕ ಭಂಡಾರ, ರೇಡಿಯೋ ಸೆಟ್ — ಇವುಗಳನ್ನು ನಾವು ಈಗ ನೋಡಬಹುದು

ರಷ್ಯಾ ದೇಶದ ಜನಸಮುದಾಯದಲ್ಲಿ ಒಂದು ವಿಧವಾದ ತೃಪ್ತಿಯೂ ಸಂತೋಷವೂ ಹೆಚ್ಚುತ್ತಾ ಇದೆ ಹೀಗೆ ರಷ್ಯಾ ದೇಶವು ಈ ಹೊಸ ಉದ್ಯಮಗಳಿಂದ ರೈತರ ಕಷ್ಟತರವಾದ ಸಮಸ್ಯೆಗಳನ್ನು ಬಗೆಹರಿಸಿ, ಅವರ ವ್ಯವಸಾಯಕ್ಕೆ ಅನುಕೂಲವಾದ ಯಂತ್ರೋಪಕರಣಗಳನ್ನು

ಯಥೇಚ್ಛವಾಗಿ ಒದಗಿಸುತ್ತಾ ಇದೆ ರಷ್ಯಾ ದೇಶದಲ್ಲಿಯೇ ತಯಾರಾದ ಟ್ರಾಕ್ಟರುಗಳು ೩೦ ಲಕ್ಷಕ್ಕಿಂತ ಹೆಚ್ಚಾಗಿ ಅಲ್ಲಿಯ ಸಾಗುವಳಿ ಕೆಲಸಗಳಿಗಾಗಿ ಉಪಯೋಗದಲ್ಲಿವೆ ಈ ರೀತಿ ಟ್ರಾಕ್ಟರುಗಳನ್ನು ಮತ್ತು ಇತರ ವ್ಯವಸಾಯ ಯಂತ್ರೋಪಕರಣಗಳನ್ನು ತಯಾರುಮಾಡುವುದರಲ್ಲಿ ರಷ್ಯಾ ದೇಶವು ಈಗ ಪ್ರಪಂಚದಲ್ಲೆಲ್ಲಾ ಮೊದಲನೆಯದಾಗಿದೆ ಹೀಗೆ ಅಲ್ಲಿ ವ್ಯವಸಾಯಕ್ರಮದ ಪುನರ್ವ್ಯವಸ್ಥೆಯೂ ಮತ್ತು ಅಭಿವೃದ್ಧಿಕಾರ್ಯಗಳೂ, ಸುವ್ಯವಸ್ಥಿತವಾದ ಹೊಸ ಸಂಸ್ಥೆಗಳ ಸ್ಥಾಪನೆಯಿಂದುಂಟಾಯಿತೆಂದು ಹೇಳಬಹುದು *

ಅಮೇರಿಕಾ ದೇಶದ ವ್ಯವಸಾಯ ಶಾಖೆಯ ವ್ಯವಸ್ಥಾಕ್ರಮವೂ ಮತ್ತು ಅದು ಆಚರಿಸುತ್ತಿರುವ ಕೆಲವು ಉದ್ಯಮಗಳೂ ಆದರ್ಶಪ್ರಾಯವಾಗಿವೆ ಇಲ್ಲಿಯ "ವ್ಯವಸಾಯ ಶಾಖೆಯು ಒಂದು ವಿಶ್ವವಿದ್ಯಾನಿಲಯದಂತಿದೆ ವಿಶ್ವವಿದ್ಯಾನಿಲಯದ ಮುಖ್ಯ ಕೆಲಸವು ಬೋಧನೆ ಮತ್ತು ಪರಿಶೋಧನೆ ಅಮೇರಿಕಾ ದೇಶದ ವ್ಯವಸಾಯ ಶಾಖೆಯ ಸಮಿತಿಯು (Board of Agriculture) ಸಾವಿರಾರು ಜನ ವ್ಯವಸಾಯಶಾಸ್ತ್ರದ ನಿಪುಣರನ್ನು ತಮ್ಮ ಪರಿಶೋಧನಾ ಕೆಲಸದ ಫಲಗಳಾದ ಉತ್ತಮ ಕಾರ್ಯಕ್ರಮವನ್ನು ಪ್ರಚಾರಮಾಡುವುದಕ್ಕೆ, ದೇಶದ ಎಲ್ಲಾ ಭಾಗಗಳಿಗೂ ಕಳುಹಿಸುತ್ತದೆ ಅಲ್ಲಿರುವ ವಿಸ್ತಾರವಾದ ಪ್ರತಿಯೊಂದು ವ್ಯವಸಾಯ ಕ್ಷೇತ್ರದಲ್ಲಿ ಸಾವಿರಾರು ನಿಪುಣರು ವ್ಯವಸಾಯ ಶಾಸ್ತ್ರದ ಪರಿಶೋಧನಾ ಕೆಲಸಗಳನ್ನು ನಡೆಸುವುದಕ್ಕೆ ನಿಯಮಿತರಾಗಿದ್ದಾರೆ ಅವರ ಪರಿಶೋಧನಾ ಕೆಲಸಗಳ ನಿರ್ಣಯಗಳನ್ನೂ ಮತ್ತು ಅನುಭವಗಳನ್ನೂ ಸಣ್ಣ ಪುಸ್ತಕಗಳ ರೂಪದಲ್ಲಿ ಬರೆದು, ದೇಶದ ಎಲ್ಲಾ ಭಾಗಗಳಲ್ಲಿಯೂ ಹಂಚುತ್ತಾರೆ ಪಾಠಶಾಲೆಗಳಲ್ಲಿಯೂ ಮತ್ತು ಹಳ್ಳಿಗಳಲ್ಲಿಯೂ, ಇದೇ ವಿಷಯಗಳನ್ನು ಬೋಧಿಸುತ್ತಾರೆ ಹೀಗೆ ಅಮೇರಿಕಾ ದೇಶದ ವ್ಯವಸಾಯ ಶಾಖೆಯು ಹೆಚ್ಚು ಸಾಹಿತ್ಯವನ್ನು ಪ್ರಕಟಿಸುವುದಲ್ಲದೆ, ಅನೇಕ ಅಭಿವೃದ್ಧಿಕಾರ್ಯಗಳನ್ನು ಆಚರಣೆಯಲ್ಲಿ ರೈತರು ತರುವಂತೆ ಮಾಡುತ್ತಿದೆ †

* "Rural Reconstruction in Soviet Russia", by Abdul Aziz Azad, p 51, 'Bombay Chronicle', Aug 2, 1936

† "America's Secret", by J Ellis Barker, pp 243 245

ಇಂಡಿಯಾ ದೇಶದ ರೈತರ ಹೀನಸ್ಥಿತಿಗೆ ಅನೇಕ ಕಾರಣಗಳಿವೆ ಜರ್ಮನಿ ರಷ್ಯಾ ಇನ್ನೂ ಇತರ ಪಾಶ್ಚಾತ್ಯ ದೇಶಗಳಲ್ಲಿ ಆಯಾಯ ದೇಶದ ಸ್ಥಳವಿದ್ಯಮಾನಗಳಿಗೆ ಅನುಗುಣವಾಗಿ ವ್ಯವಸಾಯಕ್ರಮುವನ್ನು ಸಕಾಲದಲ್ಲಿ ವ್ಯವಸ್ಥೆಗೊಳಿಸಿ, ಗ್ರಾಮ ಪುನರುಜ್ಜೀವನ ಕಾರ್ಯಕ್ರಮುವನ್ನು ಕೈಗೊಂಡಿದ್ದಾರೆ ಆದುದರಿಂದ ಅಲ್ಲಿಯ ಗ್ರಾಮುಗಳ ಪರಿಸ್ಥಿತಿಯು ಉತ್ತಮಗೊಂಡಿದೆ ನಮ್ಮ ದೇಶದಲ್ಲಿ ಅಂತಹ ಉದ್ಯಮಗಳು ಸರಿಯಾದ ಕ್ರಮುದಲ್ಲಿ ಆಚರಣೆಗೆ ಬಂದಿಲ್ಲ ಇಲ್ಲಿಯು ವ್ಯವಸಾಯಕ್ರಮುವು ಪುರಾತನವಾದುದು ಜಮೀನಿನ ಆದಾಯ ಬಹಳ ಕಡಿಮೆ ಇಂಡಿಯಾ ದೇಶದ ರೈತರ ಮುತ್ತು ಇತರ ದೇಶಗಳ ರೈತರ ಉತ್ಪತ್ತಿಯ ವ್ಯತ್ಯಾಸವನ್ನು ಈ ಕೆಳಗಿನ ತಃಖ್ತೆಯಿಂದ ನಾವು ಚೆನ್ನಾಗಿ ತಿಳಿಯುಬಹುದು —

| ವರ್ಷ | ದೇಶದ ಹೆಸರು | ಒಂದು ಎಕರೆಯಲ್ಲಿ ಬೆಳೆಯುವ ಭತ್ತ ತೂಕದ ಪೌಂಡು | ಒಂದು ಎಕರೆಯಲ್ಲಿ ಬೆಳೆಯುವ ಗೋಧಿ ತೂಕದ ಪೌಂಡು |
|---|---|---|---|
| ೧೯೩೧—೩೨ | ಇಟಲಿ | 4601 | 1241 |
| ,, | ಜಪಾನ್ | 2767 | 1508 |
| ,, | ಈಜಿಪ್ಟ್ | 2356 | 1688 |
| ,, | ಅಮೇರಿಕಾ | 2112 | 973 |
| ,, | ಇಂಗ್ಲೆಂಡ್ | . | 1812 |
| ,, | ಜರ್ಮನಿ | | 1740 |
| ,, | ಇಂಡಿಯಾ | 1357 | 652* |

ಭರತಖಂಡದಲ್ಲಿ ಕೂಲಿ ಕೆಲಸವು ಫಲದಾಯಕವಾಗಿಲ್ಲ ಇಲ್ಲಿಯ ಉಳುಮೆ ಮುತ್ತು ಪೈರು ರೇಖೆಯ ಕೆಲಸಗಳನ್ನು, ಯಂತ್ರ ಸಹಾಯವಿಲ್ಲದ ಇಂಗ್ಲೆಂಡ್ ದೇಶದ ಕೂಲಿಗಾರರ ಸಂಗಡ ಹೋಲಿಸಿದರ, ಇಲ್ಲಿ ಒಂದು ವಾರದಲ್ಲಿ ಒಬ್ಬನು ಮಾಡುವ ಕೆಲಸವನ್ನು ಅಲ್ಲಿ ಒಬ್ಬನು ಒಂದೇ ದಿವಸದಲ್ಲಿ ಮಾಡುವನೆಂದು ಹೇಳಬಹುದು ಡಾ॥ ಮುನ್‌ರವರು "ಇಂಗ್ಲೆಂಡ್ ದೇಶದ ಕೂಲಿಯಾಳುಗಳು ದಕ್ಷಿಣ ಇಂಡಿಯಾ ದೇಶದ

* "Statisti‑al Year Book of the League of N itions", 1932—33

ಕೂಲಿಗಳಿಗಿಂತ ಎರಡೂವರೆಯಷ್ಟು ಉತ್ತಮರಾಗಿದ್ದಾರೆಂದು'' ಹೇಳಿದ್ದಾರೆ ತಕ್ಕ ಪ್ರತಿಫಲವಿಲ್ಲದ ಕೂಲಿ, ಕೀಳು ಮಟ್ಟದ ಜೀವನ, ಕಡಿಮೆ ಸಾಮರ್ಥ್ಯ, ಇವುಗಳು ಇಲ್ಲಿಯ ರೈತರ ನಿತ್ಯಜೀವನದ ಲಕ್ಷಣಗಳಾಗಿವೆ ಈ ದೋಷಗಳ ಪರಸ್ಪರ ಸಂಯೋಗದಿಂದ ಯಾವುದು ಕಾರಣ, ಯಾವುದು ಪರಿಣಾಮ ಎಂಬುದನ್ನು ನಿರ್ಧರಿಸುವುದೇ ಕಷ್ಟವಾಗಿದೆ *

ವ್ಯವಸಾಯಾಭಿವೃದ್ಧಿಯೂ, ಆರ್ಥಿಕ ಪುನರ್ನಿರ್ಮಾಣ ಸಮಸ್ಯೆಗಳೂ ಬಹಳ ತೊಡಕಾದುವು ಇವುಗಳಿಂದ ಉಂಟಾಗುವ ಕಷ್ಟಗಳನ್ನು ನಿವಾರಣೆಮಾಡುವುದಕ್ಕೆ, ಯಾವುದಾದರೂ ಒಂದೇ ಸಮಸ್ಯೆಯನ್ನು ಬಗೆಹರಿಸುವುದರಿಂದ ಸಾಧ್ಯವೇ ಇಲ್ಲ ರೈತರಿಗ ಅವರ ಆರ್ಥಿಕ ಸ್ಥಿತಿಯನ್ನೂ ಹೆಚ್ಚು ಲಾಭದಾಯಕವಾದ ವ್ಯವಸಾಯಕ್ರಮವನ್ನೂ ಚೆನ್ನಾಗಿ ತಿಳಿಸಿ, ಸಂಪಾದನೆಯನ್ನು ಹೆಚ್ಚಿಸುವ ಕಾರ್ಯಕ್ರಮವನ್ನು ಬೋಧಿಸಬೇಕು ಅವರು ದನಕರುಗಳನ್ನು ಉತ್ತಮವಾಗಿ ಸಾಕುವ ವಿಧಾನವನ್ನೂ, ವಿಜ್ಞಾನ ರೀತಿಯ ವ್ಯವಸಾಯಕ್ರಮವನ್ನೂ, ಕಲಿಯಬೇಕು ಇದಕ್ಕೆ ಉತ್ತಮವಾದ ಗ್ರಾಮ ಪುನರುಜ್ಜೀವನ ಕಾರ್ಯಕ್ರಮವು ವ್ಯವಸ್ಥಿತವಾಗಬೇಕು ಅಂತಹ ಕಾರ್ಯಕ್ರಮವನ್ನು ವಿಮರ್ಶೆ ಮಾಡುವಾಗ ಅಮೇರಿಕಾ, ಕಾನಡಾ ದೇಶಗಳ ''ಫಾರ್ಮರ್ಸ್ ಇನ್ಸ್ಟಿಟ್ಯೂಟ್'' ಸಂಸ್ಥೆಗಳನ್ನೂ, ಫ್ರಾನ್ಸ್ ದೇಶದ ವ್ಯವಸಾಯ ಕಾರ್ಯಕಾರೀ ಮಂಡಳಿಗಳನ್ನೂ (Syndicate) ಜ್ಞಾಪಕದಲ್ಲಿಟ್ಟುಕೊಳ್ಳಬೇಕು

ಸಾರಭೂತನಾದ ಗ್ರಾಮ ಪುನರ್ರಚನೆಯ ಕ್ರಮಕ್ಕೆ ಅನೇಕ ಮಾರ್ಗಗಳಿವೆ ಕಾರ್ಯಕ್ರಮವನ್ನು ಆಚರಿಸುವುದಕ್ಕೆ ಮೊದಲು, ವಿದ್ಯಾವಂತರಾದ ಮತ್ತು ಉತ್ಸಾಹಪರರಾದ ಯುವಕರು ರಚನಾಕ್ರಮದಲ್ಲಿ ತರಪೇತಾಗಬೇಕು ಅನಂತರ ಅವರು ಹಳ್ಳಿಯ ಜನರ ನಂಬಿಕೆಗೆ ಪಾತ್ರರಾಗಿ, ಅವರಿಗ ಚೆನ್ನಾಗಿ ಮುಂದಟ್ಟಾಗುವಂತ ವ್ಯವಸಾಯ ಲೋಪಗಳನ್ನೂ, ಪಶುಪಾಲನಾ ನ್ಯೂನತೆಗಳನ್ನೂ, ಸೋಮಾರಿತನದ ನಷ್ಟಗಳನ್ನೂ ತಿಳಿಸಬೇಕು ಯಾವ ಉಪವೃತ್ತಿಗಳ ಸಹಾಯದಿಂದ

* "Some South Indian Villages", by Dr Slater, P M

ಅವರು ತಮ್ಮ ಸಂಪಾದನೆಯನ್ನು ಉತ್ತಮಪಡಿಸಿಕೊಳ್ಳಬಹುದೆಂಬು ದನ್ನು ವಿವರಿಸಬೇಕು ಇಂತಹ ಉತ್ತಮ ಕಾರ್ಯಗಳಿಗೆ ಡೆನ್ಮಾರ್ಕ್, ಸ್ವೀಡನ್ ಮತ್ತು ಜಪಾನ್ ದೇಶಗಳಲ್ಲಿ ಒಳ್ಳೆಯ ಸಹಕಾರ ಸಂಸ್ಥೆಗಳು, ಹೇಗೆ ಸರ್ವತೋಮುಖವಾದ ಕೆಲಸಗಳನ್ನು ನಡೆಸಿ, ರೈತರ ಜೀವನ ವನ್ನೂ, ಸಂಪಾದನಾ ಶಕ್ತಿಯನ್ನೂ, ಅಭಿವೃದ್ಧಿಪಡಿಸುತ್ತಾ ಇವೆ ಎಂಬುದನ್ನು ಅವರಿಗೆ ಹೇಳಬೇಕು ಅಂತಹ ಸಂಸ್ಥೆಗಳನ್ನು ಇಲ್ಲಿಯೂ ಸ್ಥಾಪಿಸಿ, ರೈತರೆಲ್ಲರೂ ಅವುಗಳಲ್ಲಿ ಭಾಗವಹಿಸಿ ತಮ್ಮ ಸ್ಥಿತಿಯನ್ನು ಬದಲಾಯಿಸಿಕೊಳ್ಳಲು ಅವರಿಗೆ ಉತ್ತೇಜನವನ್ನು ಕೊಡಬೇಕು

"ಉತ್ತಮ ವ್ಯವಸಾಯಕ್ರಮ, ಒಳ್ಳೆಯ ವ್ಯಾಪಾರ ವ್ಯವಸ್ಥೆ ಮತ್ತು ಮೇಲುಮಟ್ಟದ ಜೀವನ"—ಇವುಗಳು ಗ್ರಾಮ ಪುನರ್ರಚನೆಯ ಮುಖ್ಯ ತತ್ವಗಳು ಕೃಷಿಯನ್ನು ಅಭಿವೃದ್ಧಿಪಡಿಸುವುದು ಪುನರ್ರಚನೆಯ ಮೊದಲನೆಯ ಅಂಗವಾಗಿದೆ ಸಾಗುವಳಿಯಿಂದ ಒಳ್ಳೆಯ ಬೆಳೆಯನ್ನು ತೆಗೆಯಬೇಕಾದರೆ ಅದಕ್ಕೆ ಸಂಬಂಧಪಟ್ಟ ನೀರಾವರಿ, ಬೀಜ, ಗೊಬ್ಬರ, ಇತರ ಉಪಕರಣಗಳು, ಇವುಗಳ ಸಮಸ್ಯೆಗಳನ್ನು ಬಗೆಹರಿಸಿ, ಸರಿಯಾದ ಕಾರ್ಯಕ್ರಮವನ್ನು ಕೈಗೊಳ್ಳಬೇಕು ಇದರಿಂದ ಭೂಮಿಯ ಉತ್ಪತ್ತಿ ಹೆಚ್ಚುವುದಲ್ಲದೆ, ರೈತರ ಜೀವನವು ಉತ್ತಮವಾಗುವುದು.

ಪುನರುಜ್ಜೀವನದ ಯೋಜನೆಯು (Plan) ವ್ಯವಸಾಯಕ್ಕೆ ಸಂಬಂಧಪಟ್ಟ, ಔದ್ಯೋಗಿಕ ಮತ್ತು ವೈಜ್ಞಾನಿಕ ಸುಧಾರಣೆಗಳನ್ನೊಳ ಗೊಂಡಿರಬೇಕು ಅದು ಇಲ್ಲಿಯ ಶಿಕ್ಷಣಕ್ರಮ, ಜೀವನದ ಪರಿಸ್ಥಿತಿ— ಇವುಗಳನ್ನು ಸರಿಪಡಿಸುವುದಾಗಿರಬೇಕು ರೈತರ ಆರ್ಥಿಕಜೀವನ ಸಮಸ್ಯೆಗಳನ್ನು ಬಗೆಹರಿಸುವುದಕ್ಕೆ, ಸಹಕಾರೋದ್ಯಮಗಳೇ ರಾಮ ಬಾಣಗಳೆಂದು, ನಮ್ಮ ರೈತರಿಗೆ ಚೆನ್ನಾಗಿ ತಿಳಿಯಬೇಕು ಒಟ್ಟಿನಲ್ಲಿ ವ್ಯವಸಾಯಿಕ ಆರ್ಥಿಕ ಸಮಸ್ಯೆಯೇ ವ್ಯವಸಾಯದ ಚರಿತ್ರೆ ಇಂತಹ ಚರಿತ್ರೆಯ ಅಭ್ಯಾಸದಿಂದ ರೈತರ ಉತ್ಪತ್ತಿ ಹೆಚ್ಚಿ ಅವರ ಆರ್ಥಿಕಾಭಿ ವೃದ್ಧಿಗೆ ಅನುಕೂಲವಾಗುವುದು

ಗ್ರಾಮೋದ್ಧಾರದ ವ್ಯವಹಾರಿಕ ಭಾಗವು ಯಾವಾಗಲೂ ರೈತರ ನಿರೀಕ್ಷಣೆಯನ್ನು ಈಡೇರಿಸುವುದಾಗಿರಬೇಕು ಅದರಲ್ಲಿ ರೈತರು

ಕಷ್ಟಪಟ್ಟು ಕೆಲಸಮಾಡಿದರೆ ಫಲ ಬರುವಂತಹ ಸಲಹೆಗಳಿರಬೇಕು ಅವರಿಗೆ ಮಿತವ್ಯಯದ ಮಹತ್ವವನ್ನು ತಿಳಿಸಿ, ಉತ್ತಮ ಫಲ ದೊರೆಯುವಂತಹ ಯೋಗ್ಯವಾದ ಸೂಚನೆಗಳಿರಬೇಕು ರೈತರ ಜೀವನವನ್ನು ಸುಖಮಯವಾಗಿಯೂ, ಆರೋಗ್ಯಕರವಾದುದನ್ನಾಗಿಯೂ ಮಾಡುವುದೇ ಗ್ರಾಮಪುನರುದ್ಧಾರದ ಮುಖ್ಯ ತತ್ವವಾಗಿದೆ ಇಂತಹ ಉದ್ಯಮಗಳನ್ನು ಪ್ರಚಾರಕ್ಕೆ ತರುವ ಮೊದಲು, ಹಳ್ಳಿಯ ಹೊರವಳಯುವನ್ನು ಸರಿಪಡಿಸಬೇಕು ಇದಕ್ಕೆ ನಮ್ಮ ವಿದ್ಯಾವಂತರಾದ, ತರಪೇತಾದ ಯುವಕರು ಪ್ರಚಾರಕಾರ್ಯಗಳನ್ನು ನಡೆಸಬೇಕು ರೈತರ ಏಳಿಗೆಯೆಂಬುದು ಹೊರಗಡೆಯಿಂದ ಕೊಳ್ಳತಕ್ಕ ಪದಾರ್ಥವಲ್ಲವೆಂಬುದನ್ನೂ, ಅದು ಅವರ ಸ್ವಸಾಮರ್ಥ್ಯದಿಂದಲೇ ಅವರಿಗ ಬರಬೇಕೆಂಬುದನ್ನೂ, ಅವರಿಗ ತಿಳಿಸಬೇಕು ಪ್ರತಿಯೊಬ್ಬ ರೈತನೂ ತನ್ನ ಅಭಿವೃದ್ಧಿಯು, ತನ್ನ ಸ್ವಂತ ಕೆಲಸದಿಂದಲೇ ಆಗುವುದೆಂದು ತಿಳಿದರೆ, ಗ್ರಾಮ ಪುನರುದ್ಧಾರ ಕಾರ್ಯವು ಸುಲಭವಾಗುವುದು

ಇಂತಹ ಉತ್ತಮ ಪ್ರಚಾರಕಾರ್ಯಕ್ಕೆ ದಕ್ಷರಾದ, ಪ್ರೀತಿಯಿಂದ ಕೆಲಸಮಾಡತಕ್ಕ ವಿದ್ಯಾವಂತರು ಅವಶ್ಯಕವಾಗಿವೆ ಕಲಸವನ್ನು ಹಳ್ಳಿಗಳಲ್ಲಿ ಪ್ರಾರಂಭಿಸುವುದಕ್ಕೆ ಮೊದಲು, ಅವರು ಕೆಲವು ಅವಶ್ಯಕ ಉಪಕರಣಗಳನ್ನು ಪಡೆಯಬೇಕು ಪುನರ್ರಚನೆಯ ಮಹತ್ವವನ್ನು ಚೆನ್ನಾಗಿ ತಿಳಿದು, ಅವರಲ್ಲಿ ಸ್ವಲ್ಪ ಅನುಭವವನ್ನು ಪಡೆಯಬೇಕು ಈ ಪುಸ್ತಕದ ಪರಿಶಿಷ್ಟದಲ್ಲಿ ನಮೂದಿಸಿರುವಂತ, ಅವರಿಗೆ ಗ್ರಾಮ ಪುನರುಜ್ಜೀವನ ಕ್ರಮದಲ್ಲಿ ಶಿಕ್ಷಣಕೊಡಬೇಕು ಅತಿಮುಖ್ಯವಾದ ಕೆಲವು ವಿಷಯಗಳಲ್ಲಿ, ಅವರನ್ನು ತರಪೇತುಮಾಡಬೇಕು ಅವರು ಅಲ್ಲಿ ಗಳಿಸಿದ ಅನುಭವವನ್ನೂ, ಪಾಂಡಿತ್ಯವನ್ನೂ, ಹಳ್ಳಿಗಳಲ್ಲಿ ಪ್ರಚಾರಕ್ಕೆ ತಂದರ, ಅವರ ಕಲಸವು ಸುಲಭವಾಗಿ ನಮ್ಮ ಹಳ್ಳಿಗಳಿಗೂ ಹೆಚ್ಚು ಪ್ರಯೋಜನವಾಗುವುದು ಹಳ್ಳಿಯ ಸಂಪದಭಿವೃದ್ಧಿಗೂ, ಅಲ್ಲಿಯ ಜೀವನವನ್ನು ಉತ್ತಮಪಡಿಸುವುದಕ್ಕೂ ಅನುಕೂಲವಾದ ಕಾರ್ಯಕ್ರಮಗಳ ತತ್ವವನ್ನು ಬೋಧಿಸಿದರೆ, ಪ್ರಚಾರಕರಿಗೆ ಅವರ ಕೆಲಸವು ಅನಂತರ ಸುಲಭವಾಗುವುದು ಪ್ರಚಾರಕರಲ್ಲಿ ಪ್ರಾಮಾಣಿಕತೆಯೂ, ಧೈರ್ಯವೂ, ದೇಶಪ್ರೀತಿಯೂ ಇರಬೇಕು.

ಶಿಕ್ಷಣಕ್ರಮದಿಂದ, ಉತ್ತಮರಾದ, ಪ್ರಚಾರಕರನ್ನು ತರಪೇತು ಮಾಡಬಹುದು

ಗ್ರಾಮ ಪುನರುಜ್ಜೀವನಕ್ಕೆ ವಿದ್ಯಾ ಪ್ರಚಾರವೂ, ಸಹಕಾರ ಪ್ರಚಾರವೂ, ಮುಖ್ಯವಾದ ಅಂಗಗಳು ರೈತರು ವಿದ್ಯಾವಂತರಾದರೆ, ಭೂಮಿಯಲ್ಲಿ ಹೆಚ್ಚು ಬೆಳೆಯನ್ನು ಬೆಳೆಯುವರು ಸಹಕಾರ ತತ್ವದ ಪ್ರಚಾರವು ತಿಳಿದರೆ, ಬೆಳೆದ ಪೈರಿಗ ಬೆಲೆಯನ್ನು ಅಧಿಕವಾಗಿ ತೆಗೆಯಲು ಅವರಿಗೆ ಸುಲಭೋಪಾಯಗಳು ಗೊತ್ತಾಗುವುವು

ಭರತಖಂಡದಲ್ಲಿ ನಿರುದ್ಯೋಗಿಗಳಾದ ವಿದ್ಯಾವಂತರ ಸಮಸ್ಯೆಯು ದಿನೇ ದಿನೇ ಕಠಿಣವಾಗುತ್ತಿದೆ ಸಪ್ರು ಸಮಿತಿಯವರ, ಅವರಾಲ್ಯ ಸಲಹೆಯ ಪ್ರಕಾರ, ನಮ್ಮ ದೇಶದ ಅನೇಕ ಪ್ರಾಂತೀಯ ಸರಕಾರಗಳು, ನಿರುದ್ಯೋಗ ನಿವಾರಣಾ ಕಾರ್ಯಗಳನ್ನು ಕೈಗೊಳ್ಳುತ್ತಿವೆ ಕೆಲವು ಪ್ರಾಂತಗಳಲ್ಲಿ ವ್ಯವಸಾಯ ಕ್ಷೇತ್ರಗಳನ್ನು ನಿರ್ಮಿಸಿ, ನಿರುದ್ಯೋಗಿಗಳನ್ನು ಅಲ್ಲಿ ನೆಲಸುವಂತೆ ಮಾಡುತ್ತಿದ್ದಾರೆ ಇನ್ನು ಕಲವು ಪ್ರಾಂತಗಳಲ್ಲಿ ಸಣ್ಣ ಸಣ್ಣ ಕೈಗಾರಿಕೋದ್ಯಮಗಳನ್ನು ಕಲ್ಪಿಸಿ, ಸಾಧ್ಯವಾದಷ್ಟು ಜನರಿಗೆ ಜೀವನವನ್ನು ಕಲ್ಪಿಸಲಾಗಿದೆ ವಿದ್ಯಾವಂತರಾದ ಯುವಕರು, ಪರಿಶಿಷ್ಟ ವಲ್ಲಿ ಸೂಚಿಸಿರುವ ಕ್ರಮದಲ್ಲಿ, ಶಿಕ್ಷಣ ಪಡೆದು, ಗ್ರಾಮ ಪುನರುದ್ಧಾರ ಕಾರ್ಯಗಳಲ್ಲಿ ತೊಡಗಿದರೆ, ಅವರಿಗೂ ಉದ್ಯೋಗವು ದೊರೆಯುವುದು, ನಮ್ಮ ಹಳ್ಳಿಗಳಿಗೂ ಕೂಡ ಸುಖವಾಗುವುದು

ಗ್ರಾಮ ಪುನರುಜ್ಜೀವನ ಕಾರ್ಯಗಳಿಂದ, ನಮ್ಮ ದೇಶದ ಬಡತನ ವನ್ನು ನಿರ್ಮೂಲಮಾಡುವುದು ಸಾಧ್ಯವಿಲ್ಲ ಎಂಬುದು ಕಲವು ಅರ್ಥ ಶಾಸ್ತ್ರ ನಿಪುಣರ ಅಭಿಪ್ರಾಯ ಇದು ಸತ್ಯ ಆದರೆ ಬಡತನವನ್ನು ಪೂರ್ಣವಾಗಿ ಹೋಗಲಾಡಿಸುವುದೇ ಈ ಯೋಜನೆಗಳ ಮುಖ್ಯ ಉದ್ದೇಶ ವಲ್ಲ ಆದಷ್ಟು ಬಡತನವನ್ನು ಕಡಿಮೆಮಾಡಿ, ರೈತರ ಸಂಪಾದನೆ ಹೆಚ್ಚಿ ಅವರ ಜೀವನ ಉತ್ತಮವಾಗಬೇಕೆಂಬುದೇ, ಗ್ರಾಮ ಪುನರ್ರಚನಾ ಕ್ರಮದ ಮುಖ್ಯ ಉದ್ದೇಶವಾಗಿದೆ ಗ್ರಾಮೋದ್ಧಾರ ಕಾರ್ಯವು, ಮೊದಲು ಹಣವಂತರಿಂದ ಪ್ರಾರಂಭವಾಗಬೇಕು. ಅವರು ಬಡರೈತರಿಗೆ ಆದರ್ಶಪ್ರಾಯರಾಗಿ ಮುಂದೆ ಬಂದು, ಬಡರೈತರಲ್ಲಿ ಉತ್ಸಾಹವನ್ನೂ,

ಸಂಪಾದನಾ ಶಕ್ತಿಯನ್ನೂ ಹೆಚ್ಚಿಸಬೇಕು ರೈತರು ತಮ್ಮ ಜೀವನದ ಮಟ್ಟವನ್ನು ಸ್ವಲ್ಪಮಟ್ಟಿಗಾದರೂ ಏರಿಸಿಕೊಂಡು, ತಮ್ಮ ನಿತ್ಯಜೀವನಕ್ಕೆ ಆವಶ್ಯಕವಾದ ಅನುಕೂಲಗಳನ್ನು ಕಲ್ಪಿಸಿಕೊಳ್ಳುವಂತೆ ಆಗಬೇಕು

ಹಳ್ಳಿಗಳ ಉದ್ಧಾರಕಾರ್ಯವು ಚೆನ್ನಾಗಿ ನಡೆಯಬೇಕಾದರೆ, ನಮ್ಮ ದೇಶದ ಸ್ತ್ರೀಯರ ಸಹಕಾರವು ಅವಶ್ಯಕವಾಗಿದೆ ಹಳ್ಳಿಯ ಮನೆಗಳು ನಿರ್ಮಲವಾಗಿ ಹಳ್ಳಿಯ ರೈತರು ಆರೋಗ್ಯವಂತರಾಗಿರಬೇಕಾದರೆ, ಸ್ತ್ರೀಯರು ಈ ವಿಷಯಗಳಲ್ಲಿ ಹೆಚ್ಚು ಶ್ರಮವಹಿಸಬೇಕು ರೈತನಲ್ಲಿ ಮಿತವ್ಯಯದ ಅಭ್ಯಾಸವೂ, ಅವನ ಮಕ್ಕಳಿಗ ದೇಹದಾರ್ಢ್ಯವೂ ಹೆಚ್ಚಬೇಕಾದರೆ, ಮೊದಲು ಹಳ್ಳಿಯ ಸ್ತ್ರೀಯರು ಹೆಚ್ಚು ಶಿಕ್ಷಿತರಾಗಬೇಕು ಆದುದರಿಂದ ಪರಿಶಿಷ್ಟದ ಸೂಚನೆಯ ಪ್ರಕಾರ ಸ್ತ್ರೀಯರಿಗೂ ಶಿಕ್ಷಣ ಕೊಟ್ಟು ಹಳ್ಳಿಗಳಲ್ಲಿ ಅನುಕೂಲವಾದ ವಾತಾವರಣವನ್ನು ಕಲ್ಪಿಸಬೇಕು

ಮೊದಲು ನಮ್ಮ ರೈತರ ನೈತಿಕ, ಮಾನಸಿಕ, ಸಾಮಾಜಿಕ, ಶಾರೀರಕ, ಆರ್ಥಿಕ, ವಿಚಾರಗಳು ಸ್ವಲ್ಪವಾದರೂ ಉತ್ತಮವಾಗಬೇಕು ಮೇಲ್ಕಂಡ ಪ್ರತಿಯೊಂದು ಶಾಖೆಯಲ್ಲಿಯೂ, ಅಭಿವೃದ್ಧಿಕಾರ್ಯಕ್ರಮಗಳನ್ನು ಹೂಡಬೇಕು ನಮ್ಮ ರೈತರಿಗೆ ಮುಖ್ಯವಾಗಿ, ಪುಷ್ಟಿಯಾದ ಆಹಾರಕ್ಕೂ, ಅವರ ನಿತ್ಯಜೀವನಕ್ಕೆ ಅತ್ಯವಶ್ಯಕವಾದ ಪದಾರ್ಥಗಳಿಗೂ ಕೊರತೆಯಿಲ್ಲದಿರಬೇಕು ಹೀಗಾಗಬೇಕಾದರೆ ಗ್ರಾಮೋದ್ಧಾರ ಕಾರ್ಯಗಳು ಹೆಚ್ಚು ಚುರುಕಿನಿಂದ ಪ್ರಾರಂಭವಾಗಬೇಕು ಗ್ರಾಮ ಪುನರ್ರಚನೆಯ ಕೆಲಸಗಳಲ್ಲೆಲ್ಲಾ, ಆರ್ಥಿಕಯೋಜನೆಯೇ (Economic Planning) ಮುಖ್ಯವಾದುದು ಸ್ಥಳೀಯ ವಿದ್ಯಮಾನಗಳನ್ನು ಪರಿಶೀಲಿಸಿ, ಅಭಿವೃದ್ಧಿ ಕಾರ್ಯಕ್ರಮಗಳಿಗೆ ಒಂದು ಅವಧಿಯನ್ನು ಗೊತ್ತುಮಾಡಿ, ಸುಧಾರಣೆಗಳನ್ನು ಒಂದೊಂದಾಗಿ ಆಚರಣೆಯಲ್ಲಿ ತರಬೇಕು ಮುಂದುವರಿಯುತ್ತಿರುವ ಎಲ್ಲಾ ದೇಶಗಳಲ್ಲಿಯೂ ಇದೇ ಸಂಪ್ರದಾಯ

ವ್ಯವಸಾಯದಲ್ಲಿ ನೂತನವಾಗಿ ಉಂಟಾದ ಕಠಿಣ ಸಮಸ್ಯೆಗಳನ್ನು ಬಗೆಹರಿಸಿ, ರೈತರ ಜೀವನವನ್ನು ಸುಖಮಯವಾಗಿ ಮಾಡಲು ಇಂಗ್ಲೆಂಡ್, ಜರ್ಮನಿ, ರಷ್ಯಾ ಮುಂತಾದ ದೇಶಗಳಲ್ಲಿ ಆರ್ಥಿಕ ಯೋಜನೆಯೇ ಮೊದಲನೆಯ ಮೆಟ್ಟಲು ಪ್ರವಾಹಗಳಿಗೆ ಅಣೆಕಟ್ಟಿ,

ವಿಸ್ತಾರವಾದ ಬೈಲುಗಳ ಸಾಗುವಳಿಗೆ ನೀರನ್ನು ಒದಗಿಸುವುದಕ್ಕೆ, ಅಮೇರಿಕಾ ದೇಶದಲ್ಲಿ, ಆರ್ಥಿಕಯೋಜನೆಯೇ ಮೊದಲನೆಯ ಕಾರ್ಯವಾಯಿತು ಇಟಲಿಯಲ್ಲಿ ಕೂಡ, ನಾನಾ ಮುಖವಾದ ಆರ್ಥಿಕ ಯೋಜನೆಯು ನಡೆದಿದೆ ಹೀಗಿರುವಲ್ಲಿ ನಮ್ಮ ದೇಶದಲ್ಲಿಯೂ ಕೂಡ, ಸಾಧ್ಯವಾದಷ್ಟು ಬೇಗ ಒಂದು ಕಾರ್ಯಕ್ರಮವನ್ನು ಗೊತ್ತುಮಾಡಿಕೊಂಡು ಅದರಂತೆ ಆಚರಣೆಗೆ ತರುವುದು ಸೂಕ್ತವಾಗಿದೆ

ಭರತಖಂಡದ ಹಳ್ಳಿಗಳ ಬಡತನ ಬಹು ಕ್ರೂರವಾದುದು ಒಬ್ಬೊಬ್ಬ ರೈತನಿಗ ಬಂದಿರುವ ಜಮೀನು ಬಹು ಸ್ವಲ್ಪವೆಂಬ ವಿಷಯ ಇರಲಿ ವ್ಯವನಾಯದಲ್ಲಿ ಹೊಸ ಕ್ರಮವನ್ನು ಅನುಸರಿಸುವುದು ಇರಲಿ, ಇಂಡಿಯಾ ದೇಶಕ್ಕಿಂತಲೂ ಹೀನವಾಗಿದ್ದ ರಷ್ಯಾ ದೇಶವು ಕೇವಲ ಸ್ವಲ್ಪ ಕಾಲದಲ್ಲಿ ಉತ್ತಮ ಕಾರ್ಯಕ್ರಮದ ಆಚರಣೆಯಿಂದ ಹೇಗೆ ಮುಂದುವರಿಯುತ್ತಿದೆ ಎಂಬುದನ್ನು ನಾವು ವಿಚಾರಮಾಡಬೇಕು ಅಲ್ಲಿಯ ಕಾರ್ಯಕ್ರಮ ವೇನು? ಅವು ಹೇಗೆ ದೇಶವನ್ನು ವೃದ್ಧಿಪಡಿಸುತ್ತಿವೆ? ಅವುಗಳ ತತ್ವ ವೇನು? ಎಂಬುದನ್ನು ನಮ್ಮ ಅರ್ಥಶಾಸ್ತ್ರ ನಿಪುಣರು ವಿಮರ್ಶೆಮಾಡಿ, ನಾವು ಇಲ್ಲಿ ಅನುಸರಿಸಬೇಕಾದ ಮಾರ್ಗಗಳನ್ನು ನಿರ್ಧರಿಸಬೇಕು

ಪಾಶ್ಚಾತ್ಯ ದೇಶಗಳಲ್ಲಿ ಇಂತಹ ಆರ್ಥಿಕಯೋಜನೆಗೆ ವಿಜ್ಞಾನಕ್ಕೆ ಕೊಟ್ಟಷ್ಟು ಪ್ರಾಮುಖ್ಯತ ಕೊಟ್ಟಿದ್ದಾರೆ ಆರ್ಥಿಕಯೋಜನೆಯೇ ನಮ್ಮ ರೈತರ ಏಳಿಗೆಯನ್ನು ವ್ಯವಸ್ಥೆಮಾಡುವುದಕ್ಕೆ ಮುಖ್ಯ ಅಂಗವಾಗಿ ಪರಿಣಮಿಸಬೇಕು ನಮ್ಮ ಗ್ರಾಮ ಪುನರುದ್ಧಾರಕಾರ್ಯಕ್ಕೆ ಅಗತ್ಯವಾದ ವ್ಯವಸಾಯ, ವಿದ್ಯಾಭ್ಯಾಸ, ಕೈಗಾರಿಕ, ಸಹಕಾರ— ಇವುಗಳೆಲ್ಲೆಲ್ಲಾ ಅಭಿವೃದ್ಧಿಕಾರ್ಯಗಳನ್ನು ಕೈಗೊಳ್ಳುವ ಹಂಚಿಕೆಯು ಆ ಯೋಜನೆಯಲ್ಲಿರಬೇಕು ಪುರಾತನಕಾಲದ ಅಪ್ರಯೋಜಕ ಕಂದಾಚಾರಗಳೆಲ್ಲಾ ಹೋಗಿ, ಗ್ರಾಮಜೀವನವನ್ನು ಪವಿತ್ರವನ್ನಾಗಿ ಮಾಡುವ ಅನುಕೂಲಗಳೆಲ್ಲಾ ಅದರಲ್ಲಿರಬೇಕು ಸ್ಥಳೀಯ ವಿದ್ಯಮಾನಗಳಿಗೆ ತಕ್ಕಂತೆ ಸುಲಭ ರೀತಿಯಲ್ಲಿ ಕಾರ್ಯಕ್ರಮಗಳನ್ನು ಆಚರಣೆಗೆ ತಂದು ನಿಯಮಿತ ಕಾಲದಲ್ಲಿ ಸಮರ್ಪಕವಾದ ಅಭಿವೃದ್ಧಿಯನ್ನುಂಟುಮಾಡುವ ವ್ಯವಸ್ಥೆಯು ಆ ಯೋಜನೆಯಲ್ಲಿ ಇರಬೇಕು

# ೪. ವ್ಯವಸಾಯ

ಭರತಖಂಡದಲ್ಲಿ ವ್ಯವಸಾಯವೇ ಪ್ರಧಾನ ವೃತ್ತಿಯಾಗಿದೆ ಇಲ್ಲಿಯ ಒಟ್ಟು ಜನಸಂಖ್ಯೆಯಲ್ಲಿ ಶೇಕಡ ೯೦ರಷ್ಟು ಜನರು ಹಳ್ಳಿಗಳಲ್ಲಿ ವಾಸಿಸುತ್ತಿದ್ದಾರೆ ಪಾಶ್ಚಾತ್ಯದೇಶಗಳಲ್ಲಿ, ಜನರು ಕಾಡುಮೃಗಗಳಂತೆ ಜೀವಿಸುತ್ತಿದ್ದಕಾಲದಲ್ಲಿಯೇ, ಗಂಗಾ, ಸಿಂಧು ನದೀತೀರಗಳಲ್ಲಿ ಉತ್ತಮ ವ್ಯವಸಾಯಕ್ರಮವು ಇದ್ದಿತೆಂಬದಾಗಿ ನಾವು ಇತಿಹಾಸಗಳಿಂದ ತಿಳಿಯ ಬಹುದು ಈಗಲೂ ಕೂಡ ನಮ್ಮ ದೇಶದಲ್ಲಿ ಶೇಕಡ ೭೫ರಷ್ಟು ಜನರು ವ್ಯವಸಾಯದಿಂದಲೇ ಜೀವಿಸುತ್ತಿದ್ದಾರೆ ಪ್ರತಿವರ್ಷವೂ ಕೋಟ್ಯಂತರ ಎಕರೆಗಳಷ್ಟು ಜಮೀನು ಸಾಗುವಳಿಯಾಗುತ್ತಿದೆ ಇಂತಹ ಮುಖ್ಯ ವೃತ್ತಿಯನ್ನು ಅಭಿವೃದ್ಧಿಪಡಿಸುವುದು, ಗ್ರಾಮ ಪುನರುದ್ಧಾರಕಾರ್ಯದ ಪ್ರಥಮ ಕರ್ತವ್ಯವಾಗಿರಬೇಕು

ಬ್ರಿಟಿಷ್ ಭಾರತದ ವಿಸ್ತಾರ ೬೬,೯೩,೮೫,೦೦೦ ಎಕರೆಗಳು ಇದರಲ್ಲಿ ಶೇಕಡ ೨೨ರಷ್ಟು ವ್ಯವಸಾಯಕ್ಕೆ ಅಯೋಗ್ಯವಾದ ಪ್ರದೇಶ, ಶೇ ೧೩ರಷ್ಟು ಅರಣ್ಯಪ್ರದೇಶ, ಉಳಿದ ೬೫ರಷ್ಟು ವ್ಯವಸಾಯಕ್ಕೆ ಯೋಗ್ಯವಾದ ಜಮೀನಿನಲ್ಲಿ ಕೂಡ ೫೩೦ ಲಕ್ಷ ಎಕರೆಗಳನ್ನು ಬಂಜರಾಗಿಯೂ, ಹುಲ್ಲುಗಾವಲಾಗಿಯೂ ಬಿಟ್ಟುಬಿಡಲಾಗಿದೆ ಬಂಜರು, ಹುಲ್ಲುಗಾವಲು ಪ್ರದೇಶಗಳನ್ನು ಬಿಟ್ಟು ಇನ್ನೂ ೧೫ ಕೋಟಿ ಎಕರ ಜಮೀನು ವ್ಯರ್ಥವಾಗಿದೆ ಈ ೧೫ ಕೋಟಿ ಎಕರೆಗಳ ಸಾಗುವಳಿಯಿಂದ ಸುಮಾರು ೫ ಕೋಟಿ ಜನರು ಜೀವನಮಾಡಬಹುದು ಆದುದರಿಂದ ಪ್ರತಿಯೊಂದು ಪ್ರಾಂತದಲ್ಲಿಯೂ ವ್ಯವಸಾಯಕ್ಕೆ ಯೋಗ್ಯವಾದ ಜಮೀನನ್ನು ಸಾಗುವಳಿಗೆ ತಂದರೆ, ಸ್ವಲ್ಪಮಟ್ಟಿನ ಉದ್ಯೋಗ ಸಮಸ್ಯೆಯು ಬಗೆಹರಿಯುವುದಲ್ಲದ, ಅರ್ಧಹೊಟ್ಟೆ ಆಹಾರದಿಂದ ಜೀವಿಸುತ್ತಿರುವ ನಮ್ಮ ರೈತರಿಗೆ ಸ್ವಲ್ಪ ಹೆಚ್ಚು ಆಹಾರವನ್ನು ಒದಗಿಸಿದಂತಾಗಬಹುದು *

ಎಲ್ಲಾ ದೇಶದ ವ್ಯವಸಾಯ ಪದ್ಧತಿಗಿಂತ ಭರತಖಂಡದ ವ್ಯವಸಾಯಕ್ರಮವು ಬಹಳ ಹಿಂದುಳಿದಿದೆ ಕೋಟ್ಯಂತರ ಎಕರೆ ಜಮೀನುಗಳು

* Speech by Hon V V Giri, at Salem, All India Khadi and Swadeshi Exhibition", 1-8-37

ಸಾಗುವಳಿಯಾದರೂ ರೈತರಿಗೆ ಸಾಕಾದಷ್ಟು ಆಹಾರ ದೊರಯುವುದಿಲ್ಲ ಒಂದೆರಡು ಹದ ಮುಂಗಾರುಮಳೆ ಬಿದ್ದ ಮೇಲೆ ರೈತರು ತಮ್ಮ ಜಮೀನನ್ನು ಉತ್ತು, ಅನಂತರ ಬೀಜ ಬಿತ್ತುತ್ತಾರ ಪೈರು ಚೆನ್ನಾಗಿ ಬರುವುದು ಆದರ ಮಳೆಯು ಸಕಾಲದಲ್ಲಿ ಬರದೆ, ಕ್ರಮತಪ್ಪಿ ಸಾಧಾರಣವಾಗಿ ಬರುತ್ತದೆ ಮಳಯ ಆಸರೆಯಿಂದಲೇ ಬೆಳಯುವ ಪೈರುಗಳಿಗೆ ಇದರಿಂದ ಹೆಚ್ಚು ಪ್ರಯೋಜನವಾಗುವುದಿಲ್ಲ ಹೀಗಾಗಿ ಇತರ ದೇಶಗಳವರು ವ್ಯವಸಾಯದಿಂದ ಹೊಂದುವ ಉತ್ಪತ್ತಿಯ ಕಾಲುಭಾಗವನ್ನು ಕೂಡ ನಮ್ಮ ರೈತರು, ಹೊಂದುತ್ತಿಲ್ಲವೆಂಬುದಾಗಿ ಹೇಳಬಹುದು ವ್ಯವಸಾಯವೇ ಭಾರತೀಯರ ಸಿಧಿ ಇದನ್ನು ಬಿಟ್ಟರ ಅವರಿಗೆ ಬೇರೆ ಗತಿಯಿಲ್ಲ ಆದುದರಿಂದ ವ್ಯವಸಾಯಕ್ರಮವು ಅಭಿವೃದ್ಧಿಯಾಗಬೇಕು

ಜನಸಂಖ್ಯೆಯು ಅಪರಿಮಿತವಾಗಿ ಪ್ರತಿಯೊಬ್ಬ ರೈತನ ಪಾಲಿಗೆ ಬಂದಿರುವ ಜಮೀನು ತಾಕು, ನಮ್ಮ ದೇಶದ ತಾಕುಗಳಿಗಿಂತ ಚಿಕ್ಕದಾಗಿರುವ ಜಪಾನ್ ದೇಶದಲ್ಲಿ ಕೂಡ, ರೈತರು ವ್ಯವಸಾಯದಿಂದ ಸುಖಜೀವನಮಾಡುತ್ತಿದ್ದಾರ ಇದಕ್ಕೆ ಅವರ ವ್ಯವಸಾಯಕ್ರಮವು ಉತ್ತಮವಾಗಿ ಶ್ರಮಪಟ್ಟು ರೈತರು ಕೆಲಸಮಾಡುತ್ತಿರುವುದೇ ಮುಖ್ಯ ಕಾರಣ ಜಪಾನ್ ದೇಶದಲ್ಲಿ ಒಂದು ಎಕರ ಜಮೀನಿನಲ್ಲಿ ೨,೭೭೭ ಪೌಂಡು ಭತ್ತ ಬೆಳೆದರ, ನಮ್ಮ ದೇಶದಲ್ಲಿ ೧,೩೫೭ ಪೌಂಡು ಬೆಳಯುತ್ತಾರ ಈಜಿಪ್ಟ್ ದೇಶದಲ್ಲಿ ಒಂದು ಎಕರೆಗೆ ೩೫೩ ಪೌಂಡು ಅರಳೆಯನ್ನು ಬೆಳೆದರ, ಇಲ್ಲಿ ೯೮ ಪೌಂಡು ಬೆಳೆಯುತ್ತಾರೆ ನೀರಾವರಿ ಸಾಗುವಳಿಯಾಗುವ ಭಾಗದಲ್ಲಿ ಕೂಡ, ನಮ್ಮ ದೇಶದಲ್ಲಿ ಒಂದು ಎಕರೆಗೆ ೨೫ ರೂಪಾಯಿಗಿಂತ ಹೆಚ್ಚಾದ ವರಮಾನ ಬರುವುದಿಲ್ಲ ಎಂಬದಾಗಿ ಸರ್ ಎಂ ವಿಶ್ವೇಶ್ವರಯ್ಯನವರು ಹೇಳಿದ್ದಾರೆ * ನಮ್ಮ ದೇಶದ ವ್ಯವಸಾಯದ ಯೋಗ್ಯತೆಯು ಪಾಶ್ಚಾತ್ಯ ದೇಶಗಳ ವ್ಯವಸಾಯದ ಯೋಗ್ಯತೆಯಲ್ಲಿ ಅರ್ಧ ಎಂದು ರಜನೀಕಾಂತ ದಾಸರು ಅಭಿಪ್ರಾಯಪಡುತ್ತಾರೆ † ಆದುದರಿಂದ ನಮ್ಮ ದೇಶದ ಮುಖ್ಯ ಕಸಬಾದ ವ್ಯವಸಾಯವನ್ನು ಮೊದಲು ಕ್ರಮಪಡಿಸಬೇಕು ಇದರಿಂದ ಬಹುಮಟ್ಟಿಗೆ ನಮ್ಮ ರೈತರ ಜೀವನವು ಉತ್ತಮವಾಗುವುದು

* "Reconstruction in India", by Sir M V, p 174
† "Industrial Efficiency of India", by Rajanikanta Das, p 29

ದೇಶದ ವ್ಯವಸಾಯಕ್ರಮವನ್ನು ಅಭಿವೃದ್ಧಿಪಡಿಸಿ ಉತ್ತಮವಾದ ಬೆಳೆಯನ್ನು ತೆಗೆಯಬೇಕಾದರೆ, ನಾವು ಕೆಲವು ಮುಖ್ಯವಾದ ಕಾರಣ ಅಥವಾ ಅಂಗಗಳನ್ನು ವಿಚಾರಮಾಡಬೇಕು. ಈ ಮುಖ್ಯಾಂಗಗಳು ಯಾವುವೆಂದರೆ—ಸಾಗುವಳಿ, ಭೂಮಿಯ ಗುಣ, ಅಲ್ಲಿಯ ವಾಯುಗುಣ, ಇವುಗಳ ಸಹಾಯದಿಂದ ನಡೆಸುವ ಪ್ರಯೋಗಗಳ ವಿಧಾನ, ಇವುಗಳಿಂದ ಉಂಟಾಗುವ ಪ್ರಯೋಜನ. ಮೇಲ್ಕಂಡ ಅಂಶಗಳು ಭೂಮಿಯ ಬೆಳೆಯನ್ನು ನಿರ್ಧರಿಸುವುವು. ೧೯೨೮ನೆಯ ಇಸವಿಯ ವ್ಯವಸಾಯ ಸಮಿತಿಯ ನಿಪುಣರು ನಮ್ಮ ದೇಶದ ಮಣ್ಣನ್ನು ನಾಲ್ಕು ವಿಧವಾಗಿ ವಿಂಗಡಿಸಿ, ಅವುಗಳ ಗುಣದೋಷಗಳನ್ನು ವಿಮರ್ಶೆಮಾಡಿ, ಸೂಕ್ತವಾದ ಸಲಹೆಯನ್ನಿತ್ತಿದ್ದಾರೆ.*

ನಮ್ಮ ದೇಶದಲ್ಲಿ ಬೆಳೆಯುತ್ತಿರುವ ಅನೇಕ ಬಗೆಯ ಸಸ್ಯಗಳಿಗೆ ಬೇಕಾದ ಆಹಾರಪದಾರ್ಥಗಳು, ಒಂದೇ ಬಗೆಯ ಮಣ್ಣಿನಲ್ಲಿ ಸಿಕ್ಕುವುದಿಲ್ಲ. ಆಯಾಯಾ ಪ್ರದೇಶದ ಮಣ್ಣಿನ ಗುಣಕ್ಕೆ ಅನುಸಾರವಾಗಿ ಆಯಾಯಾ ಬೆಳೆಯನ್ನೇ ಮಾಡಬೇಕು. ಇದು ಅನೇಕ ವರ್ಷಗಳ ಅನುಭವದಿಂದ ಆಚರಣೆಯಲ್ಲಿದೆ. ಆದರೂ ಈ ಅನುಭವದ ಜೊತೆಗೆ ಇಲ್ಲಿರುವ ಮಣ್ಣಿನ ಗುಣದೋಷಗಳನ್ನು ವೈಜ್ಞಾನಿಕ ದೃಷ್ಟಿಯಿಂದ ಪರಿಶೀಲಿಸಿ, ಯಾವ ಬಗೆಯ ಮಣ್ಣಿನಲ್ಲಿ ಯಾವ ಬಗೆಯ ಧಾನ್ಯವನ್ನು ಬೆಳೆದರೆ, ಹೆಚ್ಚು ಲಾಭ ಬರುತ್ತದೆ ಎಂಬುದನ್ನು ನಮ್ಮ ರೈತರು ತಿಳಿಯುವಂತಾಗಬೇಕು. ನಮ್ಮ ಭೂಮಿಯ ಗುಣವನ್ನು, ವಿಮರ್ಶೆಮಾಡಿರುವ ವೂಯಲ್ಕರ್, ಹವಾರ್ಡ್ ಮತ್ತು ಕ್ಲೌಸ್ಟನ್ ಮಹಾಶಯರು, ಇಲ್ಲಿಯ ಭೂಮಿಯು ದಿನೇ ದಿನೇ ನಿಸ್ಸಾರವಾಗುತ್ತಿರುವುದು ಸುಳ್ಳೆಂದೂ, ಕಳೆದ ಮುನ್ನೂರು ವರ್ಷಗಳಿಂದ ಭೂಮಿಯ ಫಲವತ್ತು ಒಂದೇ ಸ್ಥಿತಿಯಲ್ಲಿದೆಯೆಂದೂ, ಅಭಿಪ್ರಾಯಪಟ್ಟಿದ್ದಾರೆ. ಆದರೆ ನಮ್ಮ ರೈತರ ಅನುಭವದಿಂದ ವಿಚಾರಮಾಡಿದರೆ ಭೂಮಿಯಲ್ಲಿ ಬೆಳೆಯು ಒಂದೇಸಮನಾಗಿ ಬೆಳೆಯುತ್ತಿಲ್ಲವೆಂದೂ, ಭೂಮಿಯ ಸಾರವನ್ನು ಉತ್ತಮಪಡಿಸದೇ ಇದ್ದರೆ, ಅವರ ಬೆಳೆಯು ದಿನೇ ದಿನೇ ಕ್ಷೀಣಿಸುತ್ತಾ ಹೋಗುವುದೆಂದೂ ತಿಳಿದುಬರುತ್ತದೆ.

* "Report of the Royal Commission on Indian Agriculture", Vol I, Ch IV

ಸ್ಥಾಗುವಳಿ ಜಮೀನಿನ ಯೋಗ್ಯತೆಯನ್ನು ಉತ್ತಮಪಡಿಸಬೇಕಾದರೆ ಒಳ್ಳೆಯ ಗೊಬ್ಬರವನ್ನು ಉಪಯೋಗಿಸಬೇಕು ಸಾಮಾನ್ಯವಾಗಿ ಗೊಬ್ಬರವನ್ನು ಹಾಕದೆ, ಭೂಮಿಯಿಂದ ಬೆಳೆ ತೆಗೆಯಲು ನಮ್ಮ ರೈತರು ಈಗಲೂ ಇಷ್ಟಪಡುವುದಿಲ್ಲ ನಮ್ಮ ರೈತರಿಗೆ ತಿಳಿದಿರುವ ಗೊಬ್ಬರಗಳೆಂದರೆ ದನ, ಕುರಿ, ಮೇಕೆಗಳ ಗೊಬ್ಬರ, ಇನ್ನು ಕೆಲವು ಕಡೆಗಳಲ್ಲಿ ಹಸುರು ಗೊಬ್ಬರ ಗೊಬ್ಬರದ ಅವಶ್ಯಕತೆಯು ರೈತರಿಗೆ ತಿಳಿದಿದ್ದರೂ ಕೂಡ, ಅದನ್ನು ಕೂಡಿಸುವ ವಿಧಾನ ಮತ್ತು ಉಪಯೋಗಿಸುವ ಕ್ರಮ— ಇವುಗಳಿಗೆ ರೈತರು ಹೆಚ್ಚು ಲಕ್ಷ್ಯಕೊಡುತ್ತಿಲ್ಲ ಇದರಿಂದ ಗೊಬ್ಬರದಲ್ಲಿರುವ ಸಾರದ ಬಹು ಭಾಗವು ವ್ಯರ್ಥವಾಗಿಹೋಗುವುದು ಅಲ್ಲದೆ, ಸಾರಜನಕವನ್ನು ಒದಗಿಸುವ ಎಣ್ಣೆಬೀಜಗಳು, ಎಲುಬು, ಚರ್ಮ ಮುಂತಾದ ಉಪಯೋಗ ಪದಾರ್ಥಗಳು ವಿಶೇಷವಾಗಿ ಪರದೇಶಗಳಿಗೆ ಹೋಗುತ್ತಿವೆ ನಮ್ಮ ಗಣಿಗಳಲ್ಲಿ ಸಿಕ್ಕುತ್ತಿರುವ 'ಸಲ್ಫೇಟ್ ಆಫ್ ಅಮೋನಿಯಾ' ಎಂಬ ಗೊಬ್ಬರವೂ ಕೂಡ ಇತರ ದೇಶಗಳಿಗೆ ರಫ್ತಾಗುತ್ತಿದೆ

ಹೊರದೇಶಗಳಿಗೆ ಹೋಗುತ್ತಿರುವ ಗೊಬ್ಬರದ ಪ್ರಯೋಜನವು ನಮ್ಮ ರೈತರ ಪಾಲಿಗೆ ಇಲ್ಲದಿದ್ದರೂ, ಇಲ್ಲಿ ದೊರಕುತ್ತಿರುವ ಗೊಬ್ಬರದ ಪೂರ್ಣ ಪ್ರಯೋಜನವನ್ನಾದರೂ ಅವರು ಪಡೆಯುತ್ತಿದ್ದಾರೆಯೇ, ಎಂಬುದಾಗಿ ವಿಚಾರಮಾಡಿದರೆ, ಇದೂ ಕೂಡ ಸಮರ್ಪಕವಾಗಿಲ್ಲ ನಮ್ಮ ರೈತರು ಬೀದಿಯ ಕಸ, ಕೊಟ್ಟಿಗೆಯ ಕಸ ಇವುಗಳನ್ನು ಗುಡಿಸಿ, ಊರ ಮುಂದಲ ಗುಂಡಿಗಳಲ್ಲಿಯೋ ಅಥವಾ ಮನೆಯ ಹಿಂಭಾಗದ ಹಿತ್ತಿಲಲ್ಲಿಯೋ ರಾಸಿಹಾಕುತ್ತಾರೆ ಇದರಲ್ಲಿ ಬರಿ ಹುಲ್ಲುಕಡ್ಡಿ, ಮಣ್ಣು ವಿನಾ ಸಗಣಿಯಾಗಲಿ ಅಥವಾ ದನಕರುಗಳ ಮೂತ್ರವಾಗಲಿ ಇರುವುದಿಲ್ಲ ಸಗಣಿಯನ್ನು ಬೆರಣಿಮಾಡಿ ಸೌದೆಗೋಸ್ಕರ ಮಾರುತ್ತಾರೆ ಮೂತ್ರವನ್ನು ಇವರು ಶೇಖರಿಸುವುದೇ ಇಲ್ಲ ಇದರಿಂದ ಗೊಬ್ಬರದ ಸಾರವು ವ್ಯರ್ಥವಾಗುವುದಲ್ಲದೆ, ಗ್ರಾಮದಲ್ಲಿ ಇದರ ದುರ್ಗಂಧವು ಹರಡಿ ರೋಗಾದಿಗಳು ಉಂಟಾಗುವುವು ಆದುದರಿಂದಲೇ "ಯಾವ ಕಡೆಯಿಂದ ಹೆಚ್ಚು ದುರ್ಗಂಧ ಬರುತ್ತಿರುವುದೋ ಅತ್ತಕಡೆಯೇ ಹಳ್ಳಿ ಇದೆ" ಎಂಬದಾಗಿ ಪಂಜಾಬಿನ ಬ್ರೈನ್ ಮಹನೀಯರು* ಬರೆದಿದ್ದಾರೆ

* "Remaking of Village India", by F L Brayne, p 13

ನಮ್ಮ ರೈತರಿಗೆ ಜಮೀನಿನ ಉತ್ಪತ್ತಿಯು ಹೆಚ್ಚಬೇಕಾದರೆ, ಅವರು ಗೊಬ್ಬರಕ್ಕೆ ಹೆಚ್ಚು ನಿಗಾ ಕೊಡಬೇಕು ಮೊದಲು ತಮ್ಮ ಕೈಯಲ್ಲಿರುವ ಗೊಬ್ಬರದ ಸಾರವು ನಾಶವಾಗದಹಾಗೆ ನೋಡಿಕೊಳ್ಳಬೇಕು ಗೊಬ್ಬರದ ಗುಂಡಿಗಳನ್ನು ಅಸಡ್ಡೆ ಮಾಡುವ ಅಭ್ಯಾಸವು ತೊಲಗಬೇಕು ಸಗಣಿಯನ್ನು ಸೌದೆಗಾಗಿ ಉಪಯೋಗಿಸುವುದು ತಪ್ಪಬೇಕು ಭೂಮಿಯೇ ನಮ್ಮ ರೈತರ ಸರ್ವಸ್ವವಾಗಿದೆ ತಾವು ಕೂಡಿಟ್ಟ ಗೊಬ್ಬರವೇ ಹಣವೆಂಬ ಭಾವನೆಯು ಅವರಲ್ಲಿ ಉಂಟಾಗಬೇಕು ಪಶುಗಳ ಗಂಜಲವನ್ನು ಶೇಖರಿಸುವ ಪದ್ಧತಿಯು ಆಚರಣೆಗೆ ಬರಬೇಕು ಸಗಣಿ, ಗಂಜಲ, ಸೊಪ್ಪು, ಕಸಕಡ್ಡಿ ಇವುಗಳನ್ನೆಲ್ಲಾ ನಲವತ್ತಕ್ಕಿಂತ ತಗ್ಗಾದ ಒಂದು ಗುಂಡಿಯಲ್ಲಿ ಶೇಖರಿಸಿ, ಮಳೆ, ಗಾಳಿ, ಬಿಸಿಲು ಇವುಗಳಿಂದ ಗೊಬ್ಬರದ ಸಾರವು ಹೋಗದಹಾಗೆ ಗುಂಡಿಯ ಮೇಲೆ ಒಂದು ಚಪ್ಪರವನ್ನಾಗಲಿ ಅಥವಾ ಗುಡಿಸಲನ್ನಾಗಲಿ ಹಾಕಬೇಕು ಅನಂತರ ಸಗಣಿಯು ಕೊಳೆಯುವುದಕ್ಕಿಂತ ಮುಂಚಿತವಾಗಿ ಕೆಂಪು ಮಿಶ್ರವಾದ ಮಣ್ಣನ್ನು ಮತ್ತು ಹಸುರೆಲೆಯನ್ನು ಬೆರಸಬೇಕು ದನಗಳ ಕೊಟ್ಟಿಗೆಯಲ್ಲಿ ಗಂಜಲವನ್ನು ಕೂಡಿಸುವ ಏರ್ಪಾಡುಮಾಡಿ, ಆ ಗಂಜಲವನ್ನು ತಂದು ಗೊಬ್ಬರದಮೇಲೆ ಸುರಿದು, ಅದರ ಸಂಗಡ ಸೇರಿಸಿದರೆ ಗಂಜಲದಲ್ಲಿರುವ ಸಸ್ಯಾಹಾರವು ಗೊಬ್ಬರಕ್ಕೆ ಸಾರವನ್ನುಂಟುಮಾಡುತ್ತದೆ ದನಕರುಗಳ ಕೊಟ್ಟಿಗೆಯನ್ನು ಹೊಲಗದ್ದೆಗಳ ಸಮೀಪದಲ್ಲಿಯೇ ಮಾಡಿದರೆ ಅನುಕೂಲ ಇದರಿಂದ ಗೊಬ್ಬರವನ್ನು ಹೊಲಗದ್ದೆಗಳಿಗೆ ಸಾಗಿಸುವ ಖರ್ಚು ಕಮ್ಮಿಯಾಗುವುದಲ್ಲದೆ, ಗೊಬ್ಬರವನ್ನು ಸರಿಯಾಗಿ ಇಡಲು ಸೌಕರ್ಯವುಂಟಾಗುತ್ತದೆ ಹೀಗೆ ಮಾಡುವುದರಿಂದ ರೈತರ ವಾಸದ ಮನೆಯು ಕೂಡ ಆರೋಗ್ಯವಾದ ಸನ್ನಿವೇಶದಲ್ಲಿರುವುದು ಗೊಬ್ಬರದ ವಿಷಯದಲ್ಲಿ ಜಪಾನ್ ದೇಶದ ರೈತರು ಆಸಕ್ತಿ ವಹಿಸಿರುವಷ್ಟು ಮತ್ತೆ ಯಾವ ದೇಶದ ರೈತರೂ ವಹಿಸಿಲ್ಲವೆಂದು ಹೇಳಬಹುದು

ನಮ್ಮ ಹಳ್ಳಿಗಳಲ್ಲಿ ಗೊಬ್ಬರವನ್ನು ಹೆಚ್ಚಿಸುವ ಪ್ರಯತ್ನಗಳು ಕಡಿಮೆ ಭರ್ಜಿ ಗೊಬ್ಬರದ ವಿಷಯದಲ್ಲಿ ನಮ್ಮ ರೈತರು ಇನ್ನೂ ಉದಾಸೀನರಾಗಿಯೇ ಇದ್ದಾರೆ ಮೈಸೂರು ಸಿಟಿ ಮುನಿಸಿಪಾಲಿಟಿಯವರು ನಗರದ

ಕಕ್ಕಸುಗಳ ಗೊಬ್ಬರವನ್ನು ಬೆರಸಿ ಕಂಪೋಸ್ಟ್ ಗೊಬ್ಬರವನ್ನಾಗಿ ಮಾಡಿ ಮಾರುತ್ತಿರುವುದು ಸ್ತೋತ್ರಾರ್ಹವಾದ ಉದಾಹರಣೆಯಾಗಿದೆ. ಈ ಪ್ರಯತ್ನದಿಂದ ವ್ಯರ್ಥವಾಗಿಹೋಗುತ್ತಿದ್ದ ಗೊಬ್ಬರವು ಪ್ರಯೋಜನವಾಗುವುದಲ್ಲದೆ, ಭೂಮಿಯ ವರಮಾನ ಕೂಡ ಹೆಚ್ಚುವುದು. ನಮ್ಮ ಹಳ್ಳಿಗಳಲ್ಲಿಯೂ ಕೂಡ ಕಕ್ಕಸುಗಳನ್ನಿರಿಸಬೇಕು. ಅವುಗಳಿಂದ ಗೊಬ್ಬರವನ್ನು ಕೂಡಿಸುವಂತೆ ಮಾಡಬೇಕು. ಇವುಗಳ ಜೊತೆಗೆ ಕೃತಕ ಗೊಬ್ಬರಗಳನ್ನು ಉಪಯೋಗಿಸಬೇಕು. ಭೂಮಿಯ ಯೋಗ್ಯತೆಗೆ ಅನುಸಾರವಾಗಿ ಗೊಬ್ಬರವನ್ನು ಉಪಯೋಗಿಸುವ ವಿಧಾನವನ್ನು ನಮ್ಮ ರೈತರು ಕಲಿಯಬೇಕು. ಗೊಬ್ಬರಕ್ಕಾಗಿಯೇ ಹುರುಳಿ, ಸಣಬು, ಹೊಂಗೆ ಮುಂತಾದ ಪೈರುಗಳನ್ನು ಹೆಚ್ಚು ಬೆಳೆಸಬೇಕು. ಹಿಂಡಿ, ಮೂಳೆ ಮುಂತಾದ ಪದಾರ್ಥಗಳನ್ನು ಗೊಬ್ಬರದ ರೂಪದಲ್ಲಿ ಉಪಯೋಗಿಸಬೇಕು. ಒಟ್ಟಿನಲ್ಲಿ ರೈತನ ಸಂಪತ್ತು ಹೆಚ್ಚಬೇಕಾದರೆ, ಅವನ ಭೂಮಿಯು ಫಲವತ್ತಾಗಬೇಕಾದರೆ, ಉತ್ತಮವಾದ ಗೊಬ್ಬರದ ಪ್ರಯೋಗವು ಹೆಚ್ಚು ಪ್ರಚಾರವಾಗಬೇಕು.

ವ್ಯವಸಾಯಾಭಿವೃದ್ಧಿಗೆ ಮುಖ್ಯವಾದ ಇನ್ನೊಂದು ಅಂಗವು ನೀರಾವರಿ ಸೌಕರ್ಯ. ನಮ್ಮ ದೇಶದ ಸಾಗುವಳಿ ಜಮೀನಿನಲ್ಲಿ ಮುಕ್ಕಾಲುಭಾಗ ಭೂಮಿಯು ಮಳೆಯನ್ನೇ ಆಶ್ರಯಿಸಿದೆ. ೧೯೩೩-೩೪ನೆಯ ಇಸವಿಯಲ್ಲಿ ಬ್ರಿಟಿಷ್ ಭಾರತದಲ್ಲಿ ಸಾಗುವಳಿಯಾದ ಜಮೀನಿನ ೨,೭೭೦ ಲಕ್ಷ ಎಕರೆಯಲ್ಲಿ ೧,೭೬೦ ಲಕ್ಷ ಎಕರೆಗಳು ಮಳೆಯ ನೀರಿನ ಆಸರೆಯಿಂದಲೇ ಸಾಗುವಳಿಯಾದವು. ಸಾಮಾನ್ಯವಾಗಿ ಮಳೆಯು ಸಕಾಲದಲ್ಲಿ ಬರುವುದಿಲ್ಲ. ಕೆಲವು ಭಾಗದಲ್ಲಿ ಅತಿವೃಷ್ಟಿ, ಮತ್ತೆ ಕೆಲವು ಭಾಗದಲ್ಲಿ ಅನಾವೃಷ್ಟಿ. ಪ್ರತಿ ಐದು ವರ್ಷದ ಅಂಕಿಗಳನ್ನು ನೋಡುವುದರಿಂದ ಮೊದಲನೆಯ ವರ್ಷ ಚೆನ್ನಾಗಿ ಮಳೆಯಾಗುವುದೆಂದೂ, ಮೂರನೆಯ ವರ್ಷ ಸಾಮಾನ್ಯವಾಗಿ ಆಗುವುದೆಂದೂ, ಐದನೆಯ ವರ್ಷ ಮಳೆ ಆಗದೆ ಸಾಗುವಳಿಗೆ ಬಹಳ ಕಷ್ಟವಾಗುವುದೆಂದೂ ತಿಳಿಯಬರುತ್ತದೆ.*

ಮಳೆಯ ಅನಾನುಕೂಲವನ್ನು ನೋಡಿ, ಪ್ರಭುತ್ವದವರು ಕೆರೆ.

* 'Indian Year Book", 1936, p. 317

ನಾಲೆ, ಬಾವಿ ಇವುಗಳಿಂದ ವ್ಯವಸಾಯಕ್ಕೆ ನೀರು ಒದಗಿಸುವ ಪ್ರಯತ್ನ ಮಾಡಿದ್ದಾರೆ ಕೆರೆ, ಬಾವಿಗಳಿಗಿಂತ ಕಾಲುವೆಯಿಂದ ನೀರು ಹೆಚ್ಚು ನಿರ್ದಿಷ್ಟವಾಗಿ ಒದಗುತ್ತದೆ ನಮ್ಮ ದೇಶದ ಜನಸಂಖ್ಯೆಯನ್ನೂ, ಇಲ್ಲಿ ನೀರಾಸರೆಯಿಂದ ಸಾಗುವಳಿ ಆಗುತ್ತಿರುವ ಜಮೀನಿನ ವಿಸ್ತಾರ ವನ್ನೂ ನಾವು ಪರಿಶೀಲಿಸಿದರೆ, ನೀರಾವರಿ ಸೌಕರ್ಯಗಳು ಇನ್ನೂ ಹೆಚ್ಚಬೇಕೆಂದೆನಿಸುವುದು ೧೯೩೫ನೆಯ ಇಸವಿಯಲ್ಲಿ ಸಾಗುವಳಿಯಾಗಿದ್ದ ೨,೩೭೦ ಲಕ್ಷ ಎಕರೆಗಳ ಪೈಕಿ ೨೬೦ ಲಕ್ಷ ಎಕರೆಗಳು ಮಾತ್ರ ಕಾಲುವೆ ಗಳ ನೀರಿನಿಂದ ವ್ಯವಸಾಯ ಮಾಡಲ್ಪಟ್ಟಿವೆ ಎಂದಮೇಲೆ ಕಾಲುವೆಗಳ ನೀರಾವರಿ ಸೌಕರ್ಯವು ಇನ್ನು ಹೆಚ್ಚಬೇಕು ಎನ್ನುವುದರಲ್ಲಿ ಸಂದೇಹವಿಲ್ಲ

೧೯೩೪-೩೫ನೆಯ ಇಸವಿಯಲ್ಲಿ ಭಾರತದ ನೀರಾವರಿ ಕೇಂದ್ರ ಸಮಿತಿಯವರು ಒಂದು ಉಪಯುಕ್ತವಾದ ವರದಿಯನ್ನು ಪ್ರಕಟಿಸಿದ್ದಾರೆ ಇದರಲ್ಲಿ ಭಾರತದಲ್ಲಿ ನೀರಾವರಿಯಿಂದ ವ್ಯವಸಾಯವಾಗುತ್ತಿರುವ ಜಮೀನು ೫ ಕೋಟಿ ಎಕರೆಗಳಷ್ಟು ಇವೆಯೆಂದೂ, ಇದರಲ್ಲಿ ಒಟ್ಟು ಜನಸಂಖ್ಯೆಯು ಸುಮಾರು ಅರ್ಧಭಾಗವು ಈ ಬಗೆಯ ಕೆಲಸವನ್ನು ಮಾಡುತ್ತಿದ್ದಾರೆಂದೂ, ಈ ವ್ಯವಸಾಯಕ್ರಮದಿಂದ ವರ್ಷ ಒಂದಕ್ಕೆ ಸುಮಾರು ಒಂದುನೂರು ಕೋಟಿ ರೂಪಾಯಿಗಳು ವರಮಾನ ಬರುತ್ತಿವೆ ಎಂದೂ ಅನುಮೋದಿಸಿದ್ದಾರೆ ನಾಲೆಗಳ ಒಟ್ಟು ಉದ್ದವು ಸುಮಾರು ೭೫ ಸಾವಿರ ಮೈಲಿಗಳಾಗಿವೆ ನಾಲೆಗಳಲ್ಲಿ ನೀರು ನಿಂತು ಉಂಟಾಗು ತ್ತಿರುವ ತೊಂದರೆಯ ನಿವಾರಣಕ್ರಮ, ನದಿಗಳು ಪಾತ್ರವನ್ನು ಬದಲಾಯಿಸದಹಾಗೆ ಮಾಡುವುದು, ಹೆಚ್ಚು ಪ್ರಯೋಜನವಾಗುವ ರೀತಿಯಲ್ಲಿ ಅಣೆಕಟ್ಟು ಹಾಕುವುದು— ಇವೇ ಮುಂತಾದ ಉಪಯುಕ್ತ ವಾದ ಕಾರ್ಯಕ್ರಮಗಳಿಗೆ ಸುಲಭವಾದ ಸಲಹೆಯನ್ನಿತ್ತಿದ್ದಾರೆ ಅದರಂತೆ ಆಚರಿಸಿದರೆ ದೇಶದ ವ್ಯವಸಾಯಕ್ರಮವು ಅಭಿವೃದ್ಧಿ ಯಾಗುವುದರಲ್ಲಿ ಸಂದೇಹವಿಲ್ಲ

ಆದರೆ ಸರಕಾರದವರ ಶಕ್ತಿಗೂ ಒಂದು ಮಿತಿ ಇದೆ ಪೂರ್ವಕಾಲದಲ್ಲಿ ನಮ್ಮ ರೈತರು ಒಗ್ಗಟ್ಟಾಗಿ ಸೇರಿ, ತಮ್ಮ ಗ್ರಾಮದ ಕೆರೆಗಳನ್ನೂ ಬಾವಿ ಗಳನ್ನೂ ತಾವೇ ಸರಿಮಾಡಿಕೊಂಡು ಅದರಿಂದ ಹೆಚ್ಚು ಪ್ರಯೋಜನವನ್ನು

ಹೊಂದುತ್ತಿದ್ದರು ಕ್ರಮೇಣ ಈ ಪದ್ಧತಿಯು ಹೋಗುತ್ತಾ ಇವೆ ನಮ್ಮ ರೈತರು ಸರಕಾರದವರೇ ಪ್ರತಿಯೊಂದನ್ನೂ ಮಾಡಬೇಕೆಂದು ಅಪೇಕ್ಷಿಸುತ್ತಾ ತಮ್ಮ ಸ್ವಾವಲಂಬನ ಶಕ್ತಿಯನ್ನು ಕಳೆದುಕೊಳ್ಳು ತ್ತಿದ್ದಾರೆ ಇನ್ನುಮುಂದೆಯಾದರೂ ಅವರು ಹಾಗೆ ಮಾಡವೆ ತಮ್ಮ ಬಾವಿ, ಕೆರೆಗಳನ್ನು ಸರಿಯಾದ ಸ್ಥಿತಿಯಲ್ಲಿಟ್ಟುಕೊಂಡು, ಅವುಗಳ ಜಲಾಶಯದಿಂದ ಹೆಚ್ಚು ಪ್ರಯೋಜನವನ್ನು ಹೊಂದಬೇಕು

ವ್ಯವಸಾಯಾಭಿವೃದ್ಧಿಗೆ ಗೊಬ್ಬರ, ನೀರು ಎಷ್ಟು ಅವಶ್ಯಕವೋ ಒಳ್ಳೆಯ ಬೀಜಗಳೂ ಅಷ್ಟೇ ಅವಶ್ಯಕವಾಗಿವೆ ಒಳ್ಳೆಯ ಬೀಜಗಳನ್ನು ಆರಿಸುವುದರ ಜೊತೆಗೆ ಯಾವ ಬೆಳೆಯನ್ನು ಮಾಡಿದರೆ ಹೆಚ್ಚು ಲಾಭ ಬರುವುದು ಎಂಬುದನ್ನು ನಮ್ಮ ರೈತರು ವಿಚಾರಮಾಡಬೇಕು ಪಾಶ್ಚಾತ್ಯ ದೇಶಗಳಲ್ಲಿ ಒಳ್ಳೆಯ ಬೀಜಗ- ಪ್ರಚಾರ ಕಾರ್ಯಗಳನ್ನು ವಿಸ್ತಾರವಾಗಿ ನಡೆಯಿಸಿ, ಅವುಗಳನ್ನು ರೈತರಿಗ ಒದಗಿಸಲು ಪ್ರತ್ಯೇಕ ಸಂಸ್ಥೆಗಳನ್ನು ಸ್ಥಾಪಿಸಿದ್ದಾರ ಹೊಸ ಪ್ರಯೋಗಗಳಿಂದ ಲಾಭಕರವಾದ ಬೀಜಗಳನ್ನು ಕಂಡುಹಿಡಿಯುತ್ತಿದ್ದಾರೆ ಅವರ ಪರಿಶೋಧನ ಕ್ರಮವು ಉಪಯುಕ್ತ ವಾದ ರೀತಿಯಲ್ಲಿ ಮುಂದುವರಿಯುತ್ತಾ ಇವೆ ಕೈಗಾರಿಕೆಯೇ ಪ್ರಧಾನ ವೃತ್ತಿಯಾಗಿ ಉಳ್ಳ ಇಂಗ್ಲೆಂಡ್ ದೇಶದಲ್ಲಿ ಕೂಡ ವ್ಯವಸಾಯ ನಿಪುಣರು ನಾಗುವಳಿ ಕ್ರಮವನ್ನು ಅಭಿವೃದ್ಧಿಪಡಿಸುತ್ತಿರುವಾಗ, ವ್ಯವಸಾಯವೇ ಮುಖ್ಯ ಕಸಬಾಗಿರುವ ಇಂಡಿಯಾ ದೇಶವು ಇದನ್ನು ಮುಖ್ಯವಾಗಿಟ್ಟು ಕೊಂಡು, ಇದಕ್ಕೆ ಗಣ್ಯಸ್ಥಾನವನ್ನು ಕೊಡಬೇಕೆಂಬದಾಗಿ ಬೇರೆ ಹೇಳಬೇಕಾಗಿಯೇ ಇಲ್ಲ ವ್ಯವಸಾಯ ಇಲಾಖೆಯವರು ಹೊಸ ಬೀಜ ಗಳನ್ನು ಪರೀಕ್ಷಾ ಕ್ಷೇತ್ರಗಳಲ್ಲಿ ಬೆಳದು, ಅವುಗಳನ್ನು ರೈತರಿಗೆ ಸಕಾಲ ದಲ್ಲಿ ಹಂಚುವುದಕ್ಕೆ ಅನುಕೂಲವಾದ ಸಹಕಾರ ಸಂಸ್ಥೆಗಳನ್ನು ಸ್ಥಾಪಿಸ ಬೇಕು

ನಮ್ಮ ರೈತರಿಗೆ ''ಹಚ್ಚು ಬೆಳ ಬೇಕು ಒಳ್ಳೆಯ ದವಸಧಾನ್ಯ ಬೇಕು ರೈತರು ಆಹಾರಸಾಮಗ್ರಿಗಳನ್ನು ಬೇಕಾದಷ್ಟು ಬೆಳೆಯಬೇಕು ಹಳ್ಳಿಗಾಡುಗಳಲ್ಲಿ ರೈತರಿಗೆ ಎರಡು ಹೊತ್ತು ಉಣ್ಣಲು ಹಿಟ್ಟಿಲ್ಲ ದವಸ ಗಳನ್ನು ಬೆಳೆದಷ್ಟೂ ಲಾಭವೇ ವ್ಯವಸಾಯ ಪರಿಶೋಧನೆಗಳಿಗೆ ನಮ್ಮ

ದೇಶದಲ್ಲಿ ಕಣ್ಣುಮುಚ್ಚಿಕೊಂಡು ಹಣ ಸುರಿಯಬೇಕು ಅದರಿಂದೇನಾಯಿತು, ಇದರಿಂದೇನಾಯಿತು ಎಂದು ಸಂಶಯಪಡಬೇಡಿ ತತ್‌ಕ್ಷಣದಲ್ಲಿಯೇ ಪೂರ್ಣಫಲವನ್ನು ಒಂದೊಂದು ಪ್ರಯೋಗದಿಂದಲೂ ನಿರೀಕ್ಷಿಸಬೇಡಿ ವ್ಯವಸಾಯ ವಿಜ್ಞಾನ ಶೋಧನಾ ಫಲವು ಕಾಲಕ್ರಮದಲ್ಲಿ ಪರಮಾಶ್ಚರ್ಯವಾದ ಫಲವನ್ನುಂಟುಮಾಡುತ್ತದೆ'' ಎಂಬದಾಗಿ ವ್ಯವಸಾಯಶಾಸ್ತ್ರ ನಿಪುಣರೂ, ಅನುಭವಿಗಳೂ, ಭಾರತ ಕೇಂದ್ರ ವ್ಯವಸಾಯ ಪರಿಶೀಲನಾ ಸಮಿತಿಯ ಉಪಾಧ್ಯಕ್ಷರೂ ಆಗಿದ್ದ ಸರ್ ಟಿ ವಿಜಯರಾಘವಾಚಾರ್ಯರು ಹೇಳಿದ್ದಾರೆ *

ನಮ್ಮ ದೇಶದ ವ್ಯವಸಾಯವು ಸಂಪ್ರದಾಯಬದ್ಧವಾಗಿಯೇನೋ ಇದ ನಮ್ಮ ರೈತರಿಗೆ ಸಾವಿರಾರು ವರ್ಷಗಳ ಅನುಭವವೂ ಇದೆ ಆದರ ಇತರ ದೇಶಗಳ ವ್ಯವಸಾಯದಲ್ಲಿ ಆಗುತ್ತಿರುವ ಉತ್ತಮ ಮಾರ್ಪಾಡುಗಳೊಡನ ನಮ್ಮ ದೇಶವನ್ನು ಹೋಲಿಸಿದರೆ, ನಮ್ಮ ದೇಶವು ಎಷ್ಟು ಹಿಂದುಳಿದಿದೆಯೆಂಬುದು ಚೆನ್ನಾಗಿ ತಿಳಿಯುವುದು ಕಳೆದ ಮಹಾ ಸಂಗ್ರಾಮವಾದಮೇಲೆ ಪಾಶ್ಚಾತ್ಯ ರಾಷ್ಟ್ರಗಳು ತಮ್ಮ ವ್ಯವಸಾಯ ಕ್ರಮವನ್ನು ಅಭಿವೃದ್ಧಿಪಡಿಸಿಕೊಂಡಿವ ಇದರ ಫಲವಾಗಿ ಸಾಗುವಳಿಯಲ್ಲಿ ಯಂತ್ರೋಪಕರಣಗಳ ಉಪಯೋಗವು ಬಹಳಮಟ್ಟಿಗ ಹೆಚ್ಚಿವೆ ಹಿಂದುಳಿದಿದ್ದ ರಷ್ಯಾ ದೇಶದಲ್ಲಿ ಕೂಡ ಟ್ರಾಕ್ಟರ್ಸ್, ಹಾರ್‌ವೆಸ್ಟರ್ಸ್ ಮುಂತಾದ ಯಂತ್ರಗಳು ವಿಶೇಷವಾಗಿ ಉಪಯೋಗದಲ್ಲಿವೆ ಅಮೇರಿಕಾ, ಕಾನಡಾ ರಾಷ್ಟ್ರಗಳಲ್ಲಿಯೂ ಯಂತ್ರಗಳ ಉಪಯೋಗದಿಂದ ವ್ಯವಸಾಯ ಕ್ರಮವನ್ನು ಉತ್ತಮಪಡಿಸಿದ್ದಾರ

ಇಂತಹ ಯಂತ್ರಯುಗದಲ್ಲಿಯೂ ಕೂಡ ನಮ್ಮ ದೇಶದ ವ್ಯವಸಾಯದಲ್ಲಿ ಉಪಯೋಗಿಸುತ್ತಿರುವ ಭಾರವಿಲ್ಲದ ಮರದ ನೇಗಿಲು, ಕುಂಟೆ, ಹಲುಬ ಇನ್ನೂ ಮುಂತಾದ ಉಪಕರಣಗಳಲ್ಲಿ ಯಾವ ಬದಲಾವಣೆಯೂ ಆಗಿಲ್ಲ ಒಂದು ದೃಷ್ಟಿಯಿಂದ ನೋಡಿದರ ಈ ಸಾಮಗ್ರಿಗಳ ಪ್ರಯೋಗವು ನಮ್ಮ ರೈತರ ಸ್ಥಿತಿಗೆ ಅನುಗುಣವಾಗಿಯೇ ಇದೆ, ಅವರ ಬಡತನದ ಬಂಡವಾಳಕ್ಕೂ ಅವರ ಬಡಕಲು ದನಕರುಗಳಿಗೂ ಯೋಗ್ಯವಾಗಿಯೇ

* "Speech at Bangal Chamber of Commerce", by Sir T V Achar 25-1-37

ಇದೆ. ಈ ಪುರಾತನ ಉಪಕರಣಗಳಿಂದ ನಮ್ಮ ವ್ಯವಸಾಯದಲ್ಲಿ ಹೆಚ್ಚು ಲಾಭವಾಗುವುದಿಲ್ಲ. ನಮ್ಮ ದೇಶದ ವ್ಯವಸಾಯವು ಉತ್ತಮವಾಗ ಬೇಕಾದರೆ ಯಂತ್ರಗಳ ಉಪಯೋಗವು ಅತ್ಯಾವಶ್ಯಕ ಎಂಬದಾಗಿ ಸರ್ ಎಂ. ವಿಶ್ವೇಶ್ವರಯ್ಯನವರು ಹೇಳಿದ್ದಾರೆ.*

ನಮ್ಮ ದೇಶದ ಜಮೀನು ತಾಕುಗಳು ಸಣ್ಣದಾಗಿ ಚದುರಿಹೋಗುತ್ತಿವೆ. ಜಮೀನಿಗೆ ನೀರಾವರಿ ಸಾಲದೆ ಮಳೆನೀರಿನ ಆಶ್ರಯದಿಂದಲೇ ಸಾಗುವಳಿಯಾಗಬೇಕಾಗಿದೆ. ಹೀಗಿರುವಲ್ಲಿ ಟ್ರಾಕ್ಟರ್ಸ್, ಹಾರ್ವೆಸ್ಟರ್ಸ್ ಮುಂತಾದ ಆಧುನಿಕ ಯಂತ್ರಗಳಿಂದ ನಮಗೆ ಹೆಚ್ಚು ಪ್ರಯೋಜನವಿಲ್ಲ. ಅವುಗಳನ್ನು ಉಪಯೋಗಿಸುವುದೇ ಅನೇಕ ವೇಳೆ ಕಷ್ಟವಾಗುತ್ತದೆ. ಆದರೆ ಅನೇಕ ಪ್ರಾಂತೀಯ ವ್ಯವಸಾಯ ಶಾಖೆಗಳಲ್ಲಿ ಪರೀಕ್ಷಾ ಕ್ಷೇತ್ರಗಳಲ್ಲಿ ಉಪಯೋಗದಲ್ಲಿರುವ ಕಬ್ಬಿಣದ ನೇಗಿಲು, ಹಲುಬೆ, ಮುಂತಾದ ಕೆಲವು ಉತ್ತಮ ಉಪಕರಣಗಳನ್ನು ನಮ್ಮ ರೈತರು ಉಪಯೋಗಿಸುವುದಕ್ಕೆ ಯಾವ ಅಡ್ಡಿಯೂ ಇರುವುದಿಲ್ಲ. ಇಂತಹ ಸಾಮಗ್ರಿಗಳನ್ನು ಹಳ್ಳಿಯ ಬಡಗಿಗಳೇ ಮಾಡಬಹುದು. ಇವುಗಳನ್ನು ನಮ್ಮ ರೈತರು ಹೆಚ್ಚು ಹೆಚ್ಚಾಗಿ ಉಪಯೋಗಿಸುವುದರಿಂದ ತಾವು ಹೆಚ್ಚು ಪ್ರತಿಫಲವನ್ನು ಹೊಂದುವುದಲ್ಲದೆ, ಈ ಸಣ್ಣ ಕೈಗಾರಿಕೆಗಳಿಗೆ ಕೂಡ ಉತ್ತೇಜನ ಕೊಟ್ಟಂತಾಗುತ್ತದೆ. ಈ ವಿಧವಾದ ಉಪಕರಣಗಳು ಮೈಸೂರು ಸಂಸ್ಥಾನದಲ್ಲಿ ಹೆಚ್ಚು ಪ್ರಚಾರಕ್ಕೆ ಬಂದಿವೆ. ಸಂಸ್ಥಾನದ ವ್ಯವಸಾಯ ಶಾಖೆಯವರು 'ಮೈಸೂರು ನೇಗಿಲು' ಎಂಬ ಉತ್ತಮ ನೇಗಿಲನ್ನು ತಯಾರುಮಾಡಿಸಿ, ರೈತರಿಗೆ ಸುಲಭ ಬೆಲೆಗೆ ಮಾರುವ ಏರ್ಪಾಡು ಮಾಡಿದ್ದಾರೆ. ಇದರ ಹಾಗೆಯೇ ಇನ್ನೂ ಅನೇಕ ಉಪಕರಣಗಳನ್ನು ಸರಕಾರದ ಪ್ರಯೋಗ ಕ್ಷೇತ್ರಗಳಲ್ಲಿ ಉಪಯೋಗಿಸಿ, ಅದರ ಪ್ರಯೋಜನವನ್ನು ತಾವು ಮೊದಲು ಅನುಭವಿಸಿ, ಅನಂತರ ರೈತರ ಉಪಯೋಗಕ್ಕೆ ಈ ಉಪಕರಣಗಳನ್ನು ಒದಗಿಸುತ್ತಿದ್ದಾರೆ.

ನಮ್ಮ ದೇಶದ ವ್ಯವಸಾಯಕ್ಕೆ ದನಕರುಗಳನ್ನು ಉಪಯೋಗಿಸುತ್ತಾರೆ. ಇತರ ದೇಶಗಳಲ್ಲಿ ಪ್ರಚಾರದಲ್ಲಿರುವ ಯಂತ್ರಗಳಾಗಲಿ ಅಥವಾ

* "Planned Economy for India", by Sir M. V., Chapter on Holding

ಕುದುರೆಗಳಾಗಲಿ ಇಲ್ಲಿ ಇಲ್ಲ. ಬಹು ಕಾಲದಿಂದ ಭೂಮಿಯನ್ನು ಉಳುವುದಕ್ಕೂ, ಕಪಿಲ ಬಾವಿಗಳಿಂದ ನೀರು ಎತ್ತುವುದಕ್ಕೂ, ವ್ಯವಸಾಯಕ್ಕೆ ಸಂಬಂಧಪಟ್ಟ ಇತರ ಕೆಲಸಗಳಿಗೂ, ದನಗಳನ್ನೇ ಉಪಯೋಗಿಸುತ್ತಿದ್ದಾರೆ. ರೈತರು ಉಪಯೋಗಿಸುತ್ತಿರುವ ದನಗಳು ಅವರಿಗಿಂತ ಹೆಚ್ಚು ಕೃಶವಾಗಿವೆ. ಎತ್ತುಗಳು ಕಬ್ಬಿಣದ ನೇಗಿಲನ್ನು ಎಳೆಯುವಷ್ಟು ಬಲವಾಗಿಲ್ಲ. ಅನೇಕ ಕಡೆಗಳಲ್ಲಿ ಉಳುವುದಕ್ಕೆ ಮುದಿ ಹಸುಗಳನ್ನೂ ಅಥವಾ ಎಳೆ ಕರುಗಳನ್ನೂ ಉಪಯೋಗಿಸುತ್ತಿದ್ದಾರೆ. ರೈತರ ದಾರಿದ್ರ್ಯವು ಹೆಚ್ಚಿದ ಹಾಗೆಲ್ಲಾ ಅವರ ದನಕರುಗಳ ಶಕ್ತಿಯು ಕುಂದುತ್ತಾ ಬರುತ್ತದೆ. ಅವುಗಳಿಗೆ ಸರಿಯಾದ ಆಹಾರವನ್ನು ಒದಗಿಸಲು ರೈತರಿಗೆ ಶಕ್ತಿಯಿಲ್ಲ. ಒಳ್ಳೆಯ ಎತ್ತುಗಳನ್ನು ಇಡುವುದಕ್ಕೆ ಅವರ ಕೈಲಿ ಹಣವಿಲ್ಲ. ನಮ್ಮ ದೇಶದಲ್ಲಿ ಈಗ ಇರುವ ದನಕರುಗಳು ಇತರ ದೇಶಗಳಲ್ಲಿ ಇರುವವುಗಳಿಗಿಂತ ಹೆಚ್ಚಾಗಿಯೇ ಇವೆ. ಆದರೆ ಯೋಗ್ಯತೆಯಲ್ಲಿ ನಮ್ಮವು ಬಹಳ ಹಿಂದಾಗಿವೆ.

| ನಂ | ದೇಶದ ಹೆಸರು | ಪ್ರತಿ ನೂರು ಜನಕ್ಕೆ ಇರುವ ದನಕರುಗಳ ಸಂಖ್ಯೆ |
|---|---|---|
| 1 | ಇಂಗ್ಲೆಂಡ್ | 18 |
| 2 | ಇಟಲಿ | 18 |
| 3 | ಜರ್ಮನಿ | 29 |
| 4 | ಈಜಿಪ್ಟ್ | 56 |
| 5 | ಇಂಡಿಯಾ* | 62 |

ಅಪ್ರಯೋಜಕವಾದ ಅನೇಕ ದನಗಳಿರುವುದಕ್ಕಿಂತ ಉತ್ತಮವಾದ ಕೆಲವು ದನಗಳಿರುವುದೇ ಲೇಸು. ಸಾವಿರಾರು ದನಗಳಿಗೆ ಅರ್ಧ ಹೊಟ್ಟೆಗೆ ಹಾಕುವ ಆಹಾರವನ್ನೇ ಕೆಲವು ಉತ್ತಮ ರಾಸುಗಳಿಗೆ ಹೊಟ್ಟೆ ತುಂಬ ಹಾಕಿ, ಅವುಗಳಿಂದ ಹೆಚ್ಚು ಪ್ರಯೋಜನವನ್ನು ಮತ್ತು ಲಾಭವನ್ನು ಹೊಂದಬಹುದು. ಹಿಂದು ಸಮಾಜದಲ್ಲಿ ಪಶುಪಾಲನೆಯು ವ್ಯವಸಾಯಕ್ಕಿಂತಲೂ ಪ್ರಾಚೀನ ವೃತ್ತಿ. ವೇದ, ಉಪನಿಷತ್ತುಗಳ

* "The Punjab Peasant in Prosperity and Debt", by M. L. Darling, p. 31.

ಕಾಲದಿಂದ ಗೋಪೂಜೆಯು ಆರ್ಯಧರ್ಮದ ತಳಹದಿಯಾಗಿದೆ ಈ ಕಾರಣದಿಂದ ಕೆಲಸಕ್ಕೆ ಬಾರದ ಶಕ್ತಿಗುಂದಿದ ದನಕರುಗಳನ್ನು, ಪಾಶ್ಚಾತ್ಯ ದೇಶಗಳಲ್ಲಿರುವಂತೆ ಆಹಾರಕ್ಕಾಗಿ ಕೊಲ್ಲುವ ಪದ್ಧತಿಯು ನಮ್ಮ ದೇಶದಲ್ಲಿ ಪ್ರಚಾರದಲ್ಲಿ ಇಲ್ಲ ಇದರಿಂದ ಉತ್ತಮವಾದ ರಾಸುಗಳಿಗೆ ಒದಗಿಸುವ ಆಹಾರದಲ್ಲಿ ಸ್ವಲ್ಪ ಭಾಗವಾದರೂ ಅಪ್ರಯೋಜಕ ವಾದ ರಾಸುಗಳಿಗೆ ಹೋಗಲೇಬೇಕಾಗಿದೆ ಅಂತು ಒಟ್ಟಿನಲ್ಲಿ ನಮ್ಮ ದೇಶದಲ್ಲಿ ದನಕರುಗಳ ಆಹಾರ ಸೌಕರ್ಯವು ಸಮರ್ಪಕವಾಗಿಲ್ಲವೆಂದು ಹೇಳಬಹುದು

ನಮ್ಮ ದೇಶದ ರೈತರು ಸಾಗುವಳಿಯಲ್ಲಿ ಉಪಯೋಗಕ್ಕೂ, ಗೊಬ್ಬರವನ್ನು ಶೇಖರಿಸುವುದಕ್ಕೂ, ಮತ್ತು ಹಾಲು, ಮೊಸರು, ಬೆಣ್ಣೆ ಗಾಗಿಯೂ ದನಗಳನ್ನು ಸಾಕುವರು ಪಾಶ್ಚಾತ್ಯ ದೇಶಗಳಲ್ಲಿ ಸಾಕುವುದು ಹಾಲು, ಬೆಣ್ಣೆಗೂ ಮತ್ತು ಮಾಂಸಕ್ಕಾಗಿಯೂ ಮಾತ್ರ ನಮ್ಮ ದೇಶಕ್ಕಿಂತ ಪಾಶ್ಚಾತ್ಯ ದೇಶಗಳಲ್ಲಿ ದನಕರುಗಳ ಸಂಖ್ಯೆಯು ಕಡಿಮೆ ಯಾಗಿದ್ದರೂ ಅವುಗಳಿಂದ ಅವರು ಹೊಂದುವ ಲಾಭವು ಬಹಳ ಹೆಚ್ಚು ಹಾಲು ಕೊಡುವುದರಲ್ಲಿ ಆ ಹಸುಗಳನ್ನು ಬಿಟ್ಟರೆ ಇಲ್ಲ ಮಾಂಸವನ್ನು ಒದಗಿಸುವುದರಲ್ಲಿಯೂ ಕೂಡ ಅಲ್ಲಿಯ ರಾಸುಗಳು ಪುಷ್ಟಿ ಯಾಗಿಯೂ ಉತ್ತಮವಾಗಿಯೂ ಇವೆ (ನಮ್ಮ ದೇಶದಲ್ಲಿಯೂ ಕೂಡ ರಾಸುಗಳು ಉತ್ತಮವಾಗಬೇಕಾದರೆ, ಅವುಗಳ ಪಾಲನೆಯ ವಿಷಯ ದಲ್ಲಿ ನಮ್ಮ ರೈತರು ಹೆಚ್ಚು ಆಸಕ್ತಿ ವಹಿಸಬೇಕು) ಒಳ್ಳೆಯ ಜಾತಿಯ ಹೋರಿಗಳನ್ನು ಸಾಕುವುದರ ಜೊತೆಗೆ ಹಾಲನ್ನು ಹೆಚ್ಚಾಗಿ ಕೊಡುವ ದನಗಳನ್ನೂ ಅಭಿವೃದ್ಧಿಪಡಿಸಬೇಕು ನಮ್ಮ ರೈತರ ಕಷ್ಟ ನಿವಾರಣೆ ಯಾಗಬೇಕಾದರೆ, ಅವರ ದನಕರುಗಳು ಬಲವಾಗಬೇಕು ಇತರ ದೇಶಗಳಲ್ಲಿ ಮನುಷ್ಯರು ತಮ್ಮ ಆಹಾರ ವಿಷಯದಲ್ಲಿ ಎಷ್ಟು ಶ್ರದ್ಧೆ ವಹಿಸಿರುವರೋ ಅಷ್ಟೆ ಆಸಕ್ತಿಯನ್ನೂ, ಶಿಸ್ತನ್ನೂ, ತಮ್ಮ ದನಕರುಗಳ ಆಹಾರದಲ್ಲಿಯೂ ಕೂಡ ತೋರಿಸುತ್ತಿದ್ದಾರೆ ನಮ್ಮ ರೈತರೂ ಕೂಡ ಹೆಚ್ಚು ಮುತವರ್ಜಿಯಿಂದ ದನಗಳಿಗೆ ಆಹಾರವನ್ನು ಒದಗಿಸುವ ಸಸ್ಯ ಗಳನ್ನು ಹೆಚ್ಚಾಗಿ ಬೆಳೆಸಬೇಕು ಶಾಸ್ತ್ರರೀತಿಯಲ್ಲಿ ಅವುಗಳನ್ನು ಶೇಖರಿಸಿ,

ದನಗಳಿಗೆ ಪುಷ್ಟಿಯಾದ ಆಹಾರವನ್ನು ಒದಗಿಸುವ ಏರ್ಪಾಡು ಮಾಡಬೇಕು ಈ ವಿಚಾರದಲ್ಲಿ ವ್ಯವಸಾಯ ಶೋಧನಕಾರರು ಮಾಡಿರುವ ಪ್ರಯೋಗಗಳನ್ನು ನಮ್ಮ ರೈತರೂ ಆಚರಿಸಬೇಕು ಪ್ರತಿ ವರ್ಷವೂ ರೈತರು ಒಂದೇ ಬೆಳೆಯನ್ನು ತೆಗೆಯುವುದಕ್ಕೆ ಬದಲಾಗಿ ತಮ್ಮ ಜಮೀನನ್ನು ಅನುಕೂಲವಾಗಿ ವಿಂಗಡಿಸಿ, ಒಂದು ಪ್ರದೇಶದಲ್ಲಿ ದನಗಳ ಆಹಾರಕ್ಕೆ ಅನುಕೂಲವಾದ ಬೆಳೆ, ಇನ್ನೊಂದರಲ್ಲಿ ಹೆಚ್ಚು ಲಾಭ ಬರತಕ್ಕ ಬೆಳೆ, ಮತ್ತೊಂದರಲ್ಲಿ ತಮ್ಮ ಆಹಾರಕ್ಕೆ ಅತ್ಯವಶ್ಯಕವಾದ ಬೆಳೆ— ಈ ರೀತಿ ಪ್ರತಿ ವರ್ಷವೂ ಸಾಧ್ಯವಾದ ಮಟ್ಟಿಗೆ ಬೆಳೆಯ ಪರಿವರ್ತನೆ ಮಾಡಬೇಕು ಎಂಬದಾಗಿ * ಜಾತಾರ್ ಮತ್ತು ಬೆರಿ ಎಂಬ ಅರ್ಥಶಾಸ್ತ್ರ ನಿಪುಣರು ಹೇಳಿದ್ದಾರೆ

ದನಕರುಗಳನ್ನು ಸಾಕುವುದು ಹೇಳುವಷ್ಟು ಸುಲಭವಲ್ಲವೆಂಬುದು ಎಲ್ಲರಿಗೂ ಗೊತ್ತಿದೆ ನಮ್ಮ ದೇಶದಲ್ಲಿ ಅವುಗಳಿಗೆ ಸರಿಯಾದ ಆಹಾರವಿಲ್ಲದಿರುವುದು ಒಂದು ಕಡೆ ಪದೇ ಪದೇ ಅವುಗಳಿಗುಂಟಾಗುತ್ತಿರುವ ಸಾಂಕ್ರಾಮಿಕ ಜಾಡ್ಯಗಳ ಕಾಟ ಇನ್ನೊಂದು ಕಡೆ ರೈತರ ಬಡತನ ಮತ್ತೊಂದು ಕಡೆ ಈ ಸ್ಥಿತಿಯಲ್ಲಿ ದನಕರುಗಳನ್ನು ಉತ್ತಮಪಡಿಸುವುದು ಕಠಿಣ ಸಮಸ್ಯೆಯೇ ಸರಿ ಆದರೂ ಈ ಸಮಸ್ಯೆಗಳನ್ನು ಬಗೆಹರಿಸದಿದ್ದರೆ ನಿರ್ವಾಹವಿಲ್ಲ ದನಗಳ ಅಂಟುಜಾಡ್ಯಗಳ ನಿವಾರಣೆಗೆ ವೈಜ್ಞಾನಿಕರು ಉಪಾಯಗಳನ್ನು ಕಂಡುಹಿಡಿದಿದ್ದಾರೆ ಇವುಗಳನ್ನು ನಮ್ಮ ರೈತರು ಹೆಚ್ಚು ಹೆಚ್ಚಾಗಿ ಉಪಯೋಗಿಸಿಕೊಳ್ಳಬೇಕು ಪಾಶ್ಚಾತ್ಯ ದೇಶಗಳಲ್ಲಿ ದನಕರುಗಳಿಗೆ ರೋಗ ಬಂದರೆ ಅವುಗಳನ್ನು ನಿವಾರಣೆ ಮಾಡುವುದರ ಜೊತೆಗೆ, ಪಶುಗಳ ಜೀವವಿಮೆಯೂ ಕೂಡ ಬಳಕೆಯಲ್ಲಿದೆ ಅಲ್ಲಿಯ ರೈತರು ತಮ್ಮ ದನಕರುಗಳು ಸತ್ತರೆ ವಿಮಾ ಕಂಪನಿಯಿಂದ ಬಂದ ಹಣದಿಂದ ಬೇರೆ ಉತ್ತಮ ರಾಸುಗಳನ್ನು ಕೊಳ್ಳಬಹುದು ನಮ್ಮ ರೈತರ ರಾಸುಗಳು ಸತ್ತರೆ, ಅವರು ಕೂಡಲೆ ಸಾಹುಕಾರರನ್ನು ಶರಣು ಹೊಂದಿ ಹೆಚ್ಚು ಬಡ್ಡಿಯ ಸಾಲದ ಹಣದಿಂದ ದನಗಳನ್ನು ಕೊಳ್ಳಬೇಕಾಗುವುದು ಆದುದರಿಂದ ಇತರ ದೇಶಗಳಲ್ಲಿರುವಂತೆ ನಮ್ಮ ದೇಶದಲ್ಲಿಯೂ

* "Indian Economics", Vol I, by Jathar and Beri, p 242

ವಿಮಾಕ್ರಮವನ್ನು ಬಳಕೆಯಲ್ಲಿ ತರುವುದು ಉತ್ತಮವೆಂದು ಡಾರ್ಲಿಂಗ್‌ರವರು ಅಭಿಪ್ರಾಯಪಟ್ಟಿದ್ದಾರೆ ಆದರೆ ತಮ್ಮ ಜೀವದ ವಿಮೆಗೇ ಶಕ್ತಿಯಿಲ್ಲದಿರುವ ನಮ್ಮ ರೈತರು, ತಮ್ಮ ದನಕರುಗಳ ವಿಮೆಯನ್ನು ಎಷ್ಟರಮಟ್ಟಿಗೆ ಮಾಡುವರು ಎಂಬುದೇ ಅನುಮಾನದ ಪ್ರಶ್ನೆಯಾಗಿದೆ

ವ್ಯವಸಾಯಾಭಿವೃದ್ಧಿಗೆ ಮುಖ್ಯ ಅಂಗವಾದ ಭೂಮಿ, ಗೊಬ್ಬರ, ನೀರು, ದನಕರುಗಳು ಮತ್ತು ಇತರ ಉಪಕರಣಗಳು—ಇವೇ ಮುಂತಾದವನ್ನು ವಿಮರ್ಶೆಮಾಡಿದುದಾಯಿತು ಹಾಗೆಯೇ ನಾಗುವಳಿಯ ಮೇಲ್ಮೆಗೆ ಒಂದಲ್ಲ ಒಂದು ವಿಧದಲ್ಲಿ ಸಹಾಯಮಾಡುವ ಕೆಲವು ಕಾರಣಗಳನ್ನು ವಿಚಾರಮಾಡುವುದು ಈಗ ಈ ಸಂದರ್ಭದಲ್ಲಿ ಸೂಕ್ತವಾಗಿ ಕಾಣುತ್ತದೆ ಇವುಗಳಲ್ಲಿ ಮುಖ್ಯವಾದುದು ವ್ಯವಸಾಯ ಸಂಶೋಧನಾ ಕೇಂದ್ರಗಳು ಈ ಕ್ಷೇತ್ರಗಳಲ್ಲಿ ಪ್ರಯೋಗಮಾಡಿದ ಉದಾಹರಣೆಗಳನ್ನು ನಮ್ಮ ಹಳ್ಳಿಗಳಲ್ಲಿ ಪ್ರಚಾರಮಾಡಿದರೆ ನಮ್ಮ ವ್ಯವಸಾಯವು ಅಭಿವೃದ್ಧಿಯಾಗುವುದರಲ್ಲಿ ಸಂದೇಹವಿಲ್ಲ ನಮ್ಮ ದೇಶದ ಮುಖ್ಯ ಪ್ರಯೋಗ ಕ್ಷೇತ್ರಗಳಲ್ಲಿ ಆಗ್ರಾ ಸಮೀಪದಲ್ಲಿರುವ ದಯಾಲ್‌ಬಾಗ್, ವಸಾಹತುವು ಉತ್ತಮವಾಗಿದೆ

ದಯಾಲ್‌ಬಾಗ್ ಕ್ಷೇತ್ರವು ೩,೦೦೦ ಎಕರೆ ಜಮೀನನ್ನೊಳಗೊಂಡು, ತನ್ನದೇ ಒಂದು ಶಿಕ್ಷಣಶಾಲೆಯನ್ನು ಹೊಂದಿದೆ ಈ ಕ್ಷೇತ್ರದಲ್ಲಿ ಬ್ಯಾಂಕ್, ಆಸ್ಪತ್ರೆ, ಎಣ್ಣೆ ಮತ್ತು ಹಿಟ್ಟು ಮಾಡುವ ಯಂತ್ರಗಳು, ನವೀನ ರೀತಿಯಲ್ಲಿ ತಯಾರುಮಾಡುವ ಬೆಣ್ಣೆ, ಹಾಲು ಇವುಗಳ ಸೌಕರ್ಯಗಳೆಲ್ಲಾ ಇವೆ ಈ ವಿಶಾಲವಾದ ವ್ಯವಸಾಯ ಕ್ಷೇತ್ರದಲ್ಲಿ ಸುಮಾರು ೭೦೦ ಮಂದಿ ವಿದ್ಯಾರ್ಥಿಗಳು ಶಿಕ್ಷಣಹೊಂದುತ್ತಾ ಇದ್ದಾರೆ ಇಲ್ಲಿರುವವರೆಲ್ಲಾ ತಮಗೆ ಬೇಕಾದ ಪದಾರ್ಥಗಳನ್ನೆಲ್ಲಾ ತಾವೇ ತಯಾರುಮಾಡಿ, ಉಪಯೋಗಿಸಿಕೊಳ್ಳುತ್ತಾರೆ ಇದು ಒಂದು ಮಾದರಿ ಸಂಸ್ಥೆಯಾಗಿದೆ ೫,೦೦೦ ರೂಪಾಯಿನ ಬಂಡವಾಳದಿಂದ ಆರಂಭಿಸಿದ ಈ ಕ್ಷೇತ್ರಕ್ಕೆ ೩೦ ವರ್ಷಗಳೊಳಗೆ ೪೨ ಲಕ್ಷ ರೂಪಾಯಿ ಖರ್ಚಾಗಿ, ಇಲ್ಲಿ ಲಕ್ಷಾಂತರ ರೂಪಾಯಿ ಸಂಪಾದನೆಯಾಗುತ್ತಿದೆ ೧೯೩೩ನೆಯ ಇಸವಿಯಲ್ಲಿ ಈ ಕ್ಷೇತ್ರದಲ್ಲಿ ೩॥ ಲಕ್ಷ ರೂಪಾಯಿ ಆದಾಯ ಬಂದಿತು ಅದರ

ಪೈಕಿ ಅಲ್ಲಿಯ ಕೈಗಾರಿಕೆಗಳಿಗಾಗಿಯೇ ೨ ಲಕ್ಷ ರೂಪಾಯಿಗೆ ಮೇಲ್ಪಟ್ಟು
ಬಂಡವಾಳ ವಿನಿಯೋಗವಾಯಿತು ೧೯೩೬ನೆಯ ಇಸವಿಯಲ್ಲಿ ಈ ಕ್ಷೇತ್ರ
ದಿಂದ ೫ ಲಕ್ಷ ರೂಪಾಯಿ ಬೆಲೆಯುಳ್ಳ ಪದಾರ್ಥಗಳು ರಫ್ತಾಗಿವೆ ಇಲ್ಲಿ
ಸುಮಾರು ೧೩೯೭ ಮಂದಿ ಕೆಲಸಮಾಡುತ್ತಿದ್ದಾರೆ ಇಲ್ಲಿ ಉಚ್ಚತರದ
ವೃತ್ತಿಶಿಕ್ಷಣವನ್ನು ಕೊಡುವ ವ್ಯವಸ್ಥೆಯಾಗಿದೆ ಇಲ್ಲಿರುವ ವಿದ್ಯಾರ್ಥಿಗಳ
ಮನಸ್ಸಿನಲ್ಲಿ "ಮನುಷ್ಯನು ಬೆವರು ಸುರಿಸಿ ದುಡಿಯುವುದು ಗೌರವ
ವಾದುದು" ಎಂಬ ಭಾವನೆಯು ಚೆನ್ನಾಗಿ ನಾಟುವಂತ ಬೋಧಿಸಲಾಗು
ತ್ತಿದೆ ಇಂತಹ ಪ್ರಯೋಗಕ್ಷೇತ್ರಗಳನ್ನೇರ್ಪಡಿಸಿಯೇ ಅಮೇರಿಕಾ
ದೇಶದ ಅಧ್ಯಕ್ಷ ರೂಸ್‌ವೆಲ್ಟರು, ಐದಾರು ವರ್ಷ ಕಾಲದೊಳಗೆ
ಸುಮಾರು ೭೦ ಲಕ್ಷ ನಿರುದ್ಯೋಗಿಗಳಿಗೆ ಉದ್ಯೋಗವನ್ನು ದೊರಕಿಸಿಕೊಟ್ಟಿ
ದ್ದಾರೆ ನಮ್ಮ ದೇಶದಲ್ಲಿ ಈ ವಿಧವಾದ ಪರೀಕ್ಷಾಕ್ಷೇತ್ರಗಳು ದೇಶದ
ಎಲ್ಲಾ ಭಾಗಗಳಲ್ಲಿ ಸ್ಥಾಪಿತವಾಗಬೇಕು ನಿರಕ್ಷರಸ್ಥರು, ಪದವೀಧರರು,
ರೈತರು, ಎಲ್ಲರೂ ಸೇರಿ ಈ ಕ್ಷೇತ್ರಗಳಲ್ಲಿ ಕೆಲಸಮಾಡಬೇಕು ರಷ್ಯಾ
ದೇಶದಲ್ಲಿ ಸಹಕಾರತತ್ವದಮೇಲೆ ಕೆಲಸಮಾಡುತ್ತಿರುವಂತ, ನಮ್ಮ ದೇಶ
ದಲ್ಲಿ ಇಂತಹ ಸಂಸ್ಥೆಗಳನ್ನು ಸ್ಥಾಪಿಸಿ, ವ್ಯವಸಾಯಕ್ಕೆ ಯೋಗ್ಯವಾಗಿರುವ
ಜಮೀನುಗಳನ್ನೆಲ್ಲಾ ಸಾಗುವಳಿಗ ತಂದು ನಿರುದ್ಯೋಗ ಸಮಸ್ಯೆಯನ್ನು
ಬಗೆಹರಿಸಬಹುದು ಹೀಗೆ ಮಾಡುವುದರಿಂದ ವ್ಯವಸಾಯಾಭಿವೃದ್ಧಿ
ಯಾಗುವುದಲ್ಲದೆ, ನಮ್ಮ ರೈತರಿಗ ಹೆಚ್ಚು ಉತ್ತೇಜನ ಸಿಕ್ಕುವುದ
ರಲ್ಲಿಯೂ ಸಂದೇಹವಿಲ್ಲ

ಇಲ್ಲಿಯ ವ್ಯವಸಾಯ ಪದ್ಧತಿಯನ್ನು ಉತ್ತಮಪಡಿಸಬೇಕೆಂಬ
ಉದ್ದೇಶದಿಂದ ಇಂಡಿಯಾ ಕೇಂದ್ರ ಸರಕಾರದವರು "ಇಂಪೀರಿಯಲ್
ಕೌನ್ಸಿಲ್ ಆಫ್ ಅಗ್ರಿಕಲ್ಚರಲ್ ರಿಸರ್ಚ್" ಎಂಬ ವ್ಯವಸಾಯ
ಪರಿಶೋಧನಾ ಸಮಿತಿಯನ್ನು ಸ್ಥಾಪಿಸಿದ್ದಾರ ಕಳೆದ ೭–೮ ವರ್ಷಗಳಿಂದ
ಈ ಶೋಧನಾ ಸಮಿತಿಯವರು ಅನೇಕ ಕಾರ್ಯಗಳನ್ನು ನಡೆಯಿಸಿ,
ಉತ್ತಮವಾದ ಹೊಸ ಹೊಸ ವಿಧಾನಗಳನ್ನು ಪ್ರಚಾರಮಾಡುತ್ತಿದ್ದಾರೆ
೧೯೨೮ನೆಯ ಇಸವಿಯ ಲಿನ್‌ಲಿತ್‌ಗೋ ಸಮಿತಿಯವರ ಸಲಹೆಯ ಪ್ರಕಾರ,
ಈ ಸಂಸ್ಥೆಯು ೧೯೨೯ನೆಯ ಇಸವಿಯಲ್ಲಿ ಸ್ಥಾಪಿತವಾಯಿತು ಅಲ್ಲಿಂದೀಚೆಗೆ

ನೂರಾರು ಮಂದಿ ಸಾಹಸಿಗಳಾದ ವೈಜ್ಞಾನಿಕ ನಿಪುಣರು, ವ್ಯವಸಾಯ ಪ್ರಯೋಗಗಳಲ್ಲಿ ಪರಿಶೋಧನಾ ಕೆಲಸಗಳನ್ನು ನಡೆಸಿ, ಈ ಪ್ರಯೋಗಗಳ ಫಲವನ್ನು ದೇಶದ ಎಲ್ಲಾ ಭಾಗಗಳಲ್ಲಿಯೂ ಪ್ರಚಾರಮಾಡುತ್ತಿದ್ದಾರೆ ಈ ಕೇಂದ್ರ ಸಂಸ್ಥೆಯ ಅಂಗವಾಗಿ ಅನೇಕ ಪ್ರಾಂತೀಯ ವ್ಯವಸಾಯ ಇಲಾಖೆಗಳೂ ಉತ್ತಮ ಪ್ರಯೋಗ ಕಾರ್ಯಗಳನ್ನು ನಡೆಸುತ್ತಿವೆ ಉದಾಹರಣೆಗಾಗಿ ಕಬ್ಬು, ಹತ್ತಿ ಬೆಳೆಗಳಿಗೆ ಆಗುತ್ತಿರುವ ಖರ್ಚಿನ ವಿಮರ್ಶೆ, ದನಕರುಗಳ ಜಾಡ್ಯಗಳ ನಿವಾರಣೆ, ಹಣ್ಣುಗಳ ವ್ಯವಸಾಯ, ಮುಂತಾದ ವಿಚಾರಗಳಲ್ಲೆಲ್ಲಾ ಕೇಂದ್ರ ಸಮಿತಿಯವರು ಅತ್ಯುತ್ತಮ ವಾದ ಪ್ರಯೋಗಗಳನ್ನು ನಡೆಸಿರುವುದಲ್ಲದೆ, ಇಂತಹ ಪ್ರಯೋಗಗಳನ್ನು ನಡೆಸುವ ತಮ್ಮ ಅಂಗ ಸಂಸ್ಥೆಗಳಿಗೆ ದ್ರವ್ಯಸಹಾಯ ಮಾಡುತ್ತಿದ್ದಾರೆ ಈ ವಿಧವಾದ ಪ್ರಯೋಗಕ್ಕೆ ಈ ಸಮಿತಿಯವರು ೧೨೦ ಲಕ್ಷ ರೂಪಾಯಿ ಗಳಿಗಿಂತ ಹೆಚ್ಚು ದ್ರವ್ಯ ವ್ಯಯಮಾಡಿದ್ದಾರೆ ಉಪೇಕ್ಷೆಮಾಡಲ್ಪಟ್ಟಿದ್ದ ಪಶುಪಾಲನಾ ವಿಷಯದಲ್ಲಿ ಕೂಡ, ಕೇಂದ್ರ ಸಮಿತಿಯವರು ಉತ್ತಮ ರಾಸುಗಳನ್ನು ಇಡುವ ವಿಧಾನ, ಸಾರವಾದ ಆಹಾರವನ್ನು ಶೇಖರಿಸಿ ದನಕರುಗಳಿಗೆ ಒದಗಿಸುವ ಕ್ರಮ— ಇವುಗಳಲ್ಲಿ ಅನೇಕ ಉದಾಹರಣೆ ಗಳನ್ನು ಸ್ಥಾಪಿಸಿದ್ದಾರೆ

ಈ ಕೇಂದ್ರ ಸಮಿತಿಯವರು ವ್ಯವಸಾಯ ಶಾಸ್ತ್ರೀಯ ಸಂಶೋಧನಾ ಕೆಲಸಗಳನ್ನು ವಿಶ್ವವಿದ್ಯಾನಿಲಯಗಳ ಆಶ್ರಯದಲ್ಲಿ ನಡೆಸುವುದಕ್ಕೆ ದ್ರವ್ಯ ಸಹಾಯ ನೀಡಿ, ಅಂತಹ ಪ್ರಸಿದ್ಧರಾದ ವಿದ್ವಾಂಸರು ನಡೆಸಿದ ಶೋಧನಾ ವಿಷಯಗಳನ್ನು ಕ್ರೋಢೀಕರಿಸಿ, ರೈತರಿಗೆ ಉಪಯೋಗವಾಗು ವಂತೆ ಪ್ರಚಾರಮಾಡುತ್ತಿದ್ದಾರೆ ಕೇಂದ್ರ ಸಂಸ್ಥೆಯ ಆಶ್ರಯದಲ್ಲಿ ಪ್ರಯೋಗ ಕೆಲಸಗಳನ್ನು ಮುಂದುವರಿಸುತ್ತಿರುವ ವಿದ್ವಾಂಸರನ್ನು ಆ ರೀತಿಯ ಪರಿಶೋಧನಾ ಕೆಲಸಗಳಲ್ಲಿ ಪ್ರಸಿದ್ಧಿಯನ್ನು ಪಡೆದಿರುವ ಇತರ ದೇಶಗಳಿಗೆ ಕಳುಹಿಸುತ್ತಿದ್ದಾರೆ ಅವರು ಅಲ್ಲಿಯ ಸಂಶೋಧನಾ ಕ್ರಮವನ್ನು ಚೆನ್ನಾಗಿ ತಿಳಿದುಕೊಂಡುಬಂದು, ಅವುಗಳಿಂದ ನಮ್ಮ ದೇಶದ ರೈತರಿಗೆ ಹೆಚ್ಚು ಸಹಾಯವಾಗುವಂತೆ ಮಾಡುತ್ತಿದ್ದಾರೆ ಸಮಿತಿ ಯವರು ಆಗಾಗ ಪತ್ರಿಕೆಗಳನ್ನು ಹೊರಡಿಸಿ, ಸಭೆಗಳನ್ನು ಸೇರಿಸಿ,

ಪ್ರಾಂತೀಯ ಸರಕಾರಗಳ ಪ್ರತಿನಿಧಿಗಳನ್ನು ತರಪೇತು ಮಾಡಿ, ವ್ಯವಸಾಯಾಭಿವೃದ್ಧಿ ಕಾರ್ಯಗಳನ್ನು ಪ್ರಚಾರಮಾಡುತ್ತಿರುವುದು ಶ್ಲಾಘನೀಯವಾಗಿದೆ ಆದರೆ ಈ ಪ್ರಯೋಗ ಪ್ರಚಾರವು ಇನ್ನೂ ವಿಸ್ತಾರವಾಗಿ ನಡೆದು, ಹೆಚ್ಚು ಆಚರಣೆಯಲ್ಲಿ ಬರುವಂತಾಗಬೇಕು

ಮೈಸೂರು ಸಂಸ್ಥಾನದ ವ್ಯವಸಾಯ ಶಾಖೆಯು "ಪರದೇಶಗಳಲ್ಲಿ ತರಪೇತಾದ ಉತ್ತಮ ದರ್ಜೆಯ ಅಧಿಕಾರಿಗಳನ್ನೊಳಗೊಂಡು ಸುವ್ಯವಸ್ಥಿತ ರೀತಿಯಲ್ಲಿ ಅಭಿವೃದ್ಧಿಕಾರ್ಯಗಳನ್ನು ನಡೆಸುತ್ತಿದೆ ಇದು ಇಡೀ ಇಂಡಿಯಾ ದೇಶಕ್ಕೇ ಒಂದು ಮಾದರಿಯಾಗಿರುವುದು ಹೆಮ್ಮೆಯ ವಿಷಯವೇ ಸರಿ ಪಶುವೈದ್ಯದಲ್ಲಿ ಕೂಡ ಶೋಧನಾಕಾರ್ಯಗಳನ್ನು ನಡೆಸಿ, ಚಪ್ಪೆರೋಗವನ್ನು ನಿರ್ಮೂಲಮಾಡಿರುವುದು ಸ್ತೋತ್ರಾರ್ಹವಾಗಿದೆ" ಎಂಬದಾಗಿ ಕೇಂದ್ರ ಸರಕಾರದ ವ್ಯವಸಾಯ ಪರಿಶೀಲನಾ ಸಮಿತಿಯ ಉಪಾಧ್ಯಕ್ಷರಾದ ಸರ್ ಟಿ ವಿಜಯರಾಘವಾಚಾರ್ಯರು ಹೇಳಿದ್ದಾರೆ ಆಚಾರ್ಯರು ಭರತಖಂಡದ ವ್ಯವಸಾಯ, ರೈತರ ಸಮಸ್ಯೆ, ವ್ಯವಸಾಯದಲ್ಲಿ ಪ್ರಭುತ್ವದವರು ಕೈಗೊಳ್ಳಬೇಕಾದ ಕಾರ್ಯಕ್ರಮ, ಇವುಗಳಲ್ಲೆಲ್ಲಾ ನಿಪುಣರು ವ್ಯವಸಾಯಾಭಿವೃದ್ಧಿಯ ವಿಚಾರದಲ್ಲಿ ಅವರಿಗೆ ತಿಳಿಯದ ಅಂಶವಿಲ್ಲವೆಂಬದಾಗಿ ಬೇಕಾದರೂ ಹೇಳಬಹುದು ಅಂತಹ ಮಹನೀಯರು, ಮಾದರಿ ಸಂಸ್ಥಾನವೆಂದು ಹೆಸರು ಪಡೆದಿರುವ ಮೈಸೂರು ವ್ಯವಸಾಯ ಶಾಖೆಯ ಕಾರ್ಯಕ್ರಮದ ವಿಚಾರವಾಗಿ ಹೇಳಿರುವುದು ಉಪಚಾರೋಕ್ತಿಗಳೇನೂ ಅಲ್ಲ, ಸತ್ಯವಾಗಿಯೇ ಇದೆ

ಹೀಗೆ ಮುಂದುವರಿಯುತ್ತಿರುವ ಸಂಸ್ಥಾನದ ವ್ಯವಸಾಯ ಶಾಖೆಯ ಅಭಿವೃದ್ಧಿಕಾರ್ಯಗಳನ್ನು ಸಂಕ್ಷೇಪವಾಗಿ ಸೂಚಿಸುವುದು ಸೂಕ್ತವಾಗಿದೆ ಸಂಸ್ಥಾನದ ವ್ಯವಸಾಯ ಇಲಾಖೆಯವರು ಉತ್ತಮವಾಗಿ ಬೆಳೆಯುವ ಧಾನ್ಯಗಳನ್ನು ಸರಕಾರದ ಪರೀಕ್ಷಾಕ್ಷೇತ್ರಗಳಲ್ಲಿ ಸೊಗಸಾಗಿ ಬೆಳೆಯಿಸಿ, ಬೀಜಗಳನ್ನು ರೈತರಿಗೆ ಇಲಾಖಾ ಮೂಲಕವೂ, ಸಹಕಾರ ಸಂಸ್ಥೆಗಳ ಮೂಲಕವೂ ಹಂಚುವ ಏರ್ಪಾಡು ಮಾಡಿದ್ದಾರೆ ರಾಗಿ, ಭತ್ತ, ಅಡಿಕೆ, ಕಬ್ಬು, ಕಡಲೇಕಾಯಿ, ಕಾಫಿ— ಇವೇ ಮುಂತಾದ ಮುಖ್ಯ ಬೆಳೆಗಳಿಗೆ ಸರ್ಕಾರದವರು ಪರೀಕ್ಷಾಕ್ಷೇತ್ರಗಳನ್ನು ಸ್ಥಾಪಿಸಿ, ಶಾಸ್ತ್ರೀಯ

ಪ್ರಯೋಗಗಳನ್ನು ನಡೆಯಿಸಿ, ಅನುಕೂಲವಾದ ಪ್ರಚಾರಕಾರ್ಯಗಳನ್ನು ರೈತರಲ್ಲಿ ನಡೆಸುತ್ತಿದ್ದಾರೆ ರಾಗಿ, ಭತ್ತವೇ ಸಂಸ್ಥಾನದ ಮುಖ್ಯ ಬೆಳೆಯಾಗಿರುವುದರಿಂದ, ಹೆಚ್ಚು ಉತ್ಪತ್ತಿಯುಂಟಾಗುವ ಬೀಜಗಳನ್ನು ಪರೀಕ್ಷಾಕ್ಷೇತ್ರಗಳಲ್ಲಿ ಬೆಳೆದು ರೈತರಿಗೆ ಒದಗಿಸುತ್ತಿದ್ದಾರೆ

ಕಬ್ಬಿನ ವ್ಯವಸಾಯವು ಸಂಸ್ಥಾನದಲ್ಲಿ ಬಹು ಮಟ್ಟಿಗೆ ಅಭಿವೃದ್ಧಿ ಹೊಂದುತ್ತಾ ಇದೆ ಮೈಸೂರು ಡಿಸ್ಟ್ರಿಕ್ಟಿನ ಮಂಡ್ಯದಲ್ಲಿ ಸಕ್ಕರೆ ಕಾರ್ಖಾನೆ ಸ್ಥಾಪಿಸಿದಮೇಲಂತೂ ಕಬ್ಬಿನ ಸಾಗುವಳಿಯು ಬಹಳ ಲಾಭದಾಯವಾಗಿದೆ ನೂರಾರು ಎಕರೆ ವಿಸ್ತಾರದ ಪರೀಕ್ಷಾಕ್ಷೇತ್ರಗಳನ್ನು ಸರ್ಕಾರದವರೇ ನಿರ್ಮಿಸಿ, ಉತ್ತಮವಾದ ಕಬ್ಬನ್ನು ಅಲ್ಲಿ ಬೆಳದು ಅವುಗಳ ಬೀಜವನ್ನು ರೈತರಿಗೆ ಹಂಚಿ, ಅನುಕೂಲವಾದ ನೀರು, ಗೊಬ್ಬರಗಳ ಸೌಕರ್ಯವನ್ನು ಕಲ್ಪಿಸಿದ್ದಾರೆ ಈ ಪೈರುಗಳಿಗೆ ಒದಗಬಹುದಾದ ರೋಗಗಳ ನಿವಾರಣಾ ವಿಧಾನವನ್ನೂ ಪ್ರಚಾರಮಾಡುತ್ತಿದ್ದಾರೆ ಇಲಾಖೆಯ ಕಳೆದ ೧೮ ವರ್ಷಗಳ ಪ್ರಯೋಗವೂ ಮತ್ತು ಅನುಭವವೂ ಕಬ್ಬಿನ ನಾಗುವಳಿಯನ್ನು ಅತ್ಯುತ್ತಮವಾದ ಬೆಳೆಯನ್ನಾಗಿ ಮಾಡಿದೆ ಎಕ್ಸರೇ (ವಿದ್ಯುತ್ ಕಿರಣ) ಸಹಾಯದಿಂದ ಹೊಸ ಕಬ್ಬು ತಳಿಗಳನ್ನು ಉತ್ಪತ್ತಿ ಮಾಡುವುದು, ದಪ್ಪ ಕಬ್ಬುಗಳ ವಿಷಯದಲ್ಲಿ ಪ್ರಯೋಗ ನಡೆಸಿರುವುದು, ಕ್ರಿಮಿನಾಶಕ ಔಷಧಗಳ ಪರೀಕ್ಷೆಗಳು—ಇವೇ ಮುಂತಾದ ವಿಷಯಗಳಲ್ಲಿ ಕೇಂದ್ರ ವ್ಯವಸಾಯ ಪರಿಶೀಲನಾ ಸಮಿತಿಯವರ ಸಹಾಯದಿಂದ ಸಂಸ್ಥಾನದ ವ್ಯವಸಾಯ ಶಾಖೆಯ ಪರಿಶೋಧನಾ ಕಾರ್ಯಗಳು ಸಮರ್ಪಕವಾಗಿ ನಡೆದು, ಕಬ್ಬಿನ ಬೆಳೆಗೆ ಹೆಚ್ಚು ಸಹಾಯವಾಗುತ್ತಿವೆ

ಸಂಸ್ಥಾನದ ಅನೇಕ ಭಾಗಗಳಲ್ಲಿ ಸೂಕ್ತವಾಗಿ ತೋರಿದ ಸ್ಥಳಗಳಲ್ಲೆಲ್ಲಾ ಸ್ಥಳೀಯ ಮುಖ್ಯ ಬೆಳೆಗಳ ಪರೀಕ್ಷಾಕ್ಷೇತ್ರಗಳನ್ನು ಸರ್ಕಾರದವರೇ ಸ್ಥಾಪಿಸಿದ್ದಾರೆ ಹತ್ತಿ ಬೆಳೆಯಾಗುವ ಪ್ರದೇಶದಲ್ಲಿ ಹತ್ತಿ ಪರೀಕ್ಷಾಕ್ಷೇತ್ರ ಹಾಗೆಯೇ ಭತ್ತ, ರಾಗಿ, ಕಾಫಿ, ಅಡಿಕೆ, ಕಬ್ಬು—ಇವೇ ಮುಂತಾದ ಬೆಳೆಗಳನ್ನು ಮಾಡುವ ಸ್ಥಳಗಳಲ್ಲಿ ಆಯಾ ಬೆಳೆಗಳ ಪರೀಕ್ಷಾಕ್ಷೇತ್ರಗಳನ್ನು ಸ್ಥಾಪಿಸಿ, ಅವುಗಳಲ್ಲಿ ಉತ್ತಮ ಬೆಳೆಯನ್ನು ತೆಗೆದು, ತೋರಿಸಿ, ರೈತರೂ ಕೂಡ ಲಾಭ ಬರುವ ರೀತಿಯಲ್ಲಿ ಸಾಗುವಳಿಮಾಡಲು

ಉತ್ತೇಜನ ಕೊಡುತ್ತಿದ್ದಾರೆ ಈ ಸಸ್ಯಗಳಿಗೆ ಆಗಾಗ ಒದಗಬಹುದಾದ ರೋಗಗಳಿರುವ ಭಾಗಕ್ಕೆ ಇಲಾಖಾ ಅಧಿಕಾರಿಗಳೇ ಹೋಗಿ, ರೋಗ ನಿವಾರಣಾ ಕಾರ್ಯಗಳನ್ನು ನಡೆಯಿಸಿ ರೈತರಿಗೆ ತೋರಿಸುವಂತೆಯೂ ಏರ್ಪಾಡು ಮಾಡಿದ್ದಾರೆ ಅಡಿಕೆ ಬೆಳೆಯ ಕೊಳೆರೋಗಕ್ಕೆ ಮಾಡುತ್ತಿರುವ ಸ್ಪ್ರೈಯಿಂಗ್ ಒಳ್ಳೆಯ ಉದಾಹರಣೆಯಾಗಿದೆ ಇವುಗಳಲ್ಲದೆ ವ್ಯವಸಾಯ ರಸಾಯನಶಾಸ್ತ್ರ, ಕ್ರಿಮಿಕೀಟಾದಿಗಳ ಶಾಸ್ತ್ರ, ವ್ಯವಸಾಯಿಕ ಯಂತ್ರ ವಿದ್ಯಾ ಶಾಸ್ತ್ರ (Agriculture Engineering) — ಇವುಗಳಲ್ಲೆಲ್ಲಾ ಪರಿಶೋಧನಾ ಕಾರ್ಯಗಳನ್ನು ನಡೆಯಿಸಿ, ಅವುಗಳ ಫಲವನ್ನು ರೈತರಿಗೆ ತಿಳಿಯುವ ರೀತಿಯಲ್ಲಿ ಪ್ರಚಾರ ಕಾರ್ಯ ನಡೆಸುತ್ತಿದ್ದಾರೆ ಒಟ್ಟಿನಲ್ಲಿ ಮೈಸೂರು ಸಂಸ್ಥಾನದ ವ್ಯವಸಾಯ ಶಾಖೆಯ ಪ್ರಯೋಗ ಕಾರ್ಯಗಳು ಇತರ ಪ್ರಾಂತಗಳಿಗೆಲ್ಲಾ ಮಾದರಿ ಎಂದೇ ಹೇಳಬಹುದು

ವ್ಯವಸಾಯ ಶಾಖೆಯವರು ನಮ್ಮ ದೇಶದಲ್ಲಿ ಇಷ್ಟು ಉತ್ತಮ ಕಾರ್ಯ ನಡೆಯಿಸಿದ್ದರೂ, ಅನೇಕ ಕಡೆಗಳಲ್ಲಿ ನಮ್ಮ ರೈತರು ಅವುಗಳ ಸಹಾಯವನ್ನು ಪಡೆಯುತ್ತಿಲ್ಲ ಇಲಾಖೆಯವರು ಸಾಗುವಳಿ ಮಾಡುವಂತೆ ತಾವು ಮಾಡಲು ಸಾಧ್ಯವಿಲ್ಲವೆಂದು ಕೆಲವರೂ, ಅಷ್ಟು ಧನ ವ್ಯಯ ಮಾಡುವುದು ತಮ್ಮಿಂದ ಸಾಧ್ಯವಿಲ್ಲವೆಂದು ಮತ್ತೆ ಕೆಲವರೂ ಅನೇಕ ಕಡೆಗಳಲ್ಲಿ ತಟಸ್ಥರಾಗಿದ್ದಾರೆ ಇನ್ನು ಕೆಲವು ಕಡೆಗಳಲ್ಲಿ ರೈತರು ಬಡತನದ ಕಷ್ಟದಿಂದ ಸರಿಯಾದ ಕ್ರಮದಲ್ಲಿ ಸಾಗುವಳಿ ಮಾಡುವುದಕ್ಕೆ ಅಶಕ್ತರಾಗಿದ್ದಾರೆ ಹೀಗಾಗಿ ವ್ಯವಸಾಯಾಭಿವೃದ್ಧಿ ಕಾರ್ಯವು ಸರಿಯಾಗಿ ನಡೆಯುತ್ತಿಲ್ಲ ಇದಕ್ಕೆ ವಿಸ್ತಾರವಾದ ಪ್ರಚಾರ ಕಾರ್ಯವೂ ರೈತರಿಗೆ ಹೆಚ್ಚು ಉತ್ತೇಜನವೂ ಸಿಕ್ಕುವಂತಾಗಬೇಕು

ನಮ್ಮ ರೈತರು ಬೆಳೆದ ಧಾನ್ಯಗಳಿಗೆ ಸರಿಯಾದ ಬೆಲೆ ಸಿಕ್ಕುವಂತಾಗಬೇಕು ಇದಕ್ಕೆ ಅನುಕೂಲವಾದ ವ್ಯಾಪಾರ ಸೌಲಭ್ಯಗಳನ್ನು ಸರ್ಕಾರದವರು ಕಲ್ಪಿಸಬೇಕು ಪಾಶ್ಚಾತ್ಯ ದೇಶಗಳಲ್ಲಿ ಇಂತಹ ಸೌಕರ್ಯಗಳು ಹೆಚ್ಚಾಗಿವೆ ಜರ್ಮನಿ ದೇಶದಲ್ಲಿ ವ್ಯವಸಾಯ ಶಾಖೆಯ ಮಂತ್ರಿಗಳು ದೇಶದ ಯಾವ ಯಾವ ಭಾಗದಲ್ಲಿ ಏನೇನು ಬೆಳೆಯಾಗುತ್ತಿವೆ, ಆ ಬೆಳೆಯನ್ನು ಯಾವ ಯಾವ ಕಡೆ ಯಾವ ಯಾವ ಧಾರಣೆಗೆ ಮಾರಬೇಕು

ಎಂಬುದನ್ನು ನಿರ್ಧರಿಸುತ್ತಾರೆ ಆ ಧಾರಣೆಯಲ್ಲಿಯೇ ಧಾನ್ಯಗಳು ಮಾರಾಟವಾಗುತ್ತವೆ ಅಂದರೆ ಧಾನ್ಯಗಳ ಧಾರಣೆವಾಸಿಗಳನ್ನು ಪ್ರಭುತ್ವದವರೇ ತಮ್ಮ ಕೈಯಲ್ಲಿಟ್ಟುಕೊಂಡು, ರೈತರನ್ನು ಸೂರೆಮಾಡುವ ದಳ್ಳಾಳಿಗಳ ಅವಾಂತರವನ್ನು ತಪ್ಪಿಸಿದಂತಾಯಿತು ನಮ್ಮ ದೇಶದಲ್ಲಿಯೂ ಕೂಡ ಈ ವಿಧವಾದ ಸೌಕರ್ಯಗಳನ್ನು ಸಹಕಾರ ಸಂಸ್ಥೆಗಳ ಸ್ಥಾಪನೆಯ ಮೂಲಕ ಆಚರಣೆಯಲ್ಲಿ ತರಬಹುದು ಹೀಗೆ ಮಾಡಿದರೆ ರೈತರ ಕಷ್ಟವು ಸ್ವಲ್ಪಮಟ್ಟಿಗೆ ಪರಿಹಾರವಾಗುವುದು

೧೯೩೬ನೆಯ ಇಸವಿಯ ಡಿಸೆಂಬರು ತಿಂಗಳಿನಲ್ಲಿ ಇಂಗ್ಲೆಂಡ್ ದೇಶದ ಪ್ರಸಿದ್ಧ ರೋಥಾಮ್‌ಸ್ಟೆಡ್ ವ್ಯವಸಾಯ ಪರೀಕ್ಷಾಕ್ಷೇತ್ರದ ಅಧ್ಯಕ್ಷರಾದ ಸರ್ ಜಾನ್ ರಸೆಲ್‌ರವರನ್ನು ನಮ್ಮ ದೇಶದ ವ್ಯಾವಸಾಯಿಕ ಸಮಸ್ಯೆಗಳ ವಿಮರ್ಶೆಗಾಗಿ, ಕೇಂದ್ರ ಸರಕಾರದ ವ್ಯವಸಾಯ ಪರಿಶೀಲನಾ ಸಮಿತಿಯವರು ಕರೆಯಿಸಿದ್ದರು ಅವರು ನಮ್ಮ ದೇಶದ ನಾನಾ ಭಾಗಗಳಲ್ಲಿ ಸಂಚರಿಸಿ, ಇಲ್ಲಿಯ ಪರೀಕ್ಷಾಕ್ಷೇತ್ರಗಳನ್ನು ಕಣ್ಣಾರ ಕಂಡು, ಇಲ್ಲಿಯ ವಿಚಾರಗಳನ್ನು ತೂಕಮಾಡಿ, ಕೆಲವು ಉತ್ತಮ ಸಲಹೆಗಳನ್ನಿತ್ತಿದ್ದಾರೆ ಸರ್ ಜಾನ್ ರಸೆಲ್‌ರವರು ವ್ಯವಸಾಯಶಾಸ್ತ್ರ ನಿಪುಣರು ಅವರ ಆರ್ಥಿಕ ದೃಷ್ಟಿಯೂ ವಿಶಾಲವಾದದ್ದು ಶಾಸ್ತ್ರಕ್ಕೂ, ಇಲ್ಲಿಯ ಜೀವನಸ್ಥಿತಿಗೂ ಸರಿಯಾಗಿ ಹೊಂದಿಕೆಯಾದ ಸಲಹೆಗಳನ್ನು ಇತ್ತಿದ್ದಾರೆ

ಭಾರತದಲ್ಲಿರುವ ವ್ಯವಸಾಯ ಪರೀಕ್ಷಾಕ್ಷೇತ್ರಗಳಿಗೂ, ಇಲ್ಲಿಯ ಬಡರೈತರಿಗೂ ಇರುವ ಅಂತರವನ್ನು ಹೋಗಲಾಡಿಸಿ, ಒಂದು ವಿಧವಾದ ನಿಕಟಬಾಂಧವ್ಯವೇರ್ಪಡುವಂತೆ ವ್ಯವಸಾಯಾಧಿಕಾರಿಗಳು ಪ್ರಯತ್ನಪಡಬೇಕು ವ್ಯಾವಸಾಯಿಕ ವಿಷಯವಾದ ಪರಿಶೋಧನಾ ಫಲವನ್ನು ಬರೀ ಪತ್ರಿಕೆಗಳಲ್ಲಿ ಪ್ರಕಟಿಸಿದರೆ ಸಾಲದು ಇವುಗಳನ್ನು ಆಚರಣೆಯಲ್ಲಿ ತರುವುದಕ್ಕೆ ವ್ಯವಸಾಯ ಸಮಿತಿಯವರು ಅಧಿಕಾರ ಹೊಂದಬೇಕು ವ್ಯವಸಾಯದ ನಾನಾ ಉಪಶಾಖೆಗಳು ಇನ್ನೂ ಹೆಚ್ಚಿನ ಅಭಿವೃದ್ಧಿ ಕಾರ್ಯಗಳನ್ನು ನೆರವೇರಿಸಿ, ಆ ಪರಿಶೋಧನಾ ಫಲವನ್ನು ನಮ್ಮ ರೈತರು ಪಡೆದು ಹೆಚ್ಚು ಲಾಭ ಹೊಂದುವಂತಾಗಬೇಕು ಭಾರತ ಕೇಂದ್ರ ವ್ಯವಸಾಯ ಪರಿಶೀಲನಾ ಸಮಿತಿಯ ಕಾರ್ಯಕಲಾಪವು ಇನ್ನೂ ಹೆಚ್ಚು

ವಿಸ್ತಾರವಾಗಬೇಕು ಸಮಿತಿಯ ವೆಚ್ಚಕ್ಕೆ ಸರ್ಕಾರದವರು ಇನ್ನೂ ಹೆಚ್ಚು ಹಣ ಒದಗಿಸಬೇಕು

ದೇಶದ ನಾನಾ ಭಾಗಗಳಲ್ಲಿ ಸರ್ವೆಗಳನ್ನು ನಡೆಯಿಸಿ, ಜಮೀನು ಹಿಡುವಳಿ, ಬೆಳೆಯುವ ದವಸ ಮತ್ತು ವ್ಯವಸಾಯಕ್ಕೆ ಸಂಬಂಧ ಪಟ್ಟ ಎಲ್ಲಾ ವಿಷಯದಲ್ಲಿಯೂ, ಉಚಿತವಾದ ಕಾರ್ಯಕ್ರಮವನ್ನು ಕೈಗೊಂಡು, ಸೂಕ್ತವಾದ ಬದಲಾವಣೆಗಳನ್ನು ಕೇಂದ್ರ ವ್ಯವಸಾಯ ಸಮಿತಿಯವರೇ ಆಚರಣೆಗೆ ತರಬಹುದು ವ್ಯವಸಾಯ ಪರಿಶೋಧನಾ ಸಮಿತಿಯವರ ಆಶ್ರಯದಲ್ಲಿ ಅರಣ್ಯ ಶಾಖಾ ನಿಪುಣರು, ಪಶುಪಾಲನಾ ನಿಪುಣರು, ಭೂಗುಣ ನಿಪುಣರು, ಇತ್ಯಾದಿ ಎಲ್ಲಾ ನಿಪುಣರೂ ಸೇರಿ, ಸ್ಥಳೀಯ ವಿದ್ಯಮಾನಗಳ ವಿಮರ್ಶೆಯಿಂದ ಪೈರುಗಳ ನೀರಿನ ಅವಶ್ಯಕತೆ, ನಾಲಾ ಕೆಲಸ, ನೀರು ಭೂಮಿಗಳ ಸಂಬಂಧ—ಇವೇ ಮುಂತಾದ ವಿಷಯ ಗಳಲ್ಲಿ ಸರಿಯಾದ ಕಾರ್ಯಕ್ರಮವನ್ನು ಅನುಸರಿಸುವುದಕ್ಕೆ ಅಲ್ಲಲ್ಲೆ ಸಮಿತಿಗಳನ್ನು ಏರ್ಪಡಿಸಬೇಕು ಈ ಸಮಿತಿಯವರು ಮೇಲ್ಕಂಡ ವಿಚಾರಗಳನ್ನೆಲ್ಲಾ ವಿಮರ್ಶೆಮಾಡಿ, ಸರಿಯಾದ ಅಭಿವೃದ್ಧಿ ಕಾರ್ಯ ಗಳನ್ನು ಆಚರಣೆಯಲ್ಲಿ ತರಬೇಕು ಇದೇ ರೀತಿಯಲ್ಲಿ ಬೆಳೆಯ ಉತ್ಪತ್ತಿ ಸಮಿತಿಯನ್ನೂ ನೇಮಿಸಬೇಕು ಈ ಸಮಿತಿಯವರು ಪುಷ್ಟಿಕರವಾದ ಆಹಾರಪದಾರ್ಥಗಳ ಪರಿಶೋಧನಾ ನಿಪುಣರ ಸಲಹೆಯನ್ನು ಪಡೆದು, ಹೆಚ್ಚು ಲಾಭ ಬರುವ ದುಡ್ಡು ಗಳಿಸಬಹುದಾದ ಬೆಳೆಯನ್ನು ನಮ್ಮ ರೈತರು ತೆಗೆಯುವಂತೆ ಮಾಡಬೇಕು ಮೇಲ್ಕಂಡ ಸಲಹೆಗಳು ಫಲಕಾರಿಯಾಗಬೇಕಾದರೆ, ನಮ್ಮ ನಾಡಿನ ರೈತರ ಜೀವನದ ಮಟ್ಟವು ಉತ್ತಮವಾಗಬೇಕು ಹೀಗೆ ಜೀವನದ ಮಟ್ಟವು ಏರಬೇಕಾದರೆ ಸುಶಿಕ್ಷಿತ ರಾದ ತರುಣರೂ, ವ್ಯವಸಾಯದಲ್ಲಿ ಹೆಚ್ಚು ಅನುಭವವುಳ್ಳವರೂ ಮುಂದೆ ಬಂದು ವ್ಯವಸಾಯ ವೃತ್ತಿಯನ್ನು ಅವಲಂಬಿಸಿ, ರೈತರಿಗೆ ಒಳ್ಳೆಯ ಮಾರ್ಗದರ್ಶಕರಾಗಬೇಕು ಇದೇ ಸರ್ ಜಾನ್ ರಸೆಲ್‌ರವರ ಅಮೌಲ್ಯ ವಾದ ಸಲಹೆಗಳ ಮುಖ್ಯ ಸಾರಾಂಶ

ಮೇಲ್ಕಂಡ ಸಲಹೆಗಳನ್ನು ಇಂಡಿಯಾ ಸರ್ಕಾರದ ಪರಿಶೀಲನಾ ಸಮಿತಿಯವರು ವಿಮರ್ಶೆಮಾಡಿ, ಸೂಕ್ತವಾದ ಕಾರ್ಯಗಳನ್ನು

ಕೈಗೊಳ್ಳುತ್ತಿದ್ದಾರೆ ಅಂತೂ ರೈತನ ಸಾಂಪತ್ತಿಕ ಸ್ಥಿತಿಯನ್ನು ಉತ್ತಮಗೊಳಿಸಬೇಕಾದರೆ ಪ್ರಭುತ್ವದವರ ಸಹಾಯವೂ ದೊರೆತು, ನಮ್ಮ ರೈತರ ಸಹಕಾರವೂ ಸೇರಿರಬೇಕು ರೈತನಿದ್ದರೆ ರಾಜ್ಯ ಎಂಬುದು ಮಂದಟ್ಟಾಗಬೇಕು ನಿಪುಣರ ಸಲಹೆಯ ಪ್ರಕಾರ, ಸುಲಭವಾದ ಕಾರ್ಯಕ್ರಮವನ್ನು ಆಚರಣೆಯಲ್ಲಿ ತರಬೇಕು

# ೫. ವಿದ್ಯಾಭ್ಯಾಸ

ನಮ್ಮ ರೈತರ ಜೀವನವು ಉತ್ತಮವಾಗಬೇಕಾದರೆ ಅವರನ್ನಾವರಿಸಿರುವ ಅಜ್ಞಾನವು ತೊಲಗಬೇಕು ಅವರ ಅಜ್ಞಾನವೇ ಸಕಲ ವಿಧವಾದ ಕಷ್ಟಗಳಿಗೂ ಕಾರಣವಾಗಿ, ಅವರಲ್ಲಿ ತಿಳಿವಿನ ಬೆಳಕನ್ನು ಹರಡುವುದಕ್ಕೆ ಅಡ್ಡಿಯಾಗಿದೆ ಎಲ್ಲಿಯುವರೆಗೆ ಅವರು ನಿರಕ್ಷರಕುಕ್ಷಿಗಳಾಗಿರುವರೋ ಅಲ್ಲಿಯುವರೆಗೆ ಅವರಲ್ಲಿ ಆರೋಗ್ಯವಾಗಲಿ, ಆತ್ಮಾವಲಂಬನೆ ಶಕ್ತಿಯಾಗಲಿ ಅಥವಾ ಮಿತವ್ಯಯವಾಗಲಿ ರೂಪುಗೊಳ್ಳುವುದಿಲ್ಲ ಆದುದರಿಂದ ಅವರಲ್ಲಿ ಹೆಚ್ಚು ಜ್ಞಾನಪ್ರಚಾರವಾಗಬೇಕು ಅವರಿಗೆ ಅಕ್ಷರವನ್ನು ಕಲಿಸಬೇಕು ಪ್ರತಿಯೊಬ್ಬರಿಗೂ ಅಕ್ಷರಾಭ್ಯಾಸ ಸೌಕರ್ಯವು ಸಿಕ್ಕುವಂತಾಗಬೇಕು ವಿದ್ಯಾಭ್ಯಾಸ ಕ್ರಮವು ಉತ್ತಮವಾಗಿ, ಸರ್ವರೂ ಅದರಿಂದ ಹೆಚ್ಚು ಪ್ರಯೋಜನವನ್ನು ಹೊಂದುವಂತಾಗಬೇಕು

ನಮ್ಮ ಸಮಾಜದಲ್ಲಿ ಆಧ್ಯಾತ್ಮಿಕ ಜ್ಞಾನವನ್ನು ಹರಡುವುದಕ್ಕೆ ಅನುಕೂಲವಾದ ಪುರಾಣ, ಕೀರ್ತನೆ, ಹರಿಕಥೆ, ಯಕ್ಷಗಾನ, ಗುರೂಪದೇಶ— ಇವೇ ಮುಂತಾದವುಗಳು ಇದ್ದುವು ಇವುಗಳ ಮೂಲಕ ನಮ್ಮ ಸಂಸ್ಕೃತಿಯು ಹರಡುತ್ತಿತ್ತು ಅಕ್ಷರಾಭ್ಯಾಸವು ಅಷ್ಟು ಸಮರ್ಪಕವಾಗಿ ನಡೆಯುತ್ತಿರಲಿಲ್ಲವೆಂದೇ ಹೇಳಬಹುದು ಆದರೆ ಕಾಲಕ್ರಮದಲ್ಲಿ ಅಕ್ಷರಾಭ್ಯಾಸವನ್ನು ವಿಸ್ತಾರಮಾಡುವುದಕ್ಕೆ ಅನುಕೂಲವಾದ ಪಾಠಶಾಲೆಗಳು ಸ್ಥಾಪಿಸಲ್ಪಟ್ಟವು ಈ ವಿಧವಾದ ಪಾಠಶಾಲೆಗಳಲ್ಲಿ ಅನೇಕ ವಿದ್ಯಾರ್ಥಿಗಳನ್ನು ಒಟ್ಟುಗೂಡಿಸಿ, ಅವರಿಗೆ ಅಕ್ಷರಾಭ್ಯಾಸವನ್ನು ಉಪಾಧ್ಯಾಯರು ಮಾಡಿಸುತ್ತಿದ್ದರು ಇಂತಹ ಸಂಸ್ಥೆಗಳಿಂದ ವಿದ್ಯಾಭ್ಯಾಸ ಕ್ರಮವು ಉತ್ತಮವಾಯಿತು ಅವರ ನೈತಿಕ ಮತ್ತು ಬುದ್ಧಿವಿಷಯಕವಾದ ಜ್ಞಾನವೂ ಕೂಡ ಉತ್ತಮಗೊಂಡಿತು ಹೀಗೆ ಪಾಠಶಾಲೆಗಳು ಮಕ್ಕಳ ವಿದ್ಯಾಭ್ಯಾಸಕ್ಕೆ ಅನುಕೂಲವಾದ ಸಂಸ್ಥೆಗಳಾಗಿ ಪರಿಣಮಿಸಿದುವು

ಅಮೇರಿಕಾ ದೇಶದ ಪಾಠಶಾಲೆಗಳು ಅಲ್ಲಿಯ ವಿದ್ಯಾರ್ಥಿಗಳನ್ನು ನಾಗರಿಕ ಪಟ್ಟಣಿಗರನ್ನಾಗಿ ಮಾಡುವುದಕ್ಕೆ ಏನೇನು ಬೇಕೋ ಅಷ್ಟನ್ನೂ ಮಾಡುತ್ತಿವೆ "ದೇಶವು ಅಭಿವೃದ್ಧಿಗೆ ಬಂದಹಾಗೆಲ್ಲಾ, ಅಲ್ಲಿಯ

ಪಾಠಶಾಲೆಗಳೂ ಉತ್ತಮಗೊಳ್ಳುತ್ತಿವೆ ವಿದ್ಯಾಭ್ಯಾಸಕ್ಕೆ ದೇಶದ ಒಟ್ಟು ಆದಾಯದ ಶೇಕಡ ೨೪ಕ್ಕಿಂತ ಹೆಚ್ಚಾಗಿ, ಅಮೇರಿಕಾ ದೇಶವು ಖರ್ಚು ಮಾಡುತ್ತಿದೆ. ಔದ್ಯೋಗಿಕ ಮತ್ತು ವ್ಯಾವಸಾಯಿಕ ವಿದ್ಯಾಭ್ಯಾಸಕ್ಕೆ ಅಮೇರಿಕಾ ದೇಶವು ಹೆಚ್ಚಿನ ಉತ್ತೇಜನಕೊಡುತ್ತಿದೆ ಅಲ್ಲಿಯ ಉದಾಹರಣೆಗಳು ಒಳ್ಳೆಯ ಮಾರ್ಗದರ್ಶಕವಾಗಿವೆ

ಅಮೇರಿಕಾ ದೇಶದಲ್ಲಿ ಇಂಡಿಯಾ ದೇಶದಂತೆಯೇ ವ್ಯವಸಾಯವೇ ಮುಖ್ಯ ವೃತ್ತಿಯಾಗಿದೆ ಕೈಗಾರಿಕೆಯನ್ನು ಅವಲಂಬಿಸಿರುವ ಜನಸಂಖ್ಯೆಗಿಂತ ವ್ಯವಸಾಯಗಾರರ ಸಂಖ್ಯೆಯೇ ಅಲ್ಲಿ ಹೆಚ್ಚು ಗ್ರಾಮಾಭಿವೃದ್ಧಿ ಕಾರ್ಯಕ್ಕಾಗಿ ಅನೇಕ ಸಂಸ್ಥೆಗಳು ಸ್ಥಾಪಿಸಲ್ಪಟ್ಟಿವೆ ಅಲ್ಲಿಯ ಸನ್ನಿವೇಶಕ್ಕೆ ಅನುಕೂಲವಾಗಿ ಪಾಠಶಾಲೆಗಳಲ್ಲಿಯೂ ಕೂಡ ಪಾಠದ ಪಟ್ಟಿಯನ್ನು ಸರಿಪಡಿಸಿ, ಅದರಲ್ಲಿ ಪ್ರಕೃತಿ, ಕೈಕೆಲಸ, ವ್ಯವಸಾಯ —ಇವುಗಳನ್ನು ಮುಖ್ಯ ಪಾಠಗಳನ್ನಾಗಿ ಮಾಡಿದ್ದಾರೆ ಗ್ರಾಮಜೀವನದಲ್ಲಿ ಆಸಕ್ತಿಯನ್ನು ಹುಟ್ಟಿಸುವುದಕ್ಕೆ ಅನೇಕ ಸಂಘಗಳನ್ನು ಸ್ಥಾಪಿಸಿ, ಅವುಗಳ ಮೂಲಕವೂ ರೈತರ ಸಂಘಗಳ ಮೂಲಕವೂ ಪ್ರಚಾರಕಾರ್ಯ ನಡೆಸಿದ್ದಾರೆ ಇದಲ್ಲದೆ ಗ್ರಾಮನಿವಾಸಿಗಳಿಗೆ ಪುಸ್ತಕಭಂಡಾರ, ವಾಚನಾಲಯ ಮತ್ತು ಸಂಚಾರಿ ಪುಸ್ತಕ ಭಂಡಾರ— ಇವೇ ಮುಂತಾದ ಸೌಕರ್ಯಗಳನ್ನು ಒದಗಿಸಿದ್ದಾರೆ ಇವುಗಳೆಲ್ಲಕ್ಕಿಂತ ವಿದ್ಯಾಭ್ಯಾಸದ ಮುಖ್ಯ ಅಂಗವಾದ ಉಪಾಧ್ಯಾಯರ ಶಿಕ್ಷಣದಲ್ಲಿ ಅಮೇರಿಕಾ ದೇಶದ ಸರ್ಕಾರದವರು ಹೆಚ್ಚು ಆಸಕ್ತಿ ವಹಿಸಿ, ಗ್ರಾಮ ಪುನರುಜ್ಜೀವನ ಮತ್ತು ವಿದ್ಯಾಭ್ಯಾಸ ಶಾಖೆಗಳಲ್ಲಿ ಕೆಲಸಮಾಡುವುದಕ್ಕೆ ಉತ್ತಮರಾದ ಮತ್ತು ಯೋಗ್ಯರಾದ ಉಪಾಧ್ಯಾಯರನ್ನು ತರಪೇತು ಮಾಡಿದ್ದಾರೆ ಬುದ್ಧಿಶಕ್ತಿಯುಳ್ಳ ಕರುಣಾಳುಗಳಾದ ಪ್ರತ್ಯೇಕ ಶಿಕ್ಷಣವನ್ನು ಪಡೆದ, ಉಪಾಧ್ಯಾಯರುಗಳಿಂದಲೇ ವಿದ್ಯಾಭಿವೃದ್ಧಿಯಾಗಬೇಕೆಂಬ ತತ್ವವನ್ನು ಪ್ರಭುತ್ವದವರು ನಿರ್ಧರಿಸಿ, ಅನೇಕ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದ್ದಾರೆ

ಡೆನ್ಮಾರ್ಕ್ ದೇಶದಲ್ಲಿ ಆಧುನಿಕ ನಾಗರಿಕತೆಗೆ ತಕ್ಕಂತೆ ಗ್ರಾಮಾಂತರಗಳ ಪರಿಸ್ಥಿತಿಯನ್ನು ಸರಿಪಡಿಸಿ, ಅನುಕೂಲವಾದ ವಿದ್ಯಾಭ್ಯಾಸಕ್ರಮವನ್ನು ಆಚರಣೆಗೆ ತಂದಿದ್ದಾರೆ ೧೭೯೯ನೆಯ ಇಸವಿಯ ಸುಮಾರಿನಲ್ಲಿ

ನೇಮಿಸಲ್ಪಟ್ಟಿದ್ದ ಸಮಿತಿಯ ಸಿಫಾರಸಿನ ಪ್ರಕಾರ, ಬಲಾತ್ಕಾರ ವಿದ್ಯಾಭ್ಯಾಸಕ್ರಮವನ್ನು ಪ್ರಾರಂಭಿಸಿದ್ದಾರೆ ಉಪಾಧ್ಯಾಯರು ರೈತರಿಗಿಂತ ಬುದ್ಧಿವಂತನಾದ ರೈತನೇ ಆಗಿರಬೇಕೆಂಬ ತತ್ತ್ವವನ್ನು ಅನುಸರಿಸಿ, ಅವರಿಗೆ ಮನೆ, ಭೂಮಿ ಮತ್ತು ಆಕಳುಗಳ ಸೌಕರ್ಯವನ್ನು ಒದಗಿಸಿ, ಸಂಬಳವನ್ನೂ ಕೂಡ ಕೊಡುತ್ತಿದ್ದಾರೆ ಪ್ರತಿಯೊಂದು ಗ್ರಾಮದಲ್ಲಿಯೂ ಶಾಲಾ ಸಮಿತಿಯನ್ನೇರ್ಪಡಿಸಿ, ಆ ಗ್ರಾಮದ ವಿದ್ಯಾಭ್ಯಾಸದ ಏಳಿಗೆಯ ಸಮಸ್ಯೆಯನ್ನೆಲ್ಲಾ ಆ ಸಮಿತಿಗೆ ಒಪ್ಪಿಸಿದ್ದಾರೆ

ಡೆನ್ಮಾರ್ಕ್ ದೇಶದ ಉಪಾಧ್ಯಾಯರು ಸಾಮಾನ್ಯವಾಗಿ ರೈತರ ಗುಂಪಿನಿಂದ ಚುನಾಯಿತರಾಗಿ ಉತ್ತಮ ಶಿಕ್ಷಣವನ್ನು ಪಡೆಯುತ್ತಿರುವುದರಿಂದ ಅವರು ಗ್ರಾಮಗಳಲ್ಲಿ ರೈತರ ಮುಖಂಡರಾಗಿ ನಿಂತು, ಹಳ್ಳಿಯ ಸರ್ವತೋಮುಖವಾದ ಏಳಿಗೆಗೆ ಸಹಾಯಮಾಡುತ್ತಿದ್ದಾರೆ ಪ್ರಭುತ್ವದವರು ಬಾಲಕರು ಸರಿಯಾಗಿ ಪಾಠಶಾಲೆಗಳಿಗೆ ಬರುವಂತೆಯೂ ಸ್ಥಳೀಯ ಜನಗಳು ತಮ್ಮ ಮಕ್ಕಳ ವಿದ್ಯಾಭ್ಯಾಸದಲ್ಲಿ ಲಕ್ಷ್ಯ ಕೊಡುವಂತೆಯೂ ನೂತನ ಪರಿಶೋಧನೆಗಳು ಪ್ರಚಾರಕ್ಕೆ ಬರುವಂತೆಯೂ ಕಾಯಿದೆಗಳ ಮೂಲಕ ಸೌಕರ್ಯವನ್ನು ಕಲ್ಪಿಸುತ್ತಿದ್ದಾರೆ ತನ್ನಲ್ಲಿ ಅಡಗಿರುವ ಶಕ್ತಿಸಾಮರ್ಥ್ಯಗಳನ್ನೆಲ್ಲಾ ಸಕಾಲದಲ್ಲಿ ಉಪಯೋಗಿಸಿ, ಅಭಿವೃದ್ಧಿಸ್ಥಿತಿಗೆ ಬಂದಿರುವ ದೇಶಗಳಲ್ಲೆಲ್ಲಾ ಡೆನ್ಮಾರ್ಕ್ ಮುಖ್ಯವಾಗಿದೆ ಇದಕ್ಕೆ ಅಲ್ಲಿಯ ವಿದ್ಯಾಭ್ಯಾಸ ಸೌಕರ್ಯಗಳೇ ಕಾರಣಗಳಾಗಿವೆ ಗ್ರಾಮದ ಮುಖ್ಯ ಅವಶ್ಯಕತೆ ಎಂದರೆ ವಿದ್ಯೆ ಎಂಬದಾಗಿ ಇಲ್ಲಿಯ ಸರ್ಕಾರದವರೂ ಖಾಸಗಿ ಜನಗಳೂ ತಿಳಿದು, ಜ್ಞಾನಪ್ರಚಾರಕ್ಕಾಗಿ ಅನೇಕ ಆದರ್ಶ ಸಾಧನಗಳನ್ನೂ ಅನುಕೂಲಗಳನ್ನೂ ಕಲ್ಪಿಸಿರುತ್ತಾರೆ

ಭರತಖಂಡವು ಹಿಂದೆ ಉಳಿಯಲು ಅನೇಕ ಕಾರಣಗಳಿವೆ ಇವುಗಳಲ್ಲಿ ಕೆಲವು ಸಾಮಾಜಿಕ, ಕೆಲವು ಧಾರ್ಮಿಕ ಮತ್ತೆ ಕೆಲವು ಆರ್ಥಿಕ ನಮ್ಮ ಜನರು ಇನ್ನೂ ಪುರಾತನ, ಸಾಮಾಜಿಕ ಮತ್ತು ಧಾರ್ಮಿಕ ಅಭಿಪ್ರಾಯಗಳಿಗೆ ಹೆಚ್ಚು ಪ್ರಾಶಸ್ತ್ಯ ಕೊಡುತ್ತಿದ್ದಾರೆ ಉಪದೇಶ ಪರಂಪರೆಯೂ, ಮೂಢಭಕ್ತಿಯೂ ನಮ್ಮ ಸಮಾಜದಲ್ಲಿ ಭದ್ರವಾಗಿ ಬೇರೂರಿವೆ ಇವುಗಳ ಜೊತೆಗೆ ಸಣ್ಣ ಸಣ್ಣ ಹಳ್ಳಿವಾಸ, ಮತಭ್ರಾಂತಿ,

ಅಲ್ಪವಿದ್ಯೆ, ಇಲ್ಲಿಯ ವಿದ್ಯಾಭಿವೃದ್ಧಿಗೆ ಅಡಚಣೆಗಳಾಗಿವೆ ದೇಶದಲ್ಲಿ ಬಡತನವೇ ಹೆಚ್ಚಾಗಿರುವದರಿಂದ ವಿದ್ಯಾಪ್ರಚಾರಕ್ಕೆ ಹೆಚ್ಚು ಹಣ ಖರ್ಚುಮಾಡಲು ಅವಕಾಶವಿಲ್ಲವಾಗಿದೆ

ಈಗ ಆಚರಣೆಯಲ್ಲಿರುವ ವಿದ್ಯಾಭ್ಯಾಸಕ್ರಮವು ನಮ್ಮ ಪಾಠಶಾಲೆಗಳನ್ನಾಗಲಿ, ವಿದ್ಯಾರ್ಥಿಗಳನ್ನಾಗಲಿ, ಅವರ ಪೋಷಕರನ್ನಾಗಲಿ ಆಕರ್ಷಿಸುತ್ತಿಲ್ಲ ಪಾಠಶಾಲೆಗಳ ಪಾಠಪ್ರವಚನಗಳು ಹಳ್ಳಿಯ ಜೀವನವನ್ನು ಮತ್ತು ಅದರ ಅವಶ್ಯಕತೆಯನ್ನು ಅಭಿವೃದ್ಧಿಪಡಿಸುವುದಕ್ಕೆ ಸಹಾಯಕವಾಗಿಲ್ಲ ಆರ್ಥಿಕ ಪ್ರಶ್ನೆಯನ್ನಂತೂ ಅದು ಲಕ್ಷ್ಯಕ್ಕೆ ತೆಗೆದುಕೊಂಡಿಲ್ಲ ಒಟ್ಟಿನಲ್ಲಿ ಈಗಿನ ವಿದ್ಯಾಭ್ಯಾಸಕ್ರಮದಲ್ಲಿ ಕಲ್ಪನಾಶಕ್ತಿಯಿಲ್ಲ, ಉತ್ಸಾಹವಿಲ್ಲ, ಈ ವಿದ್ಯದಿಂದ ಎಲ್ಲೆಲ್ಲಿಯೂ ಅಸಮಾಧಾನ ಉಂಟಾಗುತ್ತಿದೆ *

ನಮ್ಮ ದೇಶದಲ್ಲಿ ಅಕ್ಷರಸ್ಥರ ಸಂಖ್ಯೆಯನ್ನು ಇತರ ದೇಶಗಳ ಅಕ್ಷರಸ್ಥರ ಸಂಖ್ಯೆಯೊಡನೆ ಹೋಲಿಸಿ ನೋಡಿದರೆ ಆಗ ನಮ್ಮ ಶೋಚನೀಯಾವಸ್ಥೆಯು ಚೆನ್ನಾಗಿ ತಿಳಿಯುವುದು ಇವುಗಳಲ್ಲಿ ಕಾಣಬರುವ ವ್ಯತ್ಯಾಸವು ಅಜಗಜಾಂತರವೆಂದು ಧಾರಾಳವಾಗಿ ಹೇಳಬಹುದು.

| ಸಂ | ದೇಶ | ಒಟ್ಟು ಜನಸಂಖ್ಯೆಯಲ್ಲಿರುವ ಅಕ್ಷರಸ್ಥರ ಶೇಕಡಾ ದರ |
|---|---|---|
| 1 | ಇಂಗ್ಲೆಂಡ್ | 92 5 |
| 2 | ಜರ್ಮನಿ | 99 7 |
| 3 | ಅಮೇರಿಕಾ | 95 7 |
| 4 | ಜಪಾನ್ | 96 0 |
| 5 | ಕಾನಡಾ | 94 9 |
| 6 | ಆಸ್ಟ್ರೇಲಿಯಾ | 98 3 |
| 7 | ಇಂಡಿಯಾ | 8 0 |

ಪ್ರಾಥಮಿಕ ವಿದ್ಯಾಭ್ಯಾಸ ಒಂದನ್ನೇ ತೆಗೆದುಕೊಂಡರೆ ಇಂಡಿಯಾ ದೇಶದಲ್ಲಿ ೧,೩೨೯ ಜನಗಳಿಗೆ ಒಂದು ಪಾಠಶಾಲೆಯಂತೆ ಇದೆ ವಿದ್ಯಾಭ್ಯಾಸಕ್ಕೆ ಖರ್ಚುಮಾಡುವ ಮೊಬಲಗೂ ಬಹಳ ಕಡಿಮೆ ನಮ್ಮ ದೇಶದಲ್ಲಿ

* ' Report of the Conference of Rural Education", 1922, Pp 2-3

ಪ್ರತಿಯೊಬ್ಬನ ವಾರ್ಷಿಕಾದಾಯದ ಪೂರ್ತಿ ಮೊಬಲಗಿನಷ್ಟನ್ನು ಅಮೇರಿಕಾ ದೇಶದಲ್ಲಿ ಪ್ರತಿಯೊಬ್ಬನ ವಿದ್ಯಾಭ್ಯಾಸಕ್ಕಾಗಿಯೇ ವೆಚ್ಚ ಮಾಡುತ್ತಿದ್ದಾರೆ ನಮ್ಮ ದೇಶದ ವಿದ್ಯಾಭ್ಯಾಸದ ಖರ್ಚಿಗೂ, ಇತರ ದೇಶಗಳ ಖರ್ಚಿಗೂ ಇರುವ ವ್ಯತ್ಯಾಸವನ್ನು ಈ ಕೆಳಗಿನ ತಃಖ್ತೆಯಿಂದ ನಾವು ತಿಳಿಯಬಹುದು —

| ನಂ | ದೇಶ | ಪ್ರತಿಯೊಬ್ಬನಿಗೆ ವಿದ್ಯಾಭ್ಯಾಸಕ್ಕೆ ಖರ್ಚುಮಾಡುವ ಮೊಬಲಗು |
|---|---|---|
| 1 | ಇಂಗ್ಲೆಂಡ್ | 172 ರೂಪಾಯಿ |
| 2 | ಅಮೇರಿಕಾ | 275 ,, |
| 3 | ಕಾನಡಾ | 199 ,, |
| 4 | ರಷ್ಯಾ | 158 ,, |
| 5 | ಜಪಾನ್ | 58 , |
| 6 | ಇಂಡಿಯಾ | 22 3 ,, (ಪ್ರತಿಯೊಬ್ಬ ಪಾಠಶಾಲೆಗೆ ಅರ್ಹನಾದ ವಿದ್ಯಾರ್ಥಿ ಜನಸಂಖ್ಯೆಯ ವ್ಯಕ್ತಿ) |

ಭರತಖಂಡದಲ್ಲಿರುವ ವಿದ್ಯಾಭ್ಯಾಸಕ್ರಮದ ಪರಿಸ್ಥಿತಿಯ ವಿಷಯವಾಗಿ ಒಬ್ಬ ಮಹನೀಯರು ಈ ರೀತಿ ಬರೆದಿದ್ದಾರೆ —

"ಅಯ್ಯಾ ಭಾರತೀಯರೇ! ನೀವು ಒಳ್ಳೆ ಶೋಭಾಯಮಾನಿಗಳು ನಿಮಗೆ ಶಕ್ತಿ ಇದೆ ಅನುಕೂಲವಾದ ಆಸರೆಯಿಂದ ಕೂಡಿದ ಉತ್ತಮ ದೇಶವಿದೆ ಆದರೆ ನಿಮ್ಮಲ್ಲಿರುವ ಆನುಕೂಲ್ಯಗಳನ್ನೂ ಶಕ್ತಿಯನ್ನೂ ಸರಿಯಾದ ರೀತಿಯಲ್ಲಿ ಉಪಯೋಗಿಸಿಕೊಳ್ಳುತ್ತಾ ಇಲ್ಲ ಸಂಕುಚಿತ ಭಾಷಾಜ್ಞಾನವೇ ವಿದ್ಯಾಭ್ಯಾಸವೆನಿಸುವುದಿಲ್ಲ ವಿದ್ಯಾಭ್ಯಾಸಕ್ಕೂ ಜೀವನಕ್ಕೂ ವ್ಯವಹಾರ ಸಂಬಂಧವಿರಬೇಕು ಎಲ್ಲಿಯವರೆಗೆ ನಿಮ್ಮ ಪಾಠಶಾಲೆಗಳು ಜವಾಬ್ದಾರಿಯುತವಾಗಿ ಕೆಲಸಮಾಡುವುದಿಲ್ಲವೋ, ಅಲ್ಲಿಯವರೆಗೆ ನಿಮ್ಮ ವಿದ್ಯಾಭ್ಯಾಸ ಉತ್ತಮವಾಗುವುದಿಲ್ಲ ಯಾವಾಗ ನಿಮ್ಮ ಮಕ್ಕಳಿಗೆ ವಿದ್ಯಾಭ್ಯಾಸದ ಪವಿತ್ರ ಉದ್ದೇಶವನ್ನೂ, ಅದರ ಪವಿತ್ರ ಸ್ಥಾನವನ್ನೂ

* "Planned Economy for India", by Sir M V, Pp 11-18

ನೀವು ತಿಳಿಸುವಿರೋ, ಅಂದು ನೀವು ನಿಮ್ಮ ದೇಶದ ಅಭಿವೃದ್ಧಿಗೆ ಮುಖ್ಯವಾದ ಕೆಲಸ ಮಾಡಿದಂತಾಗುತ್ತೆ "*

ಮದ್ರಾಸಾಧಿಪತ್ಯದ ಹದಿನೇಳುಸಾವಿರ ಗ್ರಾಮಗಳಲ್ಲಿ ಅಥವಾ ಶೇಕಡ ೭೫ ಹಳ್ಳಿಗಳಲ್ಲಿ ಪಾಠಶಾಲೆಯೇ ಇಲ್ಲ ಇಲ್ಲಿ ಶೇಕಡ ೪೭ರಿಂದ ೬೭ರವರೆಗೆ ಅಕ್ಷರಸ್ಥರು ಇದ್ದಾರೆ ಇದೇ ರೀತಿಯಾದ ಶೋಚನೀಯಾವಸ್ಥೆಯು ನಮ್ಮ ದೇಶದ ಅನೇಕ ಭಾಗಗಳಲ್ಲಿ ಇದೆ † ಹೀಗೆ ನಮ್ಮ ದೇಶದಲ್ಲಿರುವ ಅನಕ್ಷರಸ್ಥರ ಸಂಖ್ಯೆಯೂ, ಇಲ್ಲಿಯ ವಿದ್ಯಾಭ್ಯಾಸಕ್ಕೆ ಇರುವ ಅಡಚಣೆಯೂ ಮತ್ತೆಲ್ಲಿಯೂ ಇಲ್ಲವೆನ್ನಬಹುದು "ನಮ್ಮ ದೇಶದ ವ್ಯವಸಾಯಕ್ರಮವು ಬಹಳ ಹೀನಸ್ಥಿತಿಯಲ್ಲಿರುವುದಕ್ಕೆ ನಮ್ಮಲ್ಲಿ ಬಹಳ ಮಂದಿ ಅನಕ್ಷರಸ್ಥರಿರುವುದೇ ಮುಖ್ಯ ಕಾರಣ"ಎಂಬದಾಗಿ ಸರ್ ಎಂ ವಿಶ್ವೇಶ್ವರಯ್ಯನವರು ಹೇಳಿದ್ದಾರೆ ‡

ಭರತಖಂಡದಲ್ಲಿರುವ ವಿದ್ಯಾಭ್ಯಾಸಕ್ರಮವನ್ನು ವಿಮರ್ಶೆಮಾಡಿ ಸರಿಯಾದ ಸಲಹೆಗಳನ್ನು ತಿಳಿಸುವುದಕ್ಕೆ ಆಗಾಗ್ಗೆ ಅನೇಕ ಸಮಿತಿಗಳನ್ನು ಸರ್ಕಾರದವರು ಏರ್ಪಡಿಸಿದ್ದಾರೆ ಅವರ ಸಲಹೆಯ ಪ್ರಕಾರ ಕೆಲವು ಪ್ರಾಂತಗಳವರು ವಿದ್ಯಾಪ್ರಚಾರಕ್ಕೆ ಶ್ರಮಪಡುತ್ತಲೂ ಇದ್ದಾರೆ ಆದರೂ ಇಡೀ ಭರತಖಂಡಕ್ಕೆ ಅನ್ವಯಿಸತಕ್ಕ ಒಂದೇ ರೀತಿಯ ಕಾರ್ಯಕ್ರಮವು ಏರ್ಪಟ್ಟಿಲ್ಲ ಪಾಠಶಾಲೆಗಳ ಸಂಖ್ಯೆಯು ಹೆಚ್ಚುತ್ತಿರಬಹುದು ವಿದ್ಯಾರ್ಥಿಗಳ ಸಂಖ್ಯೆಯು ಹೆಚ್ಚುತ್ತಿರಬಹುದು, ಖರ್ಚಾಗುತ್ತಿರುವ ಹಣದ ಮೊಬಲಗು ಹೆಚ್ಚುತ್ತಾ ಇರಬಹುದು ಆದರೆ ರೈತನನ್ನು ಅಕ್ಷರಸ್ಥರನ್ನಾಗಿಮಾಡುವ ಪ್ರಾಥಮಿಕ ವಿದ್ಯಾಭ್ಯಾಸವು ಅಭಿವೃದ್ಧಿಹೊಂದುತ್ತಾ ಇಲ್ಲ ಹಳ್ಳಿಯ ಜನರ ಜ್ಞಾನಾರ್ಜನೆಯಾಗುತ್ತಾ ಇಲ್ಲ

ನಮ್ಮ ದೇಶದ ಪ್ರಾಥಮಿಕ ವಿದ್ಯಾಭ್ಯಾಸವು ಅಭಿವೃದ್ಧಿಯಾಗದೆ ಇರುವುದಕ್ಕೆ ಅನೇಕ ಕಾರಣಗಳಿವೆ ಬಡತನದಲ್ಲಿಯೇ ಹುಟ್ಟಿ ಬೆಳೆದು

---

* "How we Learn", by W A Kilpatrick, Pp 25–26

† "Address' by Mr M A Sabhesan, M A, D P I, at The Tenth District Educational Conference, 1-12-34

‡ "Planned Economy for India", by Sir M V, p 34

ನರಳುತ್ತಿರುವ ತಂದೆತಾಯಿಗಳು ತಮ್ಮ ಮಕ್ಕಳ ವಿದ್ಯದಲ್ಲಿ ಉದಾಸೀನ ರಾಗಿರುತ್ತಾರೆ ಕೆಲವುವೇಳೆ ಬಾಲಕರನ್ನು ಪಾಠಶಾಲೆಗೆ ಕಳುಹಿಸದೆ ವ್ಯವಸಾಯದ ಅಲ್ಪ ಸ್ವಲ್ಪ ಸಹಾಯಕ್ಕೆ ಅವರನ್ನು ಕರೆದುಕೊಳ್ಳುತ್ತಾರೆ ಅನೇಕ ತರಗತಿಗಳಿರುವ ಒಂದು ಪಾಠಶಾಲೆಯಲ್ಲಿ ಒಬ್ಬರೇ ಉಪಾಧ್ಯಾಯ ರಿರುತ್ತಾರೆ ಪಾಠಪ್ರವಚನಗಳಿಗೆ ಸರಿಯಾದ ಪಠ್ಯಪುಸ್ತಕಗಳಿರುವುದಿಲ್ಲ ಅಲ್ಪ ಸಂಬಳದ ಉಪಾಧ್ಯಾಯರಿಗೆ ಸರಿಯಾದ ಶಿಕ್ಷಣವಿಲ್ಲ ಇವೇ ಮುಖ್ಯ ಕಾರಣಗಳೆಂದು ಹೇಳಬಹುದು *

ಈಗ ಪ್ರಚಾರದಲ್ಲಿರುವ ನಮ್ಮ ದೇಶದ ವಿದ್ಯಾಭ್ಯಾಸಕ್ರಮವು ದೇಶದ ಏಳಿಗೆಗೆ ಹಾನಿಕರವಾಗಿದೆಯೆಂದೇ ಹೇಳಬಹುದು ವಿದ್ಯಾ ಪ್ರಚಾರದ ಹೆಸರಿನಲ್ಲಿ ದ್ರವ್ಯ ನಷ್ಟವಾಗುತ್ತಿದೆ ಹಳ್ಳಿಯ ಯುವಕ, ಯುವತಿಯರು ಹಳ್ಳಿಗಳನ್ನು ಬಿಟ್ಟು ವಿದ್ಯಾಭ್ಯಾಸದ ಹೆಸರಿನಲ್ಲಿ ಪಟ್ಟಣ ಗಳನ್ನು ಸೇರುತ್ತಿದ್ದಾರೆ ದೇಶದ ವಿದ್ಯಾಭ್ಯಾಸಕ್ರಮವನ್ನು ವ್ಯವಸ್ಥೆಗೊಳಿಸ ಬೇಕಾದರೆ, ಮೊದಲು ಇಲ್ಲಿಯ ಸಮಾಜದ ಆರ್ಥಿಕ ಜೀವನ, ಜನರು ಹೇಗೆ ಬುದ್ಧಿವಂತರಾಗಿ ಜೀವನದ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳ ಬಹುದು — ಇವೇ ಮುಂತಾದ ವಿಷಯಗಳನ್ನು ಮುಖ್ಯವಾಗಿ ಗಮನಿಸ ಬೇಕು ಹೀಗೆ ಪುನರ್ವ್ಯವಸ್ಥೆಗೊಳಿಸಿದ ಕ್ರಮದಿಂದ ಹಳ್ಳಿಯ ಜೀವನವು ಆರೋಗ್ಯವಾಗಬೇಕು ಅವರ ಜೀವನದ ಧ್ಯೇಯವು ವಿಶಾಲವಾಗಿ ಸಮಾಜಕ್ಕೆ ಹಿತವನ್ನುಂಟುಮಾಡಬೇಕು ಈ ರೀತಿಯಾದ ವಿದ್ಯಾಭ್ಯಾಸ ಕ್ರಮವು ಆಚರಣೆಯಲ್ಲಿ ಬರುವವರೆಗೂ ನಮ್ಮ ರೈತರು ನಿರಕ್ಷರಕುಕ್ಷಿ ಗಳಾಗಿ ಕಷ್ಟಪರಂಪರೆಯಲ್ಲಿ ನರಳುತ್ತಿರಬೇಕಾಗುವುದು

ರೈತರು ಬಡತನದಿಂದ ನಿರುತ್ಸಾಹಿಗಳಾಗಿರುವುದು ಒಂದು ಕಡೆ. ಅವರ ಮಕ್ಕಳಿಗೆ ಸರಿಯಾದ ಆಹಾರ, ಶುಚಿಯಾದ ಬಟ್ಟೆಗಳಿಲ್ಲದೆ ವಿದ್ಯಾಭ್ಯಾಸಕ್ಕೆ ಗಮನ ಕೊಡದಿರುವುದು ಇನ್ನೊಂದು ಕಡೆ ಅನೇಕ ಮಕ್ಕಳು ಪಾಠಶಾಲೆಗಳನ್ನು ಪ್ರವೇಶಿಸುವುದೇ ಇಲ್ಲ ಆದುದರಿಂದ ಕೆಲವು ಕಾಲವಾದರೂ ಪಾಠಶಾಲೆಗೆ ಬರುವಂತೆ ಬಲಾತ್ಕಾರ ವಿದ್ಯಾಭ್ಯಾಸ ಕಾನೂನನ್ನು ಆಚರಣೆಯಲ್ಲಿ ತರಬೇಕು ರೈತರಿಗೆ ಅನುಕೂಲವಾದ

* "Progress of Education in Mysore", Pp 31-32

ಕಾಲವನ್ನು ಗೊತ್ತುಮಾಡುವುದಲ್ಲದೆ ಪಾಠಗಳಿಗೆ ಸರಿಯಾದ ಪುಸ್ತಕಗಳನ್ನು ಒದಗಿಸಬೇಕು ಪ್ರಾಥಮಿಕ ವಿದ್ಯಾಭ್ಯಾಸದ ಮುಖ್ಯಧ್ಯೇಯಗಳಾದ ಪ್ರಜಾ ಹಕ್ಕುಬಾಧ್ಯತೆ, ಕರ್ತವ್ಯ ಬೋಧನೆ ಮತ್ತು ಸ್ವಂತ ವ್ಯಾಸಂಗಕ್ಕೆ ಅನುಕೂಲವಾದಷ್ಟು ಅಕ್ಷರಜ್ಞಾನ— ಇವೇ ಮುಂತಾದುವುಗಳನ್ನು ಮುಖ್ಯವಾಗಿ ಗಮನಿಸಬೇಕು

"ಹಳ್ಳಿಯ ಪಾಠಶಾಲೆಯೇ ಗ್ರಾಮಜೀವನ ಸಮಸ್ಯೆಯ ಕೇಂದ್ರವಾಗಿರಬೇಕು ಹಳ್ಳಿಯ ಜೀವನ, ಭಾವನೆ, ನಡತೆ ಮತ್ತು ವಿಹಾರ — ಇವುಗಳಿಗೆಲ್ಲಾ ಅಲ್ಲಿಯ ಪಾಠಶಾಲೆಯೂ ಮತ್ತು ಉಪಾಧ್ಯಾಯನೂ ಕೇಂದ್ರವಾಗಿರಬೇಕು ಉಪಾಧ್ಯಾಯನ ನೇತೃತ್ವದಲ್ಲಿ ಗ್ರಾಮಜೀವನದ ಏಳಿಗೆಗೆ ಕಾರಣವಾದ ಎಲ್ಲಾ ವಿಷಯಗಳಲ್ಲಿಯೂ ಅಲ್ಲಿಯ ಪಾಠಶಾಲೆಯು ಭಾಗವಹಿಸಬೇಕು"* ಎಂಬದಾಗಿ ಒಬ್ಬ ವಿದ್ಯಾಭಿಮಾನಿಗಳು ಬರೆಯುತ್ತಾರೆ ಮೆಕ್ಸಿಕೋ ದೇಶದ ಸರ್ಕಾರದವರು "ಡೈರೆಕ್ಟರ್ ಆಫ್ ರೂರಲ್ ಎಡ್ಯುಕೇಷನ್" ಎಂಬ ಅಧಿಕಾರಿಗಳ ಮೇಲ್ವಿಚಾರಣೆಯಲ್ಲಿ ಗ್ರಾಮ ಪುನರುದ್ಧಾರ ಕಾರ್ಯಗಳನ್ನೆಲ್ಲಾ ಗ್ರಾಮದ ಪಾಠಶಾಲೆಯ ಮೂಲಕ ನಡೆಸುತ್ತಿದ್ದಾರೆ ಅಲ್ಲಿಯ ಪಾಠಶಾಲೆಗಳನ್ನು 'ಹೌಸ್ ಆಫ್ ದಿ ಪೀಪಲ್' ಎಂಬದಾಗಿ ಕರೆಯುತ್ತಾರೆ "ಇಂದಿನ ಜೀವನವನ್ನು ಉತ್ತಮಗೊಳಿಸಿ, ಸುಖಮಯವಾಗಿ ಮಾಡಿ, ಮುಂದಿನ ಜನಾಂಗಕ್ಕೆ ಬೇಕಾದ ಸೌಖ್ಯವನ್ನು ಕಲ್ಪಿಸುವುದಕ್ಕೆ ಏನೇನು ಬೇಕೋ ಅವೆಲ್ಲವನ್ನೂ ನಮ್ಮ ಪಾಠಶಾಲೆಗಳು ಮಾಡುತ್ತಿವೆ" † ಎಂಬದಾಗಿ ಒಬ್ಬ ಅಧಿಕಾರಿಗಳು ಬರೆಯುತ್ತಾರೆ

ಅಂಧಕಾರಮಯವಾದ ನಿಷ್ಪ್ರಯೋಜನ ಪದ್ಧತಿಗಳನ್ನು ಬಿಟ್ಟು ಜನಾಂಗದ ಬೆಳವಣಿಗೆಗೂ ಸುಖಕ್ಕೂ ಅನುಕೂಲವಾದ ಕ್ರಮವನ್ನು ನಮ್ಮ ಹಳ್ಳಿಗಳಲ್ಲಿ ಆಚರಣೆಗೆ ತರಬೇಕು ಪೂರ್ವದಿಂದಲೂ ನಮ್ಮ ಹಳ್ಳಿಯ ಪಾಠಶಾಲೆಗಳೇ ನಮ್ಮ ಸಂಸ್ಕೃತಿಯನ್ನು ಹರಡುತ್ತಿದ್ದವು ನಮ್ಮ

* "Rural Life and the Rural School", by Joseph Kenredy p 114

† "The House of the People", "An Account of Mexico's New School" by Katherine K Cook, 1935

ಸಂಸ್ಕೃತಿಯು ಹುಟ್ಟಿದ್ದು ಹಳ್ಳಿಯಲ್ಲಿ ಬೆಳೆದದ್ದು ಹಳ್ಳಿಯ ಪಾಠಶಾಲೆಗಳ ಉಪಾಧ್ಯಾಯರ ನೇತೃತ್ವದಲ್ಲಿ ಆದುದರಿಂದ ಹಿಂದೆ ಹಳ್ಳಿಯ ಉಪಾಧ್ಯಾಯರಿಗಿದ್ದ ಮಾನ್ಯತೆಯು ಪುನಃ ಉಂಟಾಗಬೇಕು

ನಮ್ಮ ಹಳ್ಳಿಯ ಪಾಠಶಾಲೆಗಳು ಇನ್ನುಮುಂದೆ ಮಕ್ಕಳ ಓದು ಬರಹದ ಜೊತೆಗೆ ಅವರ ದೃಷ್ಟಿಯು ಪವಿತ್ರ ಗ್ರಾಮಜೀವನದಮೇಲೆ ಬೀಳುವಂತೆ ಮಾಡಬೇಕು ಅಲ್ಲಿಯ ವಿದ್ಯಾಭ್ಯಾಸ ತತ್ವವು ಬಾಲಕರನ್ನು ಶುಚಿಯಾದ ಆರೋಗ್ಯಕರವಾದ ಸನ್ನಿವೇಶಗಳಲ್ಲಿ ವಾಸಮಾಡುವಂತೆ ಪ್ರೇರಿಸಬೇಕು ಹಳ್ಳಿಯ ಬಾಲಕರು ಆಟಪಾಟಗಳಲ್ಲಿ ಭಾಗವಹಿಸಿ, ಆದರ್ಶಕರಾಗಿ ಜೀವಿಸುವಂತಾಗಬೇಕು ಇವೆಲ್ಲಕ್ಕೂ ಮುಖ್ಯವಾದದ್ದು ಸುಶಿಕ್ಷಿತರಾದ ದೇಶಪ್ರೇಮಿಗಳಾದ ಉಪಾಧ್ಯಾಯರನ್ನು ನೇಮಿಸುವುದು ಅವರ ಉಪದೇಶಕ್ಕಿಂತ ಆಚರಣೆಯೇ ಬಾಲಕರಿಗೆ ಒಳ್ಳೆಯ ಮೇಲು ಪಂಕ್ತಿಯಾಗಿರಬೇಕು

ನಮ್ಮ ಹಳ್ಳಿಯ ಪಾಠಶಾಲೆಗಳು ವಿದ್ಯಾರ್ಥಿಗಳಿಗಲ್ಲದೆ ಗ್ರಾಮಸ್ಥರಿಗೂ ಕೂಡ ಸಹಾಯಮಾಡಬಹುದು ಗ್ರಾಮಸ್ಥರ ಮನಸ್ಸಿನಲ್ಲಿ ಮೂಡಿರತಕ್ಕ ಸಂಕುಚಿತ ದುರ್ಭಾವನೆಗಳನ್ನು ಸರಿಯಾದ ಉಪನ್ಯಾಸ, ಬೋಧನೆ ಮತ್ತು ಪ್ರಚಾರಕಾರ್ಯಗಳಿಂದ ತೊಲಗಿಸಬಹುದು ಪಾಠಶಾಲೆಯ ಚರ್ಚಾಸಂಘಗಳಲ್ಲಿ ಹಳ್ಳಿಯ ಜನರನ್ನು ಭಾಗವಹಿಸುವಂತೆ ಮಾಡಿ, ಹುಡುಗರ ಆಟಪಾಟಗಳನ್ನು ಅವರಿಗೆ ತೋರಿಸಿ, ಅವರ ಮನೋವೃತ್ತಿಯನ್ನು ಬದಲಾಯಿಸುವಂತೆ ಮಾಡಬಹುದು ಹರಿಕಥೆ, ಪ್ರದರ್ಶನ, ನಾಟಕ— ಇವೇ ಮುಂತಾದುವುಗಳ ಮೂಲಕ ಹಳ್ಳಿಯ ಜನರಿಗೆ ಹೆಚ್ಚು ತಿಳಿವಳಿಕೆಯನ್ನುಂಟುಮಾಡಬಹುದು ಹಾಗೆಯೇ ಆಧುನಿಕ ನಾಗರಿಕತೆಯ ವೈಜ್ಞಾನಿಕ ಉಪಕರಣಗಳಾದ ರೇಡಿಯೋ, ಚಲನಚಿತ್ರ ಮತ್ತು ಮಾಯಾದೀಪ— ಇವುಗಳನ್ನು ಪಾಠಶಾಲೆಯ ಆಶ್ರಯದಲ್ಲಿ ಏರ್ಪಡಿಸಿ, ಅನಕ್ಷರಸ್ಥರಲ್ಲಿಯೂ ಕೂಡ ಸುಲಭವಾಗಿ ತಿಳಿವಳಿಕೆಯನ್ನುಂಟುಮಾಡಬಹುದು

ಇಲ್ಲಿಯ ವಿದ್ಯಾಭ್ಯಾಸಕ್ರಮವು ಹಳ್ಳಿಯ ಸನ್ನಿವೇಶಕ್ಕೆ ಅನುಗುಣವಾಗಿರಬೇಕು ಮತ್ತು ಹಳ್ಳಿಯ ಜನರಿಗೆ ಆದರ್ಶಪ್ರಾಯವಾಗಿರಬೇಕು

ಗ್ರಾಮ ಪುನರುದ್ಧಾರ ಕಾರ್ಯಕ್ರಮದಲ್ಲಿ ಹಳ್ಳಿಯ ಪಾಠಶಾಲೆಗೆ ಮುಖ್ಯ ಸ್ಥಾನವು ದೊರೆಯಬೇಕು ೧೯೨೮ನೆಯ ಇಸವಿಯ ವ್ಯವಸಾಯ ವಿಮರ್ಶನಾ ಸಮಿತಿಯವರು ಗ್ರಾಮ ಪುನರುಜ್ಜೀವನ ಕೆಲಸಕ್ಕೆ ಸಲಹೆಯನ್ನು ಸೂಚಿಸುವಾಗ ವಿದ್ಯಾಭ್ಯಾಸಕ್ರಮಕ್ಕೇ ಹೆಚ್ಚು ಪ್ರಾಶಸ್ತ್ಯ ಕೊಟ್ಟಿದ್ದಾರೆ ಕೆಲವು ವರ್ಷಗಳ ಹಿಂದೆ ಬೊಂಬಾಯಿ ಆಧಿಪತ್ಯದಲ್ಲಿ ನಡೆದ ಗ್ರಾಮೋದ್ಧಾರ ಕಾನ್ಫರೆನ್ಸಿನಲ್ಲಿ ಸಾಂಗ್ಲಿ ಮಹಾರಾಜರು ಹಳ್ಳಿಗಳ ಉದ್ಧಾರದಲ್ಲಿ ಹಳ್ಳಿಯ ಪಾಠಶಾಲೆಗಳು ಮುಖ್ಯ ಭಾಗವೆಂಬದಾಗಿ ಹೇಳಿದ್ದಾರೆ

ಹಳ್ಳಿಯ ಜೀವನವನ್ನು ಉತ್ತಮಗೊಳಿಸಲು ಹಳ್ಳಿಯ ಉಪಾಧ್ಯಾಯರು ಅಲ್ಲಿಯ ಜನರಲ್ಲಿ ಬೆರೆತು, ಅವರಿಂದ ಕೆಲಸವನ್ನು ಮಾಡಿಸಬೇಕು ಇಂತಹ ಕಾರ್ಯಕ್ರಮವನ್ನು ಕೈಗೊಳ್ಳುವುದಕ್ಕೆ ಈಗಿರುವ ಅನೇಕ ಹಳ್ಳಿಯ ಉಪಾಧ್ಯಾಯರಿಗೆ ಅರ್ಹತೆಯೂ ಯೋಗ್ಯತೆಯೂ ಇಲ್ಲವೆಂದೇ ಹೇಳಬಹುದು ಹಳ್ಳಿಯ ಪಾಠಶಾಲೆಗಳು ಎಲ್ಲಾ ವಿಚಾರಗಳಲ್ಲಿಯೂ ಹಳ್ಳಿಯ ಕೇಂದ್ರಗಳಾಗಬೇಕಾದರೆ, ಅದರ ಭವಿಷ್ಯವು ಅಲ್ಲಿಯ ಉಪಾಧ್ಯಾಯರ ಕೈಯಲ್ಲಿದೆಯೆಂಬದಾಗಿ ಪಂಜಾಬು ದೇಶದ ಗ್ರಾಮೋದ್ಧಾರಕಾರ್ಯ ನಿಪುಣರಾದ ಬ್ರೈನ್ ಮಹನೀಯರು ಹೇಳಿದ್ದಾರೆ

ಇಂಡಿಯಾ ದೇಶದ ಅನೇಕ ಪ್ರಾಂತೀಯ ಸರ್ಕಾರಗಳು ಈಚೀಚೆಗೆ ಶಿಕ್ಷಣ ಸುಧಾರಣೆಗಳನ್ನು ವ್ಯವಸ್ಥೆಮಾಡುತ್ತಿವೆ ಅವುಗಳಲ್ಲಿ ಮಧ್ಯ ಪ್ರಾಂತದ ಪ್ರಭುತ್ವದವರು ನಿಯಮಿತಕಾಲಾವಧಿಯಲ್ಲಿ ಅಲ್ಲಿಯ ನಿರಕ್ಷರತೆಯನ್ನು ತೊಡೆದುಹಾಕುವುದಕ್ಕೆ ಸರ್ವ ಪ್ರಯತ್ನಮಾಡುತ್ತಿದ್ದಾರೆ ಇಲ್ಲಿ ನಮೂದಿಸಿರುವ ಕೆಲವು ಸಲಹೆಗಳು ಎಲ್ಲಾ ಪ್ರಾಂತೀಯ ಸರ್ಕಾರಗಳೂ ಕೂಡ ವಿಚಾರಮಾಡಲು ಯೋಗ್ಯವಾಗಿವೆ —

೧ ನಲವತ್ತು ಮಂದಿ ಬಾಲಕ ಬಾಲಕಿಯರು ಇರತಕ್ಕ ಪ್ರತಿಯೊಂದು ಹಳ್ಳಿಯಲ್ಲಿಯೂ ಒಂದು ವಿದ್ಯಾಮಂದಿರವನ್ನು ಸ್ಥಾಪಿಸಬೇಕು

೨ ವಿದ್ಯಾಮಂದಿರಕ್ಕೆ ಸ್ವಲ್ಪ ಜಮೀನನ್ನು ದತ್ತಿಯಾಗಿ ಬಿಟ್ಟು ಅದರ ವರಮಾನದಿಂದ ಉಪಾಧ್ಯಾಯನು ಜೀವಿಸುವಂತೆ ಏರ್ಪಡಿಸಬೇಕು

೩ ಪಾಠಶಾಲೆಯ ಆಡಳಿತಕ್ಕೆ ಒಂದು ಸಮಿತಿಯನ್ನು ಏರ್ಪಡಿಸಿ ಅದಕ್ಕೆ ಸದಸ್ಯರನ್ನು ಹಳ್ಳಿಯ ಜನಗಳಿಂದಲೇ ಚುನಾಯಿಸ ಬೇಕು

೪ ಅಲ್ಲಲ್ಲೇ ಶಿಕ್ಷಣ ಸಂಘಗಳನ್ನೇರ್ಪಡಿಸಿ ಅವುಗಳ ಸೂಕ್ತ ಕ್ರಮವನ್ನು ವಿಮರ್ಶೆಮಾಡಿ, ಸಹಕಾರ ಸಂಘಗಳಲ್ಲಿರುವಂತೆ ಆಯಾಯಾ ಸ್ಥಳಕ್ಕೆ ಅನುಕೂಲವಾದ ಉಪಕಾಯಿದೆಗಳನ್ನು ನಿಯಮಿಸಿಕೊಳ್ಳಬೇಕು

೫ ವಿದ್ಯಾಮಂದಿರಗಳಲ್ಲಿ ನೂಲುವುದೋ ನೇಯುವುದೋ, ಹಗ್ಗ, ಮಕ್ಕರಿ, ಚಾಪೆ ಇವುಗಳನ್ನು ಮಾಡುವುದೋ, ಅಥವಾ ಆಯಾಯಾ ಸ್ಥಳದಲ್ಲಿರುವ ಮುಖ್ಯ ಉಪವೃತ್ತಿಗೆ ಉತ್ತೇಜನ ಕೊಡುವುದೋ— ಇವೇ ಮುಂತಾದ ಕಾರ್ಯಕ್ರಮವು ಇರ ಬೇಕು ಇಂತಹ ಉತ್ತಮ ಸಲಹೆಗಳು ಇನ್ನೂ ಎಷ್ಟೋ ಇವೆ

ಈ ಸಲಹೆಗಳನ್ನೆಲ್ಲಾ ನಾವು ವಿಚಾರಮಾಡಿದರೆ ಹಿಂದಿನ ಕಾಲದಲ್ಲಿದ್ದ ನಮ್ಮ ದೇಶದ ಶಿಕ್ಷಣ ಸಂಸ್ಥೆಗಳ ಜ್ಞಾಪಕವು ನಮಗುಂಟಾಗುವುದು ನಮ್ಮ ಪ್ರತಿಯೊಂದು ದೇವಾಲಯವೂ ವಿದ್ಯಾಮಂದಿರವಾಗಿತ್ತು ಇಲ್ಲಿ ವಿದ್ಯಾರ್ಥಿಗಳ ವಸತಿಗೃಹಗಳನ್ನು ಏರ್ಪಡಿಸಿದ್ದರು ಶಿಕ್ಷಣ ಸಂಸ್ಥೆಯ ಆಡಳಿತವೆಲ್ಲಾ 'ಸಮಸ್ತಹಲರ' ಆರಿಸಿದ ಕೆಲವು ದೊಡ್ಡಮನುಷ್ಯರ ಕೈಯಲ್ಲಿತ್ತು ಸಾಮಾನ್ಯವಾಗಿ ಶಿಕ್ಷಣಶಾಲೆಗೆ ಐಶ್ವರ್ಯವಂತರು ದ್ರವ್ಯ ಸಹಾಯಮಾಡುತ್ತಿದ್ದರು ಅಂತಹ ಉತ್ತಮಕಾಲವು ನಮ್ಮ ದೇಶದಲ್ಲಿ ಪುನಃ ಉದಿಸಬೇಕು ನಾನಾ ನಿಪುಣರ ವಿಮರ್ಶೆಯಿಂದ ನಿರ್ಧರಿಸಲ್ಪಟ್ಟ ಏಕಮುಖವಾದ ಸುಧಾರಣೆಗಳು ನಮ್ಮ ಹಳ್ಳಿಗಳಲ್ಲೆಲ್ಲಾ ಪ್ರಚಾರಕ್ಕೆ ಬರಬೇಕು

ಮೈಸೂರು ಸಂಸ್ಥಾನದಲ್ಲಿ ಇಂಡಿಯಾ ದೇಶದ ಇತರ ಭಾಗ ಗಳಲ್ಲಿರುವಂತೆಯೇ ವಿದ್ಯಾಭ್ಯಾಸಸ್ಥಿತಿಯು ಇದೆ ಆದರೆ ಪ್ರಭುತ್ವದವರು ಪ್ರಾಥಮಿಕ ವಿದ್ಯಾಭ್ಯಾಸವನ್ನು ವಿಸ್ತರಿಸುವುದಕ್ಕೆ ಸಾಧ್ಯವಾದಷ್ಟು ಪ್ರಯತ್ನ ಮಾಡುತ್ತಿದ್ದಾರೆ "ದೇಶದ ದಾರಿದ್ರ್ಯಕ್ಕೆ ವಿದ್ಯಾಭ್ಯಾಸವೇ ತಕ್ಕ ಮದ್ದು ನಮ್ಮ ಸರಕಾರದವರು ವಿದ್ಯಾಪ್ರಚಾರಕ್ಕೆ ಹೆಚ್ಚು

ಹಣವನ್ನು ಒದಗಿಸಿ ಜನಗಳಲ್ಲಿ ಶ್ರದ್ಧೆಯನ್ನೂ, ತಿಳಿವಳಿಕೆಯನ್ನೂ ಉಂಟುಮಾಡುತ್ತಿದ್ದಾರೆ ವಿದ್ಯಾಪ್ರಚಾರವು ನಮ್ಮ ಸರ್ಕಾರದ ಪ್ರಾಮುಖ್ಯವಾದ ಕಾರ್ಯಕ್ರಮದಲ್ಲಿ ಮೊದಲನೆಯದಾಗಿದೆ"* ಎಂಬದಾಗಿ ಆಳುವ ಮಹಾಸ್ವಾಮಿಯವರೇ ಅಪ್ಪಣೆ ಕೊಡಿಸಿದ್ದಾರೆ ಅದರಂತೆ ಉತ್ತಮ ಕೆಲಸಗಳೂ ನಡೆಯುತ್ತಿವೆ

ಮೈಸೂರು ಸಂಸ್ಥಾನದಲ್ಲಿ ವಿದ್ಯಾಭ್ಯಾಸಕ್ಕೆ ಇತರ ಎಲ್ಲಾ ಪ್ರಾಂತಗಳಿಗಿಂತಲೂ ಹೆಚ್ಚು ದ್ರವ್ಯ ಖರ್ಚಾಗುತ್ತಿದೆ ಪ್ರಾಥಮಿಕ ವಿದ್ಯಾಭ್ಯಾಸವನ್ನು ವಿಸ್ತಾರಪಡಿಸುವುದಕ್ಕೆ ಸರ್ಕಾರದವರು ಪಾಠಶಾಲೆಗಳ ಸಂಖ್ಯೆ ಹೆಚ್ಚಿಸುವುದು, ವಿದ್ಯಾರ್ಥಿಗಳಿಗೆ ಭೋಜನ ವಸತಿ ಗೃಹಗಳನ್ನು ಏರ್ಪಡಿಸುವುದು, ಓಂದುಳಿದ ಸಂಗಡಕ್ಕೆ ವೇತನ ಸೌಕರ್ಯ ಕಲ್ಪಿಸುವುದು — ಇವೇ ಮುಂತಾದ ಉಪಾಯಗಳನ್ನು ಕೈಗೊಂಡಿದ್ದಾರೆ ಈ ಕೆಳಗೆ ಕಂಡ ಅಂಕಿಗಳಿಂದ ಮೈಸೂರಿನ ವಿದ್ಯಾಭ್ಯಾಸವು ಅಭಿವೃದ್ಧಿ ಹೊಂದುತ್ತಾ ಇದೆ ಎಂದು ಧಾರಾಳವಾಗಿ ಹೇಳಬಹುದು —

| ವರ್ಷ | ಪಾಠಶಾಲೆಯ ಸಂಖ್ಯೆ | ವಿದ್ಯಾರ್ಥಿಗಳ ಸಂಖ್ಯೆ | ಖರ್ಚು (ರೂಪಾಯಿಗಳು) |
|---|---|---|---|
| 1916 | 4,930 | 1,58,158 | 27,85,328 |
| 1925–26 | 5,631 | 2,40,127 | 60,73,703 |
| 1932–33 | 6,234 | 2,47,191 | 67,17,951 |
| 1934–35 | 6,761 | 2,97,698 | 69,24,539 |
| 1936–37 | 7,731 | 3,39,696 | 66,42,196 |

ವಿದ್ಯಾರ್ಥಿಗಳ ಸಂಖ್ಯೆಯು ಹೆಚ್ಚುತ್ತಿದೆ ಅದೇ ರೀತಿಯಲ್ಲಿ ಪಾಠಶಾಲೆಗಳ ಸಂಖ್ಯೆಯೂ ಕೂಡ ಹೆಚ್ಚುತ್ತಿವೆ ಸ್ತ್ರೀ ವಿದ್ಯಾಭ್ಯಾಸಕ್ಕೆ ಬೇಕಾದ ಅನುಕೂಲ್ಯಗಳನ್ನು ಸರ್ಕಾರದವರು ಕಲ್ಪಿಸುತ್ತಿದ್ದಾರೆ ಆದರೂ ಇನ್ನೂ ಹೆಚ್ಚು ಕೆಲಸ ನಡೆಸಬೇಕು ಪ್ರಾಥಮಿಕ ವಿದ್ಯಾಭ್ಯಾಸವು ಇನ್ನೂ ವಿಸ್ತಾರವಾಗಬೇಕು ಎಂಬದಾಗಿ ಪ್ರಭುತ್ವದವರೇ ಒಪ್ಪಿಕೊಂಡಿದ್ದಾರೆ ಇನ್ನೂ ವಿಸ್ತಾರವಾಗದಿರುವುದಕ್ಕೆ ಗ್ರಾಮಗಳ ಶೋಚನೀಯಾವಸ್ಥೆಯೇ

* "Opening Speech of Economic Conference", 1911, by H H. The Maharaja of Mysore

ಮುಖ್ಯ ಕಾರಣವಾಗಿದೆ ಹಳ್ಳಿಯಲ್ಲಿ ನಿರಕ್ಷರತ್ವವು ಹೋಗಿ ಜ್ಞಾನ ಪ್ರಚಾರವಾಗಬೇಕಾದರೆ ಪಾಠಶಾಲೆಗಳು ಸಂಸ್ಕೃತಿ ಪ್ರಚಾರಕೇಂದ್ರಗಳಾಗ ಬೇಕು ಮೈಸೂರು ವಿಶ್ವವಿದ್ಯಾನಿಲಯದ ಸ್ಥಾನಪತಿಗಳೂ, ಹಳ್ಳಿಯ ಜೀವನದ ಗುಟ್ಟನ್ನು ಚೆನ್ನಾಗಿ ಅರಿತಿರುವ ಅರ್ಥಶಾಸ್ತ್ರ ಪ್ರವೀಣರೂ ಆದ ರಾಜಕಾರ್ಯಪ್ರವೀಣ ಶ್ರೀಮಾನ್ ಎನ್ ಎಸ್ ಸುಬ್ಬರಾಯರು "ಹಳ್ಳಿ, ಹಳ್ಳಿಯ ಪಾಠಶಾಲೆ, ಹಳ್ಳಿಯ ಉಪಾಧ್ಯಾಯ — ಈ ಮೂರೂ ನಮ್ಮ ಸಂಸ್ಕೃತಿಯ ಮತ್ತು ದೇಶಾಭಿವೃದ್ಧಿಯ ಮೂರು ಆಧಾರಸ್ತಂಭಗಳು"* ಎಂದು ಹೇಳಿದ್ದಾರೆ

ನಮ್ಮ ಹಳ್ಳಿಯ ಪಾಠಶಾಲೆಗಳು ಬರೀ ಓದುಬರಹವನ್ನು ಕಲಿಸಿದರೆ ಸಾಲದು ಅಲ್ಲಿಯ ಪಾಠಪ್ರವಚನಾದಿಗಳು ಜೀವನದ ಪವಿತ್ರ ಧ್ಯೇಯ ವನ್ನು ತಿಳಿಸಿ, ಹಳ್ಳಿಯ ಇತರ ಅಭಿವೃದ್ಧಿಕಾರ್ಯಗಳಲ್ಲಿ ಪಾಠಶಾಲೆಗಳು ನೆರವಾಗುವಂತೆ ಮಾಡಬೇಕು ಹಳ್ಳಿಯ ಪಾಠಶಾಲೆಗಳೇ ಜ್ಞಾನದ ಬೆಳಕನ್ನು ಹರಡುವ ದೀವಿಗೆಗಳಾಗಿ ಸಂಸ್ಕೃತಿಯನ್ನು ವಿಸ್ತರಿಸುವ ಕೇಂದ್ರ ಗಳಾಗಬೇಕು ಹಳ್ಳಿಯ ಜನರಿಗೆ ಆದರ್ಶವಾದ ಮತ್ತು ಅಂದವಾದ ಸಣ್ಣ ತೋಟ, ಶುಚಿಯಾದ ಸನ್ನಿವೇಶ, ಜನರನ್ನು ಆಕರ್ಷಿಸುವಂತಹ ಹೂವು ಮತ್ತು ಹಣ್ಣಿನ ಗಿಡಗಳು ಇವುಗಳನ್ನೆಲ್ಲಾ ಪಾಠಶಾಲೆಗಳು ನಿರ್ಮಿಸಿ ಉದಾಹರಣೆಯಾಗಿರಬಹುದು ವ್ಯವಸಾಯ, ಸಹಕಾರ, ಗ್ರಾಮ ಪಂಚಾಯಿತಿ, ಆರೋಗ್ಯ, ವಾಣಿಜ್ಯ — ಇವೇ ಮುಂತಾದ ಇಲಾಖೆಗಳಿಗೆ ಸಂಬಂಧಪಟ್ಟ ಗ್ರಾಮೋದ್ಧಾರಕಾರ್ಯಗಳನ್ನು ಹಳ್ಳಿಯ ಪಾಠಶಾಲೆಯ ಉಪಾಧ್ಯಾಯರ ಮೂಲಕವೇ ನಡೆಸಬಹುದು ಹೀಗೆ ಮಾಡಿದರೆ ಅಥವಾ ಮಾಡುವ ಸನ್ನಿವೇಶಗಳನ್ನು ಕಲ್ಪಿಸಿದರೆ, ಗ್ರಾಮೋದ್ಧಾರ ಕಾರ್ಯಗಳು ಸುಲಭವಾಗಿಯೂ, ಸುಲಲಿತವಾಗಿಯೂ ನಡೆದು ರೈತರ ಜೀವನವು ಉತ್ತಮವಾಗುವುದರಲ್ಲಿ ಸಂದೇಹವಿಲ್ಲ

ವಾರ್ಧಾದಲ್ಲಿ ಮಹಾತ್ಮ ಗಾಂಧಿಯವರ ಅಧ್ಯಕ್ಷತೆಯಲ್ಲಿ, ಈಗ್ಗೆ ಕೆಲವು ಕಾಲದ ಹಿಂದೆ, ಒಂದು ವಿದ್ಯಾಭ್ಯಾಸ ಸಮ್ಮೇಳನವು ನಡೆಯಿತು ಭರತಖಂಡದ ಶಿಕ್ಷಣ ನಿಪುಣರೆಲ್ಲರೂ ಅಲ್ಲಿ ಸೇರಿದ್ದರು ಮಹಾತ್ಮರ ನೇತೃತ್ವದಲ್ಲಿ ಶಿಕ್ಷಣ ಸಮಸ್ಯೆಗಳನ್ನೆಲ್ಲಾ ಕೂಲಂಕಷವಾಗಿ ವಿಮರ್ಶೆ

* "Speech at the Educational Week", Hassan, January 1935

ಮಾಡಿ ಒಂದು ಉತ್ತಮ ಕಾರ್ಯಕ್ರಮವನ್ನು ಸೂಚಿಸಿದ್ದಾಗಿದೆ ಇದರ ಪ್ರಕಾರ ಪ್ರೈಮರಿ ವಿದ್ಯಾಭ್ಯಾಸವು ಬಾಲಕ ಬಾಲಕಿಯರಿಗೆ ಏಳು ವರ್ಷ ಕಾಲ ನಡೆಯಬೇಕೆಂದೂ, ಈ ವಿದ್ಯಾಭ್ಯಾಸಕ್ರಮದಲ್ಲಿ ಅಕ್ಷರ ವಿದ್ಯೆಗಿಂತ ಔದ್ಯೋಗಿಕ ವಿದ್ಯೆಗೆ ಹೆಚ್ಚು ಪ್ರಾಮುಖ್ಯತೆ ಕೊಡಬೇಕೆಂದೂ, ಈ ಔದ್ಯೋಗಿಕ ವಿದ್ಯೆಯ ಸುತ್ತಲೂ ಪೋಷಕವಾಗಿ ಅಕ್ಷರ ಶಿಕ್ಷಣವು ಬೆಳೆಯಬೇಕೆಂದೂ, ಶಿಕ್ಷಣವು ಮಾತೃಭಾಷೆಯಲ್ಲಿಯೇ ನಡೆಯಬೇಕೆಂದೂ ಸೂಚಿಸಿದ್ದಾರೆ ಶಿಕ್ಷಣದ ವೆಚ್ಚವೆಲ್ಲಾ ಔದ್ಯೋಗಿಕ ಶಿಕ್ಷಣದಿಂದ ದೊರೆಯಬೇಕು ಹುಡುಗರು ತಯಾರು ಮಾಡುವ ಪದಾರ್ಥಗಳನ್ನು ಮಾರಿ ಶಿಕ್ಷಣ ನಡೆಯಿಸಬೇಕು ತಕಲಿಯಿಂದ ನೂಲನ್ನು ಮೊದಲು ತೆಗೆದು ಅನಂತರ ಕ್ರಮವಾಗಿ, ಚರಕಾ ಶಿಕ್ಷಣ, ನೇಯುವುದು, ಬಣ್ಣ ಹಾಕುವುದು— ಇವೇ ಮುಂತಾದುವನ್ನು ಅಕ್ಷರ ಶಿಕ್ಷೆಯ ಜೊತೆಯಲ್ಲೇ ಕಲಿಸಬಹುದು ಎಂದು ತೀರ್ಮಾನಿಸಲಾಗಿದೆ

ಮಹಾತ್ಮ ಗಾಂಧಿಯವರು ಸೂಚಿಸಿರುವ ಪದ್ಧತಿಯ ವಿಷಯವಾಗಿ ಶಿಕ್ಷಣ ನಿಪುಣರ ಅಭಿಪ್ರಾಯಗಳಲ್ಲಿ ಕೆಲವು ಪೋಷಕವಾಗಿಯೂ ಕೆಲವು ವಿರೋಧವಾಗಿಯೂ ಇವೆ ಪ್ರಾಥಮಿಕ ವಿದ್ಯಾಭ್ಯಾಸವು ಸಾಧ್ಯವಾದ ಮಟ್ಟಿಗೆ ಸಾಮಾನ್ಯ ಸಂಸ್ಕೃತಿಯನ್ನು ಹರಡಬೇಕು ಶ್ರಮಜೀವಿಗಳೋಪಾದಿಯಲ್ಲಿ ಕಷ್ಟ ಕೆಲಸಗಳನ್ನು ಸಣ್ಣ ಬಾಲಕರಿಂದ ಮಾಡಿಸುವುದು ಅಷ್ಟು ಉತ್ತಮವಾಗಿ ಕಾಣುವುದಿಲ್ಲ ಎಂಬುದು ಕೆಲವರ ಮತ ವಾರ್ಧಾ ಸಮ್ಮೇಳನದ ತೀರ್ಮಾನದ ಪ್ರಕಾರ ಸ್ವಯಂ ಸಂರಕ್ಷಣಾ ಶಿಕ್ಷಣ ಕ್ರಮವು ಪ್ರೌಢ ವಿದ್ಯಾಭ್ಯಾಸಕ್ರಮಕ್ಕೆ ಸರ್ವೋತ್ತಮವಾಗಿರುವುದು

ಭರತಖಂಡವು ಈಗ ಬಹಳ ಹೀನಸ್ಥಿತಿಯಲ್ಲಿದೆ ಅದರ ಆರ್ಥಿಕಾವಸ್ಥೆಯು ಶೋಚನೀಯವಾಗಿದೆ ಯಾವ ವಿದ್ಯಾಭ್ಯಾಸಕ್ರಮವನ್ನು ಆಚರಣೆಗೆ ತಂದರೂ, ಕೋಟ್ಯಂತರ ರೂಪಾಯಿಗಳನ್ನು ಖರ್ಚುಮಾಡಬೇಕಾಗುವುದು ಅಷ್ಟು ಹಣವನ್ನು ಎಲ್ಲಿಂದ ತರುವುದು? ಹಣವು ದೊರಕುವವರೆಗೂ, ದೇಶವು ಹೀಗೆಯೇ ನರಳುತ್ತಿರಬೇಕೇ? ಅಥವಾ ಇನ್ನೂ ಯಾವುದಾದರೂ ಅನುಕೂಲವಾದ ಕಾರ್ಯಕ್ರಮಗಳಿವೆಯೇ? ಇವೇ ಮುಂತಾದ ಸಮಸ್ಯೆಗಳು ಶಿಕ್ಷಣ-ನಿಪುಣರ ವಿಮರ್ಶೆಗೆ ಒಳಪಟ್ಟು,

ಯಾವುದಾದರೂ, ಹೆಚ್ಚು ವೆಚ್ಚವಿಲ್ಲದ ಕಾರ್ಯಕ್ರಮವನ್ನು ತಕ್ಷಣ ಆಚರಣೆಗೆ ತರಬೇಕೆಂದು ಪ್ರಯತ್ನಪಟ್ಟಿಹಾಗಿದೆ

ಸದ್ಯಸ್ಥಿತಿಯಲ್ಲಿ ನಮಗೆ ಸ್ವಯಂಕಲ್ಪನಾಶಕ್ತಿಯನ್ನು ಬಲಪಡಿಸ ತಕ್ಕ ವಿದ್ಯಾಭ್ಯಾಸಕ್ರಮವು ಬೇಕು ಕೆಲಸದ ಮಹತ್ವವನ್ನು ತಿಳಿಸತಕ್ಕ ಶಿಕ್ಷಣವು ನಮಗೆ ಬೇಕು ವ್ಯವಸಾಯಗಾರರನ್ನು ಸಮರ್ಥರನ್ನಾಗಿ ಮಾಡುವ, ಕೈಗಾರಿಕಾ ಕೂಲಿಗಳನ್ನೂ ಮತ್ತು ಬಂಡವಾಳಗಾರರನ್ನೂ ಸಖ್ಯದಲ್ಲಿಡತಕ್ಕ ಶಿಕ್ಷಣಕ್ರಮವು ಬೇಕು ಕೋಟ್ಯಾಧೀಶ್ವರರು ತಮ್ಮ ಹಣವನ್ನು ಸಮಾಜದಲ್ಲಿ ಕಷ್ಟದಿಂದ ಬಡತನದಿಂದ ನರಳುತ್ತಿರುವ ಶ್ರಮ ಜೀವಿಗಳ ಸೌಕರ್ಯಕ್ಕೆ ಖರ್ಚುಮಾಡಿ, ಅವರಿಂದ ಉತ್ತಮ ದೇಶಸೇವೆ ಮಾಡಿಸುವಂತಹ ವಿದ್ಯಾಭ್ಯಾಸಕ್ರಮವು ಬೇಕು ಪ್ರತಿಯೊಬ್ಬರೂ ಕಾಲ ವನ್ನು ವ್ಯರ್ಥವಾಗಿ ಕಳೆಯದೆ, ಅದನ್ನು ಉತ್ತಮರೀತಿಯಲ್ಲಿ ಉಪಯೋ ಗಿಸುವುದಕ್ಕೆ ಅನುಕೂಲಗಳನ್ನು ಕಲ್ಪಿಸತಕ್ಕ ವಿದ್ಯಾಭ್ಯಾಸಕ್ರಮವು ಬೇಕು ಒಟ್ಟಿನಲ್ಲಿ ಶಾರೀರಕ, ಮಾನಸಿಕ, ನೈತಿಕ ಮತ್ತು ಧಾರ್ಮಿಕ ಎಲ್ಲಾ ರೀತಿಯಿಂದಲೂ ಸಮಾಜವನ್ನು ಅಭಿವೃದ್ಧಿಗೆ ತರತಕ್ಕ ವಿದ್ಯಾಭ್ಯಾಸವು ನಮಗೆ ಬೇಕು ಅಂತಹ ಉತ್ತಮ ಶಿಕ್ಷಣಕ್ರಮವು ಪ್ರಪಂಚದ ಎಲ್ಲಾ ಸಮಾಜದ ಏಕೀಕರಣ ಸಮಸ್ಯೆಯನ್ನೂ ಕೂಡ ಬಗೆಹರಿಸಬೇಕು

ಇಂತಹ ರಾಷ್ಟ್ರೀಯ ವಿದ್ಯಾಭ್ಯಾಸಕ್ರಮವು ಜನರ ಸ್ವಭಾನಸ್ಥಿತಿ ಯನ್ನು ಉತ್ತಮಪಡಿಸುವುದಕ್ಕೆ ಸಹಾಯಕವಾಗಿರಬೇಕು ಜನರಿಗೆ ಶಿಸ್ತನ್ನು ಉಂಟುಮಾಡಿ ಚಾತುರ್ಯವನ್ನು ಅಭಿವೃದ್ಧಿಪಡಿಸಿ, ದೇಶಾಭ್ಯು ದಯವನ್ನುಂಟುಮಾಡುವಂತಿರಬೇಕು ಹೀಗೆ ಸಾರ್ವಜನಿಕ ಶಿಸ್ತನ್ನುಂಟು ಮಾಡಬೇಕಾದರೆ, ನಾವು ಪಳಗಿದ ರಾಜನಿಷ್ಠ ಸೇನೆಯಂತೆ, ತ್ಯಾಗಬುದ್ಧಿ ಯುಳ್ಳವರಾಗಬೇಕು ಇದೇ ನಮ್ಮ ರಾಷ್ಟ್ರೀಯ ಶಿಕ್ಷಣಕ್ರಮಕ್ಕೆ ಮುಖ್ಯ ತಳಹದಿಯಾಗಬೇಕು *

---

* "Hindu", 14 11 1937

# ೬. ರೈತರ ಸಾಲ

ಪ್ರಪಂಚದಲ್ಲೆಲ್ಲಾ ಭರತಖಂಡವು ಶ್ರೇಷ್ಠವಾದ ದೇಶವೆಂದೂ, ಪರಮಾತ್ಮನು ಇಲ್ಲಿ ಅನೇಕ ಅವತಾರಗಳನ್ನೆತ್ತಿ ಜನಗಳನ್ನು ರಕ್ಷಿಸಿದನೆಂದೂ, ಒಂದಾನೊಂದು ಕಾಲದಲ್ಲಿ ಇದು ಸಂಪತ್ಸಮೃದ್ಧವಾದ ದೇಶವಾಗಿತ್ತೆಂದೂ ನಮ್ಮ ಕವಿಗಳು ಹಾಡಿದ್ದಾರೆ ಇದು ಇತಿಹಾಸದ ಮಾತು ಸಾಮಾನ್ಯದೃಷ್ಟಿಯಿಂದಲೂ ಕೂಡ, ನಮ್ಮ ದೇಶವು ಜಲ, ತೃಣ, ಕಾಷ್ಠಗಳಿಂದ ಭರಿತವಾಗಿ ಕಷ್ಟಜೀವಿಗಳಾದ ವ್ಯವಸಾಯಗಾರರಿಂದ ತುಂಬಿತ್ತು ಆದರೆ ಕಾಲಕ್ರಮೇಣ ಪಾಶ್ಚಾತ್ಯ ದೇಶಗಳ ಸಂಪರ್ಕದಿಂದಲೂ, ಹೊರಗಿನವರ ಧಾಳಿಯಿಂದಲೂ, ಹಿಂದಿನ ನೆಮ್ಮದಿಯೆಲ್ಲಾ ಭಂಗವಾಯಿತು ಉತ್ತಮ ದೇಶವೆಂದು ಹೆಸರುಗೊಂಡಿದ್ದ ದೇಶವು ನೆಮ್ಮದಿ ಇಲ್ಲದ, ಅತೃಪ್ತರಾದ, ಹೊಟ್ಟೆಗಿಲ್ಲದ ಹೆಚ್ಚು ಭಿಕಾರಿ ಜನಗಳ ದೇಶವಾಗುತ್ತಾ ಬಂತು ನಮ್ಮ ರೈತರು ಬಡತನ, ಹೊರಲಾರದ ಸಾಲ, ಇವುಗಳಿಂದ ನಿಸ್ತೇಜರಾಗುತ್ತಾ ಬರುತ್ತಿದ್ದಾರೆ, ಜೀವನಕ್ಕೆ ಆಧಾರವಿಲ್ಲದೆ ನರಳುತ್ತಿದ್ದಾರೆ

"ಒಂದು ದೇಶದ ಜನರ ಜೀವನ ಸೌಖ್ಯವು ಒಂದು ಮರದ ಹಾಗೆ, ವ್ಯವಸಾಯವೇ ಅದರ ಬೇರು, ವ್ಯಾಪಾರ ಮತ್ತು ಕೈಗಾರಿಕೆಗಳೇ ಅದರ ರೆಂಬೆ ಮತ್ತು ಜೀವಾಳ ಮುಖ್ಯವಾದ ಬೇರಿಗೆ ನಷ್ಟವುಂಟಾದರೆ ಮರದ ಎಲೆಗಳು ಬಿದ್ದುಹೋಗುವುವು ರೆಂಬೆಗಳು ಒಣಗಿ ಮುರಿದು ಬಿದ್ದುಹೋಗುವುವು ಮರವೂ ಕೂಡ ಸತ್ತುಹೋಗುತ್ತದೆ"* ಎಂಬದಾಗಿ ಒಬ್ಬ ಅರ್ಥಶಾಸ್ತ್ರ ನಿಪುಣರು ಬರೆದಿದ್ದಾರೆ ಭರತಖಂಡದಲ್ಲಿ ಮರದ ಬೇರಿನಷ್ಟು ಮುಖ್ಯವಾದ ವ್ಯವಸಾಯವು ಸಾಲವೆಂಬ ಗೆದ್ದಲು ಹುಳುಗಳಿಂದ ತಿನ್ನಲ್ಪಡುತ್ತಾ ಇದೆ

ವ್ಯವಸಾಯವೇ ಮುಖ್ಯ ವೃತ್ತಿಯಾಗುಳ್ಳ ದೇಶಗಳಲ್ಲೆಲ್ಲಾ ಸಾಮಾನ್ಯವಾಗಿ ರೈತರಿಗೆ ಸಾಲವಿದ್ದೇ ಇದೆ ಸಾಲದ ಅಭ್ಯುದಯವು ದೇಶದ ಅಭ್ಯುದಯವನ್ನು ತೋರಿಸುವ ಅನುಕ್ರಮಣಿಕೆ ಎಂದೂ ಕೆಲವರು ಭಾವಿಸಿದ್ದಾರೆ ಆದರೆ ಇದು ಸಾಲದ ಹಣವು ಫಲದಾಯಕವಾದ

* "The Punjab Peasant in Prosperity and Debt", by Darling, p 290

ಉದ್ಯಮಗಳಲ್ಲಿ ಉಪಯೋಗಿಸಲ್ಪಡುತ್ತಿದ್ದರೆ ಸತ್ಯವಾಗಿ ಪರಿಣಮಿಸುತ್ತದೆ ಎಲ್ಲಿ ಸಾಲದ ಬಹುಭಾಗವು ನಿಷ್ಪ್ರಯೋಜನವಾದ, ಫಲದಾಯಕವಲ್ಲದ ಕಾರ್ಯಭಾಗಕ್ಕೆ ಉಪಯೋಗವಾಗುತ್ತದೊ ಅಲ್ಲಿ ಇದು ಬಡತನದ ಸೂಚನೆಯೇ ಸರಿ ಭರತಖಂಡದಲ್ಲಿ ರೈತರ ಸಾಲವು ಮಿತಿಮಿರಿ, ಅವರು ಸಾಲದ ಕಷ್ಟಪರಂಪರೆಗಳಲ್ಲಿ ಸಿಕ್ಕಿ ನಿತ್ಯಜೀವನದ ಅವಶ್ಯಕತೆಗಳನ್ನು ಹೊಂದುತ್ತಾ ಇಲ್ಲ ದಿನೇ ದಿನೇ ಹೆಚ್ಚುತ್ತಿರುವ ಅವರ ಬಡತನವನ್ನು ಮತ್ತಷ್ಟು ತೀಕ್ಷ್ಣಗೊಳಿಸುತ್ತಾ ಇದೆ *

ನಮ್ಮ ದೇಶದ ವ್ಯವಸಾಯಗಾರರ ವಾರ್ಷಿಕ ವರಮಾನವನ್ನು ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ನಿರ್ಧರಿಸಿದ್ದಾರೆ ಅವೆಲ್ಲ ಅಂದಾಜುಗಳನ್ನು ನಾವು ವಿಮರ್ಶೆಮಾಡಿದರೂ ಕೂಡ, ಆ ವರಮಾನವು ಪಾಶ್ಚಾತ್ಯ ದೇಶಗಳಲ್ಲಿ ಒಂದು ನಾಯಿ ಅಥವಾ ಒಂದು ಹಸುವಿನ ಪಾಲನೆಗೂ ಸುತರಾಂ ಸಾಕಾಗುವುದಿಲ್ಲ ಇಲ್ಲಿ ನಮೂದಿಸಿರುವ ಅಂಕಿಗಳಿಂದ ನಮ್ಮ ದೇಶೀಯರ ವರಮಾನವನ್ನೂ, ಅವರ ಬಡತನವನ್ನೂ ಚೆನ್ನಾಗಿ ತಿಳಿಯಬಹುದು —

| ವರ್ಷ | ರೈತರ ವರಮಾನ ತಲೆ ಒಂದಕ್ಕೆ | | | ಅಂದಾಜು ಮಾಡಿದವರು |
|---|---|---|---|---|
| | ರೂ | ಆ | ಪೈ | |
| 1880 | 18 | 0 | 0 | ಸರ್ಕಾರದ ಅಂದಾಜು |
| 1882 | 27 | 0 | 0 | ಅರ್ಲ್ ಕ್ರೊಮರ್ |
| 1882 | 17 | 4 | 0 | ಡೇವಿಡ್ ಬಾರ್ಬರ್ |
| 1902 | 20 | 0 | 0 | ಲಾರ್ಡ್ ಕರ್ಸನ್ |
| 1914 | 44 | 5 | 6 | ವಾಡಿಯಾ ಜೋಷಿ |
| 1914-22 | 58 | 8 | 0 | ಷಹಾ ಕಂಬಾಟಾ |
| 1928 | 42 | 0 | 0 | ಬ್ಯಾಂಕಿಂಗ್ ಕಮಿಟಿ |

* "The Baroda Report", p. 90
"The Burma Co operative Society's Report", p 18
"Some South Indian Villages", By Dr Slater, p 290
All these reveal that debts in India are increasing every year

೧೯೨೮ನೆಯ ಇಸವಿಯಲ್ಲಿ ೪೨ ರೂಪಾಯಿಗಳಿದ್ದರೂ, ಅಲ್ಲಿಂದೀಚೆಗೆ ಇದು ಬಹಳ ಕಡಿಮೆಯಾಗಿದೆ ಎಂದು ಹೇಳಬಹುದು ಹ್ಯಾಗೆಂದರೆ, ೧೯೨೮ನೆಯ ಇಸವಿಯಿಂದೀಚೆಗೆ ಮುಖ್ಯ ಧಾನ್ಯಗಳ ಬೆಲೆಯು ಶೇಕಡ ೫೩ರಷ್ಟು ಕಡಿಮೆಯಾಗಿದೆ ಎಂದು ಹೇಳಲಾಗಿದೆ ವ್ಯವಸಾಯದಿಂದ ಉತ್ಪತ್ತಿಯಾದ ಪದಾರ್ಥಗಳ ಬೆಲೆಯು ಕಡಿಮೆಯಾಗುತ್ತಿರುವುದನ್ನು ಈ ಕೆಳಗಿನ ಅಂಕಿಗಳಿಂದ ಚೆನ್ನಾಗಿ ತಿಳಿಯಬಹುದು —

| ಪ್ರಾಂತ | ವ್ಯವಸಾಯದ ಒಟ್ಟು ವರಮಾನದ ಅಂದಾಜು 1928ರಲ್ಲಿ | ವ್ಯವಸಾಯದ ಒಟ್ಟು ವರಮಾನದ ಅಂದಾಜು 1934ರಲ್ಲಿ | ಬೆಲೆಯಲ್ಲಿ ಇಳಿತದ ಶೇಕಡ ದರ |
|---|---|---|---|
| ಮದ್ರಾಸು | 180 ಲಕ್ಷ ರೂಪಾಯಿ | 83 ಲಕ್ಷ ರೂಪಾಯಿ | 54 |
| ಬಂಗಾಳ | 232 ,, | 95 ,, | 59 |
| ಬೊಂಬಾಯಿ | 120 ,, | 60 ,, | 50 |
| ಸಂಯುಕ್ತಪ್ರಾಂತ | 140 ,, | 85 ,, | 39 |
| ಪಂಜಾಬು | 76 ,, | 40 ,, | 57 |
| ಬಿಹಾರ, ಒರಿಸ್ಸ | 135 ,, | 55 ,, | 60 |
| ಮಧ್ಯಪ್ರಾಂತ | 63 ,, | 40 ,, | 55* |

ಇಂಡಿಯಾ ದೇಶದ ಪ್ರಾಂತಗಳಲ್ಲೆಲ್ಲಾ ಪಂಜಾಬಿನ ವ್ಯವಸಾಯ ಕ್ರಮವು ಬಹಳ ಉತ್ತಮವಾಗಿದೆ ಎಂದು ಪರಿಗಣಿಸಲ್ಪಟ್ಟಿದೆ ಅಲ್ಲಿಯೂ ಕೂಡ ರೈತರ ಸ್ಥಿತಿಯು ಉತ್ತಮಗೊಂಡಿಲ್ಲ ಜಮೀನಿನ ಉತ್ಪತ್ತಿಯು ಕಡಿಮೆಯಾಗುತ್ತಿದೆ ಅಲ್ಲಿಯೇ ಹೀಗಿರುವಾಗ ಇನ್ನು ಉಳಿದ ಪ್ರಾಂತಗಳಲ್ಲಿ ವರಮಾನವು ಕಡಿಮೆಯಾಗುತ್ತಿರುವುದು ಖಂಡಿತವಾಗಿದೆ ಒಟ್ಟಿನಲ್ಲಿ ಜಮೀನಿನ ವರಮಾನವೂ ಕೂಡ ಸುಮಾರು ಶೇಕಡ ೫೦ರಷ್ಟು ಕಡಿಮೆಯೆಂತಲೇ ಹೇಳಬಹುದು —

ರೈತರ ವರಮಾನವು ಕಡಿಮೆಯಾಗುತ್ತಿರುವುದು ಒಂದು ಕಡೆ, ಪದಾರ್ಥಗಳ ಬೆಲೆಯು ಕಡಿಮೆಯಾಗುತ್ತಿರುವುದು ಇನ್ನೊಂದು ಕಡೆ, ವ್ಯವಸಾಯದ ಖರ್ಚು ಏರುತ್ತಿರುವುದು ಮತ್ತೊಂದು ಕಡೆ ಹೀಗಾಗಿ

* "The Royal Economic Society Journal", London, Sept 1936, p 548

ರೈತರ ಸಾಲವು ದಿನೇದಿನೇ ವೃದ್ಧಿಯಾಗುತ್ತಿದೆ ಸಾಲವು ಮಿತಿಮೀರಿದಾಗ ರೈತರು ತಮ್ಮ ಮನೆಮಠಗಳನ್ನು ಮಾರಿದರೂ ಸಾಲವನ್ನು ಪೂರ್ತಿಯಾಗಿ

| ಡಿಸ್ಟ್ರಿಕ್ಟಿನ ಹೆಸರು | ಒಂದು ಎಕರೆ ವರಮಾನ 1928ರಲ್ಲಿ | | | ಒಂದು ಎಕರೆ ವರಮಾನ 1930ರಲ್ಲಿ | | | ಒಂದು ಎಕರೆ ವರಮಾನ 1931ರಲ್ಲಿ | | |
|---|---|---|---|---|---|---|---|---|---|
| | ರೂ | ಆ | ಪೈ | ರೂ | ಆ | ಪೈ | ರೂ | ಆ | ಪೈ |
| ಅಮೃತಸರ .. | 64 | 5 | 5 | 27 | 12 | 0 | 7 | 15 | 2 |
| ಮುಲ್ತಾನ್ | 14 | 11 | 6 | 13 | 9 | 9 | 10 | 15 | 6 |
| ಜಲಂಧರ್ | 38 | 12 | 0 | 23 | 13 | 6 | 11 | 12 | 9 |
| ಲೂದಿಯಾನ | 21 | 3 | 3 | 12 | 4 | 4 | 3 | 7 | 2* |

ತೀರಿಸಲಾಗದೆ ಭಿಕಾರಿಗಳಾಗಿ ಕೂಲಿ ಕೆಲಸಗಳನ್ನು ಮಾಡಿ, ಹೊಟ್ಟೆ ತುಂಬ ಆಹಾರವಿಲ್ಲದೆ ಅನೇಕ ಕಷ್ಟಗಳಿಗೆ ಸಿಕ್ಕಿ ನರಳಬೇಕಾಗುತ್ತದೆ ಹೀಗೆ ಎಷ್ಟೋ ಮಂದಿ ನರಳುತ್ತಲೂ ಇದ್ದಾರೆ

ಮೇಲ್ಕಂಡ ಅಂಕಿಗಳಿಂದ ಪಂಜಾಬಿನ ರೈತರ ಸ್ಥಿತಿಯನ್ನು ವಿಚಾರಮಾಡಿಯಾಯಿತು ಇನ್ನು ಬಂಗಾಳಾ ರೈತರ ಪರಿಸ್ಥಿತಿಯನ್ನು ನೋಡೋಣ

ಬಂಗಾಳಾ ದೇಶದ ರೈತರ ಭೀಕರ ದೃಶ್ಯವನ್ನು ಅಂಕಿಗಳ ಸಹಾಯ ದಿಂದ ನಾವು ತಿಳಿಯಬಹುದು ಅಲ್ಲಿಯ ಬಡತನ, ಕೀಳು ದರ್ಜೆಯ ಜೀವನ, ರೈತರ ಕಷ್ಟ—ಇವುಗಳೆಲ್ಲಾ ಈ ಕೆಳಗಿನ ಅಂಕಿಗಳಿಂದ ನಮಗೆ ಚೆನ್ನಾಗಿ ತಿಳಿಯುವುದು —

| | 1928ನೆಯ ಇಸವಿ | 1933ನೆಯ ಇಸವಿ |
|---|---|---|
| ಬಂಕೂರಾ ಡಿಸ್ಟ್ರಿಕ್ಟಿನ ಒಬ್ಬ ರೈತನ | ರೂ | ರೂ |
| ಸರಾಸರಿ ವರಮಾನ | 146 | 86 |
| ಅವನ ಸಂಸಾರದ ಸರಾಸರಿ ಖರ್ಚು | 267 | 169 |
| ನಷ್ಟಾಂಶ | 121 | 83 |
| ಸಂಸಾರದ ಸಾಲ | 232 | 304 |

* "Farm Accounts in the Punjab", by Sardar Kartar Singh, p. 52

| | 1928ನೆಯ ಇಸವಿ | 1933ನೆಯ ಇಸವಿ |
|---|---|---|
| ಫರೀದಪುರ್ ಡಿಸ್ಟ್ರಿಕ್ಟಿನಲ್ಲಿ ಒಬ್ಬ ರೈತನ ಸರಾಸರಿ ವಾರ್ಷಿಕ ವರಮಾನ | ರೂ 207 | ರೂ 105 |
| ಅವನ ವಾರ್ಷಿಕ ಸರಾಸರಿ ಖರ್ಚು | 198 | 118 |
| ನಷ್ಟಾಂಶ | | 13 |
| ಅವನ ಸಂಸಾರದ ಸಾಲ | 148 | 217* |

೧೯೨೮ನೆಯ ಇಸವಿಯಿಂದ ಈಚೆಗೆ ನಮ್ಮ ರೈತರ ವರಮಾನವು ದಿನೇ ದಿನೇ ಕಡಿಮೆಯಾಗುತ್ತಿರುವುದಲ್ಲದೆ, ಅವರು ಬೆಳೆದ ದವಸ ಧಾನ್ಯಗಳ ಬೆಲೆಯೂ ಕೂಡ ಸುಮಾರು ಶೇ ೫೦ರಷ್ಟು ಕಡಿಮೆಯಾಗಿದೆ ಎಂಬ ಅಂಶವು ಸ್ಪಷ್ಟವಾಯಿತು ಆದರೆ ಅವರ ಜಮೀನಿನ ಕಂದಾಯ ಕಡಿಮೆಯಾಗಿಲ್ಲ ಜಮೀನಿನ ಗೇಣಿ ಕಡಿಮೆಯಾಗಿಲ್ಲ ಇವುಗಳೆಲ್ಲಾ ಒಟ್ಟಿಗೆ ಸೇರಿ ರೈತರ ಸ್ಥಿತಿಯು ದಿನೇ ದಿನೇ ಕಠಿಣವಾಗುತ್ತಿದೆ ರೈತರ ಮೇಲೆ ಉಂಟಾಗಿರುವ ಪರಿಣಾಮವನ್ನು ಒಬ್ಬ ಅರ್ಥಶಾಸ್ತ್ರಜ್ಞರು ಈ ರೀತಿ ವರ್ಣಿಸಿದ್ದಾರೆ —

"ನಮ್ಮ ದೇಶದ ರೈತರಿಗೆ ಹೊಟ್ಟೆ ತುಂಬ ಆಹಾರವಿಲ್ಲ ಇದರ ಫಲವಾಗಿ ಪ್ರತಿ ಮೂರು ಜನಗಳಲ್ಲಿ ಒಬ್ಬನು ಹಸಿದಿರಬೇಕಾಗುವುದು ಅಥವಾ ಮೂವರೂ ತಮ್ಮ ಮೂರು ಊಟದಲ್ಲಿ ಒಂದು ಊಟವಿಲ್ಲದೆ ಹಸಿದಿರಬೇಕಾಗುವುದು ಯಾವಾಗ ಹೊಟ್ಟೆ ತುಂಬ ಆಹಾರವಿರುವುದಿಲ್ಲವೋ, ಆಗ ಅವರ ಶಕ್ತಿ ಕುಂದುತ್ತಾ ಬಂದು ಕೃಶರಾಗಿ ಕೆಲಸಮಾಡುವುದಕ್ಕೆ ಅನರ್ಹರಾಗುತ್ತಾರೆ ಮೊದಲೇ ಬಹಳ ಕೀಳು ದರ್ಜೆಯ ಜೀವನದಿಂದ ಕಷ್ಟಪಡುತ್ತಿರುವ ನಮ್ಮ ರೈತರು ನಿತ್ಯಜೀವನದ ಅತಿ ಆವಶ್ಯಕಗಳಾದ ಸೌಕರ್ಯಗಳು ಕೂಡ ಇಲ್ಲದೆ ಉತ್ಸಾಹ ಶಕ್ತಿಗಳನ್ನು ಕಳೆದುಕೊಳ್ಳುತ್ತಿದ್ದಾರೆ" †

ಸಾಮಾನ್ಯವಾಗಿ ಒಂದು ದೇಶದ ಐಶ್ವರ್ಯವನ್ನು ಅಲ್ಲಿಯ ಜನರ

* "Report of the Bengal Board of Economic Enquiry", p 33

† "Wealth and Taxable Capacity of India", by K T Shah, p 252

ವರಮಾನದಿಂದ ನಿರ್ಧರಿಸುವುದು ವಾಡಿಕೆಯಾಗಿದೆ ಅದರಂತೆ ಭಾರತೀಯರ ವರಮಾನವನ್ನು ಇತರ ದೇಶೀಯರ ವರಮಾನದೊಡನೆ ಹೋಲಿಸಿದರೆ, ನಮ್ಮವರ ಆರ್ಥಿಕ ದುರವಸ್ಥೆಯು ಚೆನ್ನಾಗಿ ತಿಳಿದು ಬರುವುದು —

| ನಂ | ದೇಶದ ಹೆಸರು | ತಲೆಯೊಂದಕ್ಕೆ ಸರಾಸರಿ ವಾರ್ಷಿಕ ವರಮಾನ |
|---|---|---|
| 1 | ಇಂಡಿಯಾ | 60 ರೂಪಾಯಿ* |
| 2 | ಜಪಾನ್ | 271 ,, |
| 3 | ಜರ್ಮನಿ | 634 ,, |
| 4 | ಫ್ರಾನ್ಸ್ | 636 ,, |
| 5 | ಇಂಗ್ಲೆಂಡ್ | 1,092 ,, |
| 6 | ಕಾನಡಾ | 1,269 ,, |
| 7 | ಅಮೇರಿಕಾ | 2,053 ,, |

ಇದರಂತೆಯೇ ಕೆಲವು ಪ್ರಸಿದ್ಧ ದೇಶಗಳ ಐಶ್ವರ್ಯವನ್ನೂ ಕೂಡ ನಿರ್ಧರಿಸುವ ಪ್ರಯತ್ನವನ್ನು ಅರ್ಥಶಾಸ್ತ್ರಜ್ಞರು ಮಾಡಿದ್ದಾರೆ ಅದರಂತೆ ಪ್ರಪಂಚದ ಒಟ್ಟು ಐಶ್ವರ್ಯವು ೨,೭೭,೭೭೭ಕೋಟಿ ರೂಪಾಯಿಗಳೆಂದೂ, ಅದರಲ್ಲಿ ಇಂಗ್ಲೆಂಡ್ ದೇಶದ ಐಶ್ವರ್ಯವು ೨೯,೪೩೨ ಕೋಟಿ ರೂಪಾಯಿಗಳೆಂದೂ, ಅಮೇರಿಕಾ ದೇಶದ್ದು ೧,೧೨,೩೧೫ಕೋಟಿ ರೂಪಾಯಿಗಳೆಂದೂ, ಇಂಡಿಯಾ ದೇಶದಲ್ಲಿ ಮಾತ್ರ ೧೨,೦೦೦ ಕೋಟಿ ರೂಪಾಯಿಗಳ ಐಶ್ವರ್ಯವಿದೆಯೆಂದೂ ಗೊತ್ತುಮಾಡಿದ್ದಾರೆ ಪ್ರಪಂಚದ ಒಟ್ಟು ಜನಸಂಖ್ಯೆಯಲ್ಲಿ ಶೇ ೧೭ರಂತೆ ಇರುವ ಇಂಡಿಯಾ ದೇಶದಲ್ಲಿ ಪ್ರಪಂಚದ ಒಟ್ಟು ಐಶ್ವರ್ಯದ ಶೇ ೪ರಷ್ಟು ಇದ್ದರೆ, ಶೇ ೭ರಷ್ಟು ಪ್ರಜಾಸಂಖ್ಯೆಯುಳ್ಳ ಅಮೇರಿಕಾ ದೇಶವು ಒಟ್ಟು ಐಶ್ವರ್ಯದ ಶೇ ೪೦ರಷ್ಟನ್ನು ಹೊಂದಿದೆ ಹೀಗೆ ಯಾವ ರೀತಿಯಿಂದ ನಾವು ವಿಮರ್ಶೆಮಾಡಿದರೂ ಇಂಡಿಯಾ ದೇಶವು ಬಡತನದ ತವರುಮನೆ ಎಂದು ಹೇಳಬಹುದು

* ಡಾರ್ಲಿಂಗ್ ೪೦ ರೂಪಾಯಿಗಳೆಂದೂ, ಷಿರಾಸ್‌ರವರು ೧೧೬ ರೂಪಾಯಿಗಳೆಂದೂ, ಷಾ ಶಾಂಭಟ್ಟರವರು ೬೪ ರೂಪಾಯಿಗಳೆಂದೂ, ಬ್ಯಾಂಕಿಂಗ್ ಸಮಿತಿಯವರು ೪೭ ರೂಪಾಯಿಗಳೆಂದೂ ನಿರ್ಧರಿಸಿದ್ದಾರೆ

ನಮ್ಮ ರೈತರಿಗೆ ಸಾಲದ ಹೊರೆಯು ಅಪಾರವಾಗಿದೆ ಪಂಜಾಬು ದೇಶದಲ್ಲಿ ಪ್ರತಿಯೊಬ್ಬ ರೈತನಿಗೆ ತಲೆಯೊಂದಕ್ಕೆ ೬೦೦ ರೂಪಾಯಿಗಳ ಸಾಲವಿದೆಯೆಂದೂ, ಬೊಂಬಾಯಿ ಪ್ರಾಂತದಲ್ಲಿ ೩೨೪ ರೂಪಾಯಿಗಳು ಇದೆಯೆಂದೂ, ಸಿಂಧು ದೇಶದಲ್ಲಿ ೫೭೦ ರೂಪಾಯಿಗಳೆಂದೂ, ಮದ್ರಾಸಾಧಿಪತ್ಯದಲ್ಲಿ ೪೩೨ ರೂಪಾಯಿಗಳೆಂದೂ ಅರ್ಥಶಾಸ್ತ್ರಜ್ಞರು ಅಂದಾಜು ಮಾಡಿದ್ದಾರೆ ಒಟ್ಟು ಇಂಡಿಯಾ ದೇಶದ ರೈತನ ಸರಾಸರಿ ಸಾಲವು ೧೮೭ ರೂಪಾಯಿಗಳು ಇದೆ ಎಂಬದಾಗಿ ಕೇಂದ್ರ ಸರ್ಕಾರದ ವ್ಯವಸಾಯ ಪರಿಶೀಲನಾ ಸಮಿತಿಯ ಉಪಾಧ್ಯಕ್ಷರು ನಿರ್ಧರಿಸಿದ್ದಾರೆ ಅದೇ ರೀತಿ ಬಂಗಾಳಾ ದೇಶದಲ್ಲಿ ಕೆಲವು ಭಾಗದಲ್ಲಿ ಒಂದು ಸಂಸಾರಕ್ಕೆ ೨೩೫ ರೂಪಾಯಿಗಳಿವೆಯೆಂದೂ ಇನ್ನು ಕೆಲವುಕಡೆ ಇದಕ್ಕಿಂತ ಹೆಚ್ಚಾಗಿಯೇ ಇದೆಯೆಂದೂ ಅಂದಾಜು ಮಾಡಲಾಗಿದೆ ಒಟ್ಟಿನಲ್ಲಿ ರೈತರ ಆದಾಯವನ್ನೂ, ಅವರ ಸಾಲದ ಭಾರವನ್ನೂ ಹೋಲಿಸಿ ನೋಡಿದರೆ ಅಜಗಜಾಂತರವಾಗಿ ನಮಗೆ ಕಾಣುತ್ತದೆ ೪೨ ರೂಪಾಯಿಗಳ ಆದಾಯವೆಲ್ಲಿ, ೨೦೦ ರೂಪಾಯಿಗಳಿಗೆ ಮೇಲ್ಪಟ್ಟ ಸಾಲವೆಲ್ಲಿ, ಅಷ್ಟು ಹೆಚ್ಚಿನ ಸಾಲವನ್ನು ಇಷ್ಟು ಕಡಿಮೆ ಆದಾಯದಿಂದ ಅವರು ಹೇಗೆ ತೀರಿಸಬೇಕು

ಭರತಖಂಡವು ಹಳ್ಳಿಗಳ ದೇಶ ಶೇಕಡ ತೊಂಭತ್ತು ಜನಗಳು ಹಳ್ಳಿಗಳಲ್ಲೇ ವಾಸಮಾಡುತ್ತಿದ್ದಾರೆ ಅವರಿಗೆ ವ್ಯವಸಾಯವಲ್ಲದೆ ಬೇರೆ ಗತಿಯೇ ಇಲ್ಲ ವ್ಯವಸಾಯದಿಂದ ಸಾಕಾದಷ್ಟು ವರಮಾನವಿಲ್ಲದೆ ಸಾಲವಾಗುತ್ತಾ ಬಂದು ಈಗ ಸಾಲವು ಮಿತಿಮೀರಿದೆ ಈ ಸಾಲವು ಅವರ ಕುತ್ತಿಗೆಗೆ ಉರಲುಹಾಕಿದಂತಾಗಿ, ಅವರನ್ನು ಎತ್ತ ಕಡೆ ಹೋಗುವುದಕ್ಕೂ ಬಿಡುತ್ತಿಲ್ಲ ಈ ಅವಸ್ಥೆಯಲ್ಲಿ ಅವರಿಗೆ ಉತ್ಸಾಹವಿಲ್ಲ ಸ್ವಾತಂತ್ರ್ಯವಿಲ್ಲ, ಸೌಖ್ಯವೂ ಇಲ್ಲ ಸಾಲಗಾರರ ಗುಲಾಮರಾಗಿ ತಮ್ಮ ವರಮಾನದ ಹೆಚ್ಚು ಭಾಗವನ್ನು ಸಾಲಕ್ಕೆ ತೆರುತ್ತಿದ್ದಾರೆ ಅವರ ಮುಖ್ಯ ವೃತ್ತಿಯಾದ ವ್ಯವಸಾಯಕ್ಕೆ ಈ ಸಾಲದ ಮಹಾಭಾರವು ಮೃತ್ಯುವಾಗುತ್ತಿದೆ

ನಮ್ಮ ದೇಶದ ರೈತರ ಸಾಲವನ್ನು ನಿರ್ಧರಿಸುವುದಕ್ಕೆ ಅನೇಕ ಪ್ರಯತ್ನಗಳು ನಡೆದಿವೆ, ನಡೆಯುತ್ತಲೂ ಇದೆ ೧೮೭೫ನೆಯ ಇಸವಿಯ

ಡೆಕ್ಕನ್ ದೇಶದ ರೈತರ ಸಮಿತಿಯವರು ಪ್ರತಿಯೊಂದು ಹಿಡುವಳಿದಾರನಿಗೂ ಸರಾಸರಿ ೩೭೧ ರೂಪಾಯಿಗಳು ಸಾಲವಿದೆಯೆಂದೂ, ೧೮೮೦ ಮತ್ತು ೧೯೦೧ರಲ್ಲಿ ನಿಯಮಿಸಲ್ಪಟ್ಟ ಕ್ಷಾಮನಿವಾರಣಾ ಸಮಿತಿಯವರು ಭರತಖಂಡದ ರೈತರಲ್ಲಿ ಸುಮಾರು ೭೫ರಷ್ಟು ಮಂದಿ ಸಾಲದ ಭಾರದಿಂದ ನರಳುತ್ತಿದ್ದಾರೆಂದೂ, ಕ್ಷಾಮಕ್ಕೆ ರೈತರ ಸಾಲವೇ ಮುಖ್ಯ ಕಾರಣವೆಂದೂ ಅಭಿಪ್ರಾಯಪಟ್ಟಿದ್ದಾರೆ ೧೯೧೩ರಲ್ಲಿ ಬರೋಡಾ ಸಂಸ್ಥಾನದ ರೈತರ ಸಾಲ ವಿಚಾರಣಾ ಸಮಿತಿಯವರು ರೈತರ ಸಾಲವು ದಿನೇ ದಿನೇ ಹೆಚ್ಚುತ್ತಾ ಇದೆ ಎಂಬದಾಗಿ ಅಂಕಿ ಆಧಾರಗಳೊಡನೆ ನಿರ್ಧರಿಸಿದ್ದಾರೆ ಹಾಗೆಯೇ ಮದರಾಸಾಧಿಪತ್ಯದಲ್ಲಿ ಫ್ರೆಡ್ರಿಕ್ ನಿಕಲ್ಸನ್‌ರವರೂ, ಬ್ರಿಟಿಷ್ ಇಂಡಿಯಾದಲ್ಲಿ ಎಡ್ವರ್ಡ್ ಮಾಕ್ಲಗನ್‌ರವರೂ, ಪಂಜಾಬಿನಲ್ಲಿ ಡಾರ್ಲಿಂಗ್‌ರವರೂ ರೈತರ ಆರ್ಥಿಕ ವಿಚಾರಣೆಯಿಂದ ಸಾಲದ ಹೊರೆಯ ಪ್ರಮಾಣವನ್ನು ನಿರ್ಧರಿಸಿದ್ದಾರೆ ೧೯೩೦ರಲ್ಲಿ ಪ್ರಾಂತಗಳ ಬ್ಯಾಂಕಿಂಗ್ ಸಮಿತಿಯವರು ಬೇರೆ ಬೇರೆ ಪ್ರಾಂತಗಳ ರೈತರ ಸಾಲದ ವಿಚಾರಣೆಯಿಂದ ಇಂಡಿಯಾ ದೇಶದ ಒಟ್ಟು ಸಾಲವು ೯೦೦ ಕೋಟಿ ರೂಪಾಯಿಗಳಿಗೆ ಮೀರಿದೆಯೆಂಬದಾಗಿ ಅಭಿಪ್ರಾಯಪಟ್ಟಿದ್ದಾರೆ ಈ ಕೆಳಗಿನ ಅಂಕಿಗಳು ಕೆಲವು ಪ್ರಾಂತದ ರೈತರ ಸಾಲವನ್ನು ತೋರಿಸುತ್ತವೆ —

| ಪ್ರಾಂತದ ಹೆಸರು | ಒಟ್ಟು ಸಾಲ | ಒಬ್ಬ ರೈತನ ಸರಾಸರಿ ಸಾಲ | ಒಂದು ಎಕರೆ ಜಮೀನಿನ ಸರಾಸರಿ ಸಾಲ |
| --- | --- | --- | --- |
| ಮದರಾಸು | 150 ಕೋಟಿ ರೂ | 50 ರೂ. | 44 ರೂ |
| ಬೊಂಬಾಯಿ | 81 ,, | 49 ,, | 25 ,, |
| ಮಧ್ಯಪ್ರಾಂತ | 36 ,, | 30 ,, | 14 ,, |
| ಬಿಹಾರ, ಒರಿಸ್ಸ | 155 ,, | 31 ,, | 63 ,, |
| ಬಂಗಾಳ | 100 ,, | 31 ,, | 43 ,, |
| ಸಂಯುಕ್ತಪ್ರಾಂತ | 124 ,, | 36 ,, | 36 ,, |
| ಪಂಜಾಬು | 135 ,, | 92 ,, | 50 ,, * |

* "Indian Peasant and his environment", by N Gangule, p 79

ರೈತರ ಸಾಲವು ದಿನೇ ದಿನೇ ವೃದ್ಧಿಯಾಗುತ್ತಿದೆ ಪಂಜಾಬು ದೇಶದ ವಿಚಾರಣಾ ಸಮಿತಿಯವರು ಅಲ್ಲಿಯ ರೈತರ ಸಾಲವು ೧೯೨೧ನೆಯ ಇಸವಿಯಲ್ಲಿ ೯೦ ಕೋಟಿ ರೂಪಾಯಿಗಳು ಇದ್ದಿತೆಂದೂ, ೧೯೨೯ರಲ್ಲಿ ಇದು ೧೩೫ ಕೋಟಿ ರೂಪಾಯಿಗಳಿಗೆ ಏರಿತೆಂದೂ ಹೇಳಿದ್ದಾರೆ ಪ್ರಪಂಚದ ಎಲ್ಲಾ ಭಾಗದಲ್ಲಿಯೂ ಉಂಟಾಗಿರುವ ಆರ್ಥಿಕ ಮುಗ್ಗಟ್ಟಿನ ದೆಸೆಯಿಂದ ೧೯೨೯ರಿಂದ ೧೯೩೭ರೊಳಗೆ ಈ ಸಾಲವು ದ್ವಿಗುಣವಾಗಿದೆ ಎಂಬದಾಗಿ ಅಭಿಪ್ರಾಯಪಡಲಾಗಿದೆ ೧೯೨೮ನ್ನೆಯ ಇಸವಿಯಲ್ಲಿ ಭರತಖಂಡದ ಒಟ್ಟು ಸಾಲವು ೯೦೦ ಕೋಟಿ ರೂಪಾಯಿಗಳಾಗಿತ್ತೆಂದು ಬ್ಯಾಂಕಿಂಗ್ ಸಮಿತಿಯವರು ಹೇಳಿದ್ದಾರೆ ಇದು ೧೯೩೭ನೆಯ ಇಸವಿಯಲ್ಲಿ ೧,೮೦೦ ಕೋಟಿ ರೂಪಾಯಿಗಳಿಗೆ ಏರಿದೆ ಎಂಬದಾಗಿ ಲಾಲಾ ರಾಮಶರಣ್ ದಾಸರು ಇಂಡಿಯಾ ಲೆಜಿಸ್ಲೆಟಿವ್ ಅಸೆಂಬ್ಲಿಯ ೧೯೩೭ನೆಯ ಮಾರ್ಚ್ ಅಧಿವೇಶನದಲ್ಲಿ ಹೇಳಿದ್ದಾರೆ "ಇಂಡಿಯಾ ದೇಶದಲ್ಲಿ ರೈತರು ಸಾಹುಕಾರರ ಬಲವಾದ ಸಂಕೋಲೆಗಳಲ್ಲಿ ಬಿಗಿಯಲ್ಪಟ್ಟು ಬಂದಿಗಳಾಗಿದ್ದಾರೆ ವ್ಯರ್ಥವಾದ ಸಾಲದಿಂದ ನರಳುತ್ತಾ ಅವರು ಮುಂದುವರಿಯುವುದಕ್ಕೆ ಅವಕಾಶವಿಲ್ಲವಾಗಿದೆ" ಎಂಬದಾಗಿ ಹೆನ್ರಿ ಉಲ್ಫ್ ಎಂಬವರು ಬರೆದಿದ್ದಾರೆ

ನಮ್ಮ ದೇಶದ ರೈತರ ಸಾಲಕ್ಕೆ ಅನೇಕ ಕಾರಣಗಳಿವೆ ಅವುಗಳಲ್ಲಿ ಕೆಲವು ಮುಖ್ಯ ಕಾರಣಗಳನ್ನು ನಾವು ಇಲ್ಲಿ ವಿವರಿಸಬಹುದು ವ್ಯವಸಾಯವೇ ಮುಖ್ಯ ವೃತ್ತಿಯಾಗಿ ಉಳ್ಳ ನಮ್ಮ ರೈತರಿಗೆ ಅದರಿಂದ ಸಾಕಾದಷ್ಟು ವರಮಾನ ಸಿಕ್ಕುತ್ತಿಲ್ಲ ಇದಕ್ಕೆ ಅವರ ಪುರಾತನ ವ್ಯವಸಾಯಕ್ರಮ ಮತ್ತು ಜಮೀನು ಸಣ್ಣ ಸಣ್ಣ ತಾಕುಗಳಾಗಿ ಚದುರಿ ಹೋಗುತ್ತಿರುವುದೂ ಕಾರಣಗಳಾಗಿವೆ ಸಕಾಲಕ್ಕೆ ಮಳೆ ಬಂದರೇನೇ ನಮ್ಮ ದೇಶದಲ್ಲಿ ವ್ಯವಸಾಯವು ಸಾಗುವುದು ಆದರೆ ಮಳೆಯು ಸಕಾಲದಲ್ಲಿ ಬರುವುದು ಅಪರೂಪ ನಮ್ಮ ದೇಶದ ವರ್ಷಋತುವಿನ ವರದಿಯನ್ನು ನಾವು ವಿಚಾರಮಾಡಿದರೆ ಪ್ರತಿ ಐದು ವರ್ಷದಲ್ಲಿ ಮೂರು ಮತ್ತು ಐದನೇ ವರ್ಷಗಳ ಮಳೆಯ ಗೋಳು ನಮಗೆ ಗೊತ್ತಾಗುತ್ತದೆ. ಸಾಕಾದಷ್ಟು ಮಳೆ ಸಕಾಲದಲ್ಲಿ ಆದರೂ, ರೈತರು ಸಂಸಾರ ನಡೆಸುವುದು ಕಷ್ಟವಾಗಿರುವಾಗ ಮಳೆ ಇಲ್ಲದಿದ್ದರೆ ಅವರಿಗೆ ಸಾಲದ ಹೊರತು, ಬೇರೆ

ಗತಿಯೇ ಇಲ್ಲ. ರೈತರ ವ್ಯವಸಾಯಕ್ಕೆ ಸಹಾಯಕವಾಗಿರುವ ಜಾನುವಾರುಗಳು ಸರಿಯಾದ ಸ್ಥಿತಿಯಲ್ಲಿ ಇಲ್ಲ ಅವುಗಳಿಗೆ ರೋಗಾದಿಗಳು ಬರುತ್ತಲೇ ಇರುತ್ತವೆ ಅವು ಸತ್ತರೆ, ಬೇರೆ ಕೊಳ್ಳುವುದಕ್ಕೆ ರೈತರು ಸಾಲಮಾಡಬೇಕು ಅವುಗಳಿಲ್ಲದೆ ಅವರ ವ್ಯವಸಾಯ ನಡೆಯುವಹಾಗಿಲ್ಲ

ಪೂರ್ವಕಾಲದಲ್ಲಿ ನಮ್ಮ ದೇಶದ ರೈತರು ವ್ಯವಸಾಯದ ಜೊತೆಯಲ್ಲಿ, ಅನೇಕ ಉಪಕಸಬುಗಳನ್ನಿಟ್ಟುಕೊಂಡು ಸಂಪಾದನೆ ಮಾಡುತ್ತಿದ್ದರು ಈಚೆಗೆ ಅನೇಕ ಕಾರಣಗಳಿಂದ ಅವೆಲ್ಲಾ ಕ್ಷೀಣವಾಗಿ ಅವರ ಸಂಪಾದನೆಯೂ ಕಡಿಮೆಯಾಗಿ, ಸಾಲ ಹೆಚ್ಚುತ್ತಾ ಇದೆ ನಮ್ಮ ರೈತರಿಗೆ ಕೋರ್ಟು, ಕಛೇರಿ, ವ್ಯವಹಾರವೆಂದರೆ ಆಸೆ ಅವುಗಳಿಂದುಂಟಾಗುತ್ತಿರುವ ದುಷ್ಪರಿಣಾಮಗಳು ಅವರನ್ನು ಅಷ್ಟು ಹತೋಟಿಯಲ್ಲಿಟ್ಟಿಲ್ಲ ಸಾಲಮಾಡಿಯಾದರೂ, ವ್ಯವಹಾರಗಳನ್ನು ನಡೆಸಿ, ಮನೆ ಹಾಳುಮಾಡಿಕೊಳ್ಳುತ್ತಾರೆಯೇ ಹೊರತು ದೂರದೃಷ್ಟಿಯುಳ್ಳವರಾಗಿ ರಾಜಿಯನ್ನು ಮಾಡಿಕೊಳ್ಳುವುದಿಲ್ಲ ಇದಕ್ಕೆ ಅವರ ಹಟಮಾರಿತನವೇ ಮುಖ್ಯ ಕಾರಣ ರೈತರು ನಿತ್ಯಜೀವನದಲ್ಲಿ ಮಿತವ್ಯಯದಿಂದ ಇದ್ದರೂ, ಮದುವೆ, ಮುಂಜಿ, ಉತ್ತರಕ್ರಿಯೆ, ಮುಂತಾದ ಸಮಯಗಳಲ್ಲಿ ಬಹಳ ದುಂದುವೆಚ್ಚ ಮಾಡುತ್ತಾರೆ "ಹಾಸಿಗೆ ಇದ್ದಷ್ಟು ಕಾಲು ಚಾಚು" ಎಂಬ ನಿಯಮವು ಅವರಿಗೆ ತಿಳಿದೇ ಇಲ್ಲ ಸಮಾಜದಲ್ಲಿ ಗೌರವವನ್ನು ಸಂಪಾದನೆಮಾಡಬೇಕೆಂಬ ಉದ್ದೇಶದಿಂದಲೋ, ಡಂಭಾಚಾರ, ಜನ ಮೆಚ್ಚಿಕೆ, ಮುಂತಾದುವುಗಳಿಗೆ ಕಟ್ಟುಬಿದ್ದು ಹೆಚ್ಚು ಹಣ ಖರ್ಚುಮಾಡಬೇಕೆಂಬ ಉದ್ದೇಶದಿಂದಲೋ, ಅಪಾರ ಹಣವನ್ನು ವೆಚ್ಚಮಾಡಿ ಅನಂತರ ಇಂತಹ ನಿಷ್ಫಲವಾದ ಸಾಲವನ್ನು ತೀರಿಸಲಾರದೆ ನರಳುತ್ತಾರೆ

ಬಹುಕಾಲದಿಂದಲೂ ನಮ್ಮ ದೇಶದಲ್ಲಿ ಲೇವಾದೇವಿ ಬಳಕೆಯಲ್ಲಿದೆ ಮೊದಮೊದಲು ಸಾಹುಕಾರರು ಸಮಾಜದ ಕಟ್ಟುಪಾಡಿಗೆ ಒಳಗಾಗಿ ಸಾಲದ ಹಣದಮೇಲೆ ಹೆಚ್ಚು ಬಡ್ಡಿ ಹಾಕುತ್ತಿರಲಿಲ್ಲ. ಗ್ರಾಮಗಳ ಪಂಚಾಯಿತಿ ತೀರ್ಮಾನಕ್ಕೆ ಬದ್ಧರಾದ ಸಾಹುಕಾರರ ಸ್ವೇಚ್ಛಾಪ್ರವರ್ತನೆಗೆ ಅಷ್ಟು ಹೆಚ್ಚು ಅವಕಾಶವಿರುತ್ತಿರಲಿಲ್ಲ. ಬ್ರಿಟಿಷ್ ರಾಜ್ಯಸ್ಥಾಪನೆಯಾದ ಮೇಲೆ ಎಲ್ಲೆಲ್ಲೂ ಕೋರ್ಟು, ಕಛೇರಿಗಳು ಪ್ರಾರಂಭವಾದವು. ಹಳ್ಳಿಗಳ

ವ್ಯವಹಾರವೆಲ್ಲಾ ಅಲ್ಲಿ ತೀರ್ಮಾನವಾಗಬೇಕಾದ ಸನ್ನಿವೇಶವುಂ ದುದರಿಂದ, ಸಾಹುಕಾರರು ಸಾಲಗಾರರಿಂದ ಚಕ್ರಬಡ್ಡಿಯನ್ನು ವಸೂ ಮಾಡುವ ಅವಕಾಶ ಒದಗಿತು ಇಂತಹ ಸಂದರ್ಭದಲ್ಲಿ ಸಾಹುಕಾರ ದಯಾದಾಕ್ಷಿಣ್ಯಗಳಿಲ್ಲದೆ ರೈತರಿಗೆ ಕಿರುಕುಳಕೊಟ್ಟು, ಅವರ ಮ ಮರಗಳನ್ನು ಮಾರಿಸಿ, ಹಣಕ್ಕೆ ಹಣ ವಸೂಲಿಮಾಡುತ್ತಿದ್ದಾರೆ

ಸಾಲಗಾರರು ಸಾಹುಕಾರರ ಮನೆಯಲ್ಲಿ ದುಡಿಯುತ್ತಿದ್ದಾ ಕೆಲವುವೇಳೆ ಸಾಹುಕಾರರು ಹಣವನ್ನು ಸಾಲಕೊಡುವಾಗ ಬಡ್ಡಿಯನ ಮೊದಲೇ ಕಟಾಯಿಸಿ ಉಳಿದ ಹಣವನ್ನು ಕೊಡುತ್ತಾರೆ. ಇನ್ನು ಕೆಲ ವೇಳೆ ಅಸಲನ್ನು ವಸೂಲುಮಾಡುವಾಗ ಪುನಃ ಬಡ್ಡಿಯನ್ನು ವಸೂಲ ಮಾಡುತ್ತಾರೆ ಹೀಗೆ ಅನೇಕ ರೀತಿಯಲ್ಲಿ ತಿಳಿವಳಿಕೆಯಿಲ್ಲದ ರೈತರು ಸಾಲದ ದೆಸೆಯಿಂದ ಕಷ್ಟಪಡುತ್ತಿದ್ದಾರೆ ಈ ಕೆಳಗಿನ ಅಂಕಿಗಳು ರೈತರು ಕೊಡುತ್ತಿರುವ ಬಡ್ಡಿ ದರವನ್ನು ತೋರಿಸುತ್ತವೆ —

| ನಂ | ಪ್ರಾಂತದ ಹೆಸರು | ಬಡ್ಡಿ ಶೇಕಡ ದರ |
|---|---|---|
| 1 | ಮದರಾಸು * | 25 ರಿಂದ 50 |
| 2 | ಬೊಂಬಾಯಿ | 12 ,, 50 |
| 3 | ಬಂಗಾಳಾ | 10 ,, 37½ |
| 4 | ಬಿಹಾರ ಒರಿಸ್ಸ | 25 ,, 50 |
| 5 | ಮಧ್ಯಪ್ರಾಂತ | 25 ,, 50 |
| 6 | ಪಂಜಾಬು | 13½ ಸೆಕ್ಯೂರಿಟಿ ಸಾಲಕ್ಕೆ 75–150 ಸೆಕ್ಯೂರಿಟಿ ಇಲ್ಲದ್ದಕ್ಕೆ |
| 7 | ಸಂಯುಕ್ತ ಪ್ರಾಂತ | 18 37½ |

ಈಗಿನ ಸಂದರ್ಭದಲ್ಲಿ ನಮ್ಮ ರೈತರಿಗೆ ಸಾಹುಕಾರನ ಸಹಾಯ ವಿಲ್ಲದೆ ನಿರ್ವಾಹವಿಲ್ಲ ಅವರಿಗೆ ಹಣವನ್ನು ಸಕಾಲಕ್ಕೆ ಒದಗಿಸುವ ಸಂಸ್ಥೆಗಳು ಸ್ಥಾಪಿಸಲ್ಪಡುವವರೆಗೂ ಸಾಹುಕಾರರಿದ್ದೇ ಇರಬೇಕು ನಮ್ಮ ರೈತರು ಅನೇಕವೇಳೆ ಸಾಲವನ್ನು ಸಕಾಲದಲ್ಲಿ ಪಾವತಿ ಮಾಡದೆ,

* "Central Banking Enquiry Committee", p 30

ಸಾಹುಕಾರರನ್ನು ಕಷ್ಟಕ್ಕೆ ಗುರಿಪಡಿಸುತ್ತಾರೆ ಅವರ ಅನಿವಾರ್ಯ ಕಷ್ಟಗಳಿಂದ ಇದು ನಡೆಯಬಹುದು ಈಗಲೂ ಎಷ್ಟೊ ಕಡೆಗಳಲ್ಲಿ ಪ್ರಯೋಜನಕಾರಿ ಸಂಸ್ಥೆಗಳ ಸಾಲವನ್ನೂ ತೀರಿಸುವುದಕ್ಕೆ ಕೂಡ, ರೈತರು ಸಾಹುಕಾರರಿಂದ ಹಣವನ್ನು ಸಾಲ ತೆಗೆದುಕೊಳ್ಳುತ್ತಿದ್ದಾರೆ "ನಮ್ಮ ರೈತರ ಸಾಲವು ದಿನೇ ದಿನೇ ಹೆಚ್ಚುತ್ತಿರುವುದಕ್ಕೆ ಅವರು ತೆರತಕ್ಕ ಹೆಚ್ಚಿನ ಬಡ್ಡಿ ದರವೇ ಮುಖ್ಯ ಕಾರಣ ಈ ದರವನ್ನು ಯಾವ ಕಾರಣ ದಿಂದಲಾದರೂ ತಗ್ಗಿಸಲೇಬೇಕು"* ಎಂಬದಾಗಿ ಬಿಹಾರ ದೇಶದ ಬ್ಯಾಂಕಿಂಗ್ ಸಮಿತಿಯವರು ಹೇಳಿದ್ದಾರೆ

ರೈತರ ಸಾಲಕ್ಕೆ ಪಿತ್ರಾರ್ಜಿತವಾದ ಸಾಲವು ಅತಿಮುಖ್ಯವಾದ ಕಾರಣವಾಗಿದೆ ಭರತಖಂಡದಲ್ಲಿ ತಂದೆಯಾದವನು ಮಗನಿಗೆ ಆಸ್ತಿ ಇಡುವ ಬದಲು ಹೆಚ್ಚಾದ ಸಾಲವನ್ನೇ ಆಸ್ತಿಯಾಗಿಟ್ಟು ಸಾಯುವುದು ವಾಡಿಕೆ ತಂದೆಯು ಮಾಡಿದ ಸಾಲವನ್ನು ಮಗನು ತೀರಿಸುವುದು ಅವನ ಪವಿತ್ರ ಕರ್ತವ್ಯವೆಂದೂ, ಹಾಗೆ ಅವನು ತೀರಿಸದಿದ್ದರೆ ಋಣ ಮುಕ್ತನಾಗದೆ ಸದ್ಗತಿಯುಂಟಾಗುವುದಿಲ್ಲವೆಂದೂ ನಮ್ಮ ಹಿಂದುಗಳ ಭಾವನೆ ಮಗನು ತನ್ನ ಭಾಗಕ್ಕೆ ಬಂದ ಆಸ್ತಿಯ ಬೆಲೆಯನ್ನೂ, ತಾನು ತೀರಿಸತಕ್ಕ ಸಾಲದ ಹೊರೆಯನ್ನೂ ವಿಚಾರಮಾಡುವುದೇ ಇಲ್ಲ ಹೀಗೆ ತನಗೆ ಸಂಬಂಧವೇ ಇಲ್ಲದಿರತಕ್ಕ ಸಾಲದ ಸಂಕೋಲೆಗಳಿಗೆ ಸಿಕ್ಕಿ ನಮ್ಮ ರೈತನು ಹೆಚ್ಚು ಬಡ್ಡಿ ತೆರುತ್ತಾ ನರಳುತ್ತಿದ್ದಾನೆ ಮೊದಲೇ ನಮ್ಮ ರೈತರಿಗಿರುವ ಆಸ್ತಿಯ ಸ್ವಲ್ಪ ಅದರಲ್ಲಿಯೂ ಒಬ್ಬನಿಗೆ ೪–೫ ಜನ ಮಕ್ಕಳಾದರೆ ಅವನ ಆಸ್ತಿಯು ೪–೫ ಭಾಗಗಳಾಗಬೇಕು ಒಟ್ಟು ಆಸ್ತಿಯು ಉಂಡೆಯಾಗಿದ್ದಾಗ ಉಂಟಾಗುತ್ತಿದ್ದ ಹುಟ್ಟುವಳಿಯು ಭಾಗ ವಾದಮೇಲೆ ಕಡಿಮೆಯಾಗುತ್ತದೆ ಹುಟ್ಟುವಳಿ ಯಾವಾಗ ಕಡಿಮೆ ಯಾಗುತ್ತದೋ, ಆಗ ರೈತರು ತಮ್ಮ ನಿತ್ಯಜೀವನಕ್ಕೆ ಕೂಡ ಸಾಲ ಮಾಡಬೇಕಾಗುವುದು.

ಬ್ರಿಟಿಷರ ಆಳ್ವಿಕೆಯು ನಮ್ಮ ದೇಶದಲ್ಲಿ ಪ್ರಾರಂಭವಾದಮೇಲೆ ನಮ್ಮ ರೈತರ ಜೀವನದಲ್ಲಿ ಅನೇಕ ಬದಲಾವಣೆಗಳಾಗುತ್ತಾ ಬಂದಿವೆ

* "Report of the Bihar Banking Committee", p 55

ದೇಶದಲ್ಲಿ ರೈಲು, ಮೋಟಾರು ಮುಂತಾದ ಪ್ರಯಾಣ ಸೌಕರ್ಯಗಳು ಹೆಚ್ಚಿ, ರೈತರಿಗೆ ಸಾಲಕ್ಕೆ ಅನುಕೂಲವಾದ ಸನ್ನಿವೇಶಗಳನ್ನು ಕಲ್ಪಿಸಿದಂತಾಗಿದೆ ನಮ್ಮ ರೈತರು ದೊಡ್ಡ ದೊಡ್ಡ ಪಟ್ಟಣಗಳಿಗೆ ಹೋಗುವುದೂ ಹೆಚ್ಚಾಗುತ್ತಾ ಇದೆ ಅಲ್ಲಿಗೆ ಹೋದಾಗ ನಾಟಕ, ಸಿನಿಮಾ, ಡಂಭಾಚಾರದ ಬಟ್ಟೆ, ಇವೇ ಮುಂತಾದ ಭೋಗವಿಲಾಸಗಳಿಗೆ ನಮ್ಮ ರೈತರು ಹಚ್ಚು ದುಡ್ಡು ಖರ್ಚುಮಾಡುವುದೂ ವಾಡಿಕೆಯಾಗುತ್ತಾ ಇದೆ ಅವರು ಖರ್ಚುಮಾಡುವಾಗ ಯೋಗ್ಯತೆ ಮೀರಿ ವೆಚ್ಚಮಾಡಿ ಸಾಲಗಾರರಾಗಿ ನರಳುತ್ತಾರೆ

೧೯೧೪ನೆಯ ಇಸವಿಯ ಮಹಾಯುದ್ಧವಾದಮೇಲೆ ವ್ಯವಸಾಯದಿಂದ ಉತ್ಪತ್ತಿಯಾದ ಪದಾರ್ಥಗಳಿಗೆ ಬೆಲೆ ಏರಿತು ಅದರೊಡನೆ ಜಮೀನಿನ ಬೆಲೆಯೂ ಬಹಳ ಏರಿತು ಈ ವಿಷಮಕಾಲದಲ್ಲಿ ದವಸ ಧಾನ್ಯಗಳ ಬೆಲೆಯು ಅದೇ ರೀತಿಯಲ್ಲಿ ಖಾಯಂ ಆಗಿ ಇರುವುದೆಂದು ತಿಳಿದು ನಮ್ಮ ರೈತರು ಸಾಲಮಾಡಿ ಜಮೀನುಗಳನ್ನು ಕೊಂಡರು ಕೆಲವು ವರ್ಷಗಳಲ್ಲಿಯೇ ಪದಾರ್ಥಗಳ ಧಾರಣೆವಾಸಿಯು ಬಿದ್ದು ಹೋಯಿತು ಅದರ ಜೊತೆಯಲ್ಲಿಯೇ ಜಮೀನಿನ ಧಾರಣೆಯೂ ಕೂಡ ಅರ್ಧಕ್ಕರ್ಧ ಕಡಿಮೆಯಾಗಿಹೋಯಿತು ಆಗ ನಮ್ಮ ರೈತರು ಕಣ್ಣು ಬಿಡಲಾರಂಭಿಸಿದರು ಅವರು ಸಾಲವನ್ನು ತೀರಿಸಲಾರದೆ ತಾವು ಕೊಂಡಿದ್ದ ಜಮೀನನ್ನು ಮಾರುವುದರ ಜೊತೆಗೆ ಸ್ವಂತ ಜಮೀನನ್ನೂ ಹಾಳುಮಾಡಿ ಕೊಳ್ಳಬೇಕಾಯಿತು ಈ ಸಂದರ್ಭದಲ್ಲಿ ನಮ್ಮ ಸ್ವಂತ ಅನುಭವದ ಒಂದು ಉದಾಹರಣೆಯನ್ನು ನಮೂದಿಸುವುದು ಉತ್ತಮವಾಗಿ ಕಾಣುತ್ತದೆ ಇಂತಹ ಅನೇಕ ಸನ್ನಿವೇಶಗಳಿಂದ, ನಮ್ಮ ರೈತರು ಎಷ್ಟು ಕಷ್ಟದೆಸೆಯಲ್ಲಿ ಸಿಕ್ಕಿ ಸಂಕಟಪಡುತ್ತಿದ್ದಾರೆಂಬುದನ್ನು ಚೆನ್ನಾಗಿ ವಿವರಿಸಿದಂತಾಗುತ್ತದೆ

ಮೈಸೂರು ಡಿಸ್ಟ್ರಿಕ್ಟು ಶ್ರೀರಂಗಪಟ್ಟಣದ ಹತ್ತಿರ ಒಂದು ಗ್ರಾಮದಲ್ಲಿ ಒಬ್ಬ ರೈತನು ೧೯೨೪ನೆಯ ಇಸವಿಯಲ್ಲಿ ೩ ಎಕರೆ ೭ ಗುಂಟೆ ಜಮೀನನ್ನು ೨,೪೦೦ ರೂಪಾಯಿಗಳಿಗೆ ಕೊಂಡನು ಮಾರನೇ ವರ್ಷ ಅಲ್ಲಿಗೆ ನಾಲಾ ಬಂದು ಜಮೀನು ತರಿಯಾಯಿತು ಜಮೀನು ಕೊಳ್ಳುವಾಗ ತಾನು ಶೇಖರಿಸಿದ್ದ ೧,೪೦೦ ರೂಪಾಯಿಗಳ ಜೊತೆಗೆ ೧,೦೦೦ ರೂಪಾಯಿಗಳನ್ನು

ಸಾಲಮಾಡಿದನು ಕೆಲವು ವರ್ಷಗಳು ಜಮೀನನ್ನು ಅನುಭವಿಸುತ್ತಾ ಬಂದು ಅದರ ವರಮಾನದಿಂದ ಸಾಲವನ್ನು ತೀರಿಸುವುದಕ್ಕೆ ಅವನಿಗೆ ಆಗಲಿಲ್ಲ ಹೀಗಿರುವಾಗ ಜಮೀನು ಬೆಲೆ ಇಳಿದುಹೋಯಿತು ದವಸಗಳ ಬೆಲೆ ಕಡಿಮೆಯಾಯಿತು ಸಾಲಗಾರನ ತಗಾದೆ ಹೆಚ್ಚಾಯಿತು ಈ ಸ್ಥಿತಿಯಲ್ಲಿರುವಾಗ ೧೯೩೨ನೆಯ ಇಸವಿಯಲ್ಲಿ ಆ ಒಟ್ಟು ಜಮೀನು ತಾಕನ್ನು ೧,೨೦೦ ರೂಪಾಯಿಗಳಿಗೆ ಮಾರಿ, ೧,೦೦೦ ರೂಪಾಯಿಗಳ ಹಿಂದಿನ ಸಾಲವನ್ನೂ, ೨೦೦ ರೂಪಾಯಿಗಳ ಕಂದಾಯ ಬಾಕಿಯನ್ನು ತೀರಿಸಿ ಬರಿದಾದದ್ದಲ್ಲದೆ, ಜೊತೆಗ ತಾನು ಕಷ್ಟಪಟ್ಟು ಸಂಪಾದಿಸಿದ ೧,೪೦೦ ರೂಪಾಯಿಗಳನ್ನು ಕಳೆದುಕೊಂಡನು ಹೀಗೆ ಅನೇಕ ರೈತರು ಕಷ್ಟಕ್ಕೆ ಸಿಕ್ಕಿ ನರಳುತ್ತಿದ್ದಾರೆ

ಪ್ರಪಂಚದ ಇತರ ಭಾಗಗಳಲ್ಲಿ ಅಲ್ಲೋಲಕಲ್ಲೋಲ ಮಾಡುತ್ತಿರುವ ಆರ್ಥಿಕ ಆಂದೋಳನವು, ತನ್ನ ಪ್ರತಾಪವನ್ನು ನಮ್ಮ ದೇಶದಲ್ಲಿಯೂ ತೋರಿಸುತ್ತಿದೆ ಯಾವ ಪದಾರ್ಥಗಳನ್ನು ಮಾರಿ ಋಣಮುಕ್ತರಾಗುತ್ತೇವೆಂದು ರೈತರು ಧೈರ್ಯದಿಂದ ಸಾಲಮಾಡಿದರೋ ಆ ಪದಾರ್ಥಗಳಿಗೆ ಸರಿಯಾದ ಬೆಲೆ, ಮಾರಾಟ, ಗಿರಾಕಿಗಳಿಲ್ಲ ಅವರ ಖರ್ಚೂ ಕೂಡ ಅದರಿಂದ ಹುಟ್ಟುತ್ತಿಲ್ಲ ಪದಾರ್ಥಗಳ ಬೆಲೆಯ ಇಳಿತವು ಇನ್ನೊಂದು ವಿಧದಲ್ಲಿ ರೈತರ ಕಷ್ಟವನ್ನು ಹೆಚ್ಚಿಸುತ್ತಿದೆ ಈಗ್ಗೆ ೧೦ ವರ್ಷಗಳ ಹಿಂದೆ ಒಂದು ನೂರು ರೂಪಾಯಿ ಸಾಲಮಾಡಿದ ರೈತನು ಈಗ ಆ ನಾಲವನ್ನು ತೀರಿಸಬೇಕಾದರೆ ಪದಾರ್ಥಗಳ, ಭೂಮಿಯ ಮಾರಾಟದಿಂದಾಗಲಿ ಅಥವಾ ಸೇವೆಯಿಂದಾಗಲಿ ತೀರಿಸಬೇಕು ಹಿಂದಿನ ಒಂದು ನೂರು ರೂಪಾಯಿಗಳ ಪದಾರ್ಥವನ್ನಾಗಲಿ ಅಥವಾ ಸೇವೆಯನ್ನಾಗಲಿ ಈಗ ಸಂಪಾದಿಸಬೇಕಾದರೆ ೨೦೦ ರೂಪಾಯಿಗಳು ಬೇಕಾಗುವುದು ಯಾತಕ್ಕೆಂದರೆ, ಪದಾರ್ಥಗಳ ಅಥವಾ ಸೇವೆಯ ಬೆಲೆಯು ಅರ್ಧಕ್ಕರ್ಧ ಕಡಿಮೆಯಾಗಿದೆ ಅಂದರೆ ೧೦೦ ರೂಪಾಯಿನ ಹಿಂದಿನ ಸಾಲಕ್ಕೆ ಈಗ ೨೦೦ ರೂಪಾಯಿಗಳು ಕೊಡಬೇಕೆಂದಾಯಿತು ಈ ಬೆಲೆಯ ಏರಿಳಿತಕ್ಕೆ ನಮ್ಮ ರೈತರು ಯಾವ ವಿಧದಲ್ಲಿಯೂ ಜವಾಬ್ದಾರರಲ್ಲ ಎಲ್ಲಾ ದೇಶಗಳಲ್ಲಿಯೂ, ಕಠಿಣವಾದ ಆರ್ಥಿಕ ಆಂದೋಳನವು ರೈತರನ್ನು ತೊಂದರೆಗೆ

ಈಡುಮಾಡಿರುವಂತೆ, ನಮ್ಮ ದೇಶದಲ್ಲಿಯೂ ಇದು ರೈತರ ಬೆನ್ನು ಮೂಳೆಯನ್ನು ಮುರಿದು ಅನೇಕ ಕಷ್ಟಗಳಿಗೆ ಗುರಿಪಡಿಸುತ್ತಾ ಇದೆ

ರೈತರಿಗೆ ಸಾಮಾನ್ಯವಾಗಿ ಎಲ್ಲಾ ದೇಶದಲ್ಲಿಯೂ ಸಾಲ ಇದ್ದೇ ಇದೆ ೩೫ ಕೋಟಿ ಜನಸಂಖ್ಯೆಯುಳ್ಳ ಇಂಡಿಯಾ ದೇಶಕ್ಕೆ ೧,೪೦೦ ಕೋಟಿ ರೂಪಾಯಿಗಳ ಸಾಲವು ಅಷ್ಟು ಹೆಚ್ಚಲ್ಲವೆಂದು ಕೆಲವರು ಅಭಿಪ್ರಾಯಪಡುತ್ತಾರೆ ಆದರೆ ಇಲ್ಲಿಯ ಸಾಲದ ಬಹುಭಾಗವು ನಿಷ್ಫಲವಾದ ಕೆಲಸಗಳಿಗೂ, ದುಂದುಗಾರಿಕೆ ವೆಚ್ಚಕ್ಕೂ ಉಪಯೋಗಿಸಲ್ಪಟ್ಟಿರುವದ್ದರಿಂದ, ಇಲ್ಲಿಯ ಸಾಲವು ಅಷ್ಟು ಭಾರವಾಗಿ ಕಾಣುವುದು ಪಂಜಾಬು ದೇಶದ ರೈತರ ಸಾಲದ ಹೆಚ್ಚಿನ ಭಾಗವು ಮದುವೆ ಸಂಸ್ಕಾರಾದಿಗಳಿಗೂ, ದುರ್ಭಿಕ್ಷಕಾಲದಲ್ಲಿ ನಿತ್ಯಜೀವನವನ್ನು ನಡೆಸುವುದಕ್ಕೂ ವಿನಿಯೋಗವಾಗಿದೆ ಎಂಬದಾಗಿ ಡಾರ್ಲಿಂಗ್‌ರವರು ಹೇಳಿದ್ದಾರೆ * ಸಂಯುಕ್ತ ಪ್ರಾಂತದ ರೈತರು ತಮ್ಮ ಸಾಲದ ವೊಬಲಗಿನ ಶೇ ೩೬ರಷ್ಟು ವ್ಯವಸಾಯದ ಖರ್ಚಿಗೂ, ೩೪ರಷ್ಟು ನಿತ್ಯಜೀವನಕ್ಕೂ, ಉಳಿದ ೩೬ರಷ್ಟು ಹಬ್ಬ, ಮದುವೆ, ಸಂಸ್ಕಾರ ಮುಂತಾದ ಸಂಪ್ರದಾಯ ಖರ್ಚಿಗೂ ಉಪಯೋಗಿಸುತ್ತಿದ್ದಾರೆ ಎಂಬದಾಗಿ ಅಲ್ಲಿಯ ಬ್ಯಾಂಕಿಂಗ್ ಸಮಿತಿಯುವರು ಬರೆದಿದ್ದಾರೆ.†

ಮೇಲೆ ಹೇಳಿರುವ ಅನೇಕ ಕಾರಣಗಳಿಂದ ರೈತರ ಸಾಲವು ವೃದ್ಧಿಯಾಗುತ್ತಾ ಇದೆ ಇದರಿಂದುಂಟಾಗುವ ಪರಿಣಾಮವು ನಮ್ಮ ರೈತರನ್ನು ಬಹಳ ಕಠಿಣವಾದ ಕಷ್ಟಕ್ಕೆ ಗುರಿಪಡಿಸುತ್ತಾ ಇದೆ ಈ ಹೆಚ್ಚು ಸಾಲದಿಂದ ರೈತರಲ್ಲಿ ನಿರುತ್ಸಾಹ, ಅಸಾಮರ್ಥ್ಯ, ಗುಲಾಮಗಿರಿ—ಇವೆಲ್ಲಾ ಹೆಚ್ಚುತ್ತಿದ ಯಾವ ವಿಧದಿಂದಲಾದರೂ ಪರಿಹಾರೋಪಾಯಗಳನ್ನು ಒದಗಿಸದಿದ್ದ ಪಕ್ಷದಲ್ಲಿ, ಕಾಲಕ್ರಮದಲ್ಲಿ ಸಾಲದ ಹೊಡೆತದಿಂದ ರೈತರು ಹಾಳಾಗುವುದರಲ್ಲಿ ಸಂದೇಹವಿಲ್ಲ "ಸಾಲವನು ಕೊಂಬಾಗ ಹಾಲೋಗರುಂಡಂತ" ಎಂದು ಸರ್ವಜ್ಞಮೂರ್ತಿ ಹೇಳಿರುವಂತೆ, ನಮ್ಮ ರೈತರು ಬಹಳ ಸಂತೋಷದಿಂದ ಸಾಲಮಾಡಿ ಅದನ್ನು ತೀರಿಸುವಾಗ ಮಾತ್ರ ಸೊಂಟದ ಕೀಲು ಮುರಿದುಕೊಂಡಷ್ಟು ಕಷ್ಟವನ್ನು ಅನುಭವಿಸುತ್ತಿದ್ದಾರೆ.

* "Punjab Peasant in Prsoperity and Debt", by Darling, p 20
† "Report of the U P Banking Enquiry Committee", p 84

ರೈತರ ಸಾಲದ ಭಾರವನ್ನು ಕಡಿಮೆಮಾಡುವುದಕ್ಕೆ ಈಚೀಚೆಗೆ ಅನೇಕ ಕಡೆಗಳಲ್ಲಿ ಪ್ರಯತ್ನಗಳು ನಡೆಯುತ್ತಿವೆ ನಮ್ಮ ದೇಶದ ಪ್ರಯತ್ನಗಳನ್ನು ವಿಮರ್ಶೆಮಾಡಿ, ಪರಿಹಾರೋಪಾಯಗಳನ್ನು ಸೂಚಿಸುವ ಮೊದಲು, ಅಂತಹ ಪರಿಹಾರೋಪಾಯವನ್ನು ಆಚರಣೆಗೆ ತಂದಿರುವ ಕೆಲವು ಪಾಶ್ಚಾತ್ಯ ದೇಶಗಳ ಉದ್ಯಮಗಳನ್ನು ವಿಚಾರಮಾಡುವುದರಿಂದ ಹೆಚ್ಚು ಪ್ರಯೋಜನವಾಗಬಹುದು

ರೈತರ ಸಾಲ ಪರಿಹಾರ ಚಳವಳಿಯು ಮೊದಲು ಅಮೇರಿಕಾ ದೇಶದಲ್ಲಿ ಪ್ರಾರಂಭವಾಯಿತು ಇಂತಹ ಪ್ರಯತ್ನವು ಅನಂತರ ಕಾನಡಾ ಆಸ್ಟ್ರೇಲಿಯಾ ದೇಶಗಳಿಗೂ, ಆಮೇಲೆ ಯೂರೋಪ್ ಖಂಡಕ್ಕೂ ಹರಡಿತು ಈ ಸಾಲದ ಸಮಸ್ಯೆಯು ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ರೀತಿಯಾಗಿ ಬಗೆಹರಿಸಲ್ಪಟ್ಟಿದೆ ಕೆಲವು ಮುಖ್ಯ ದೇಶಗಳ ಪರಿಹಾರೋದ್ಯಮಗಳು ನಮಗೆ ಮಾರ್ಗದರ್ಶಕವಾಗಬಹುದು

ಡೆನ್ಮಾರ್ಕ್ ದೇಶದಲ್ಲಿ ೧೯೩೩ನೆಯ ಇಸವಿಯ ಒಂದು ಕಾನೂನು ಪ್ರಕಾರ ರೈತರ ಸಾಲವನ್ನೆಲ್ಲಾ ಅಡಮಾನದ ಸಹಕಾರ ಸಂಘಗಳು ವಹಿಸಿಕೊಂಡು, ಸಾಲ ಕೊಟ್ಟವರಿಗೆ ಧರ್ಮಾಂತರ ಪತ್ರಗಳನ್ನು (Conversion Bonds) ಕೊಟ್ಟವು ದೀರ್ಘಕಾಲಾವಧಿಯಲ್ಲಿ ಈ ಪತ್ರಗಳ ಮೊಬಲಗು ಪಾವತಿಮಾಡುವಂತೆ ಏರ್ಪಾಡಾಯಿತು ಈ ವಿಧವಾದ ಕಾರ್ಯಕ್ರಮವನ್ನು ಕೈಗೊಳ್ಳುವುದಕ್ಕೆ ಸಹಕಾರ ಸಂಘಗಳಿಗ ಸರ್ಕಾರದವರು ೨೦ ಕೋಟಿ ಕ್ರೌನುಗಳನ್ನು ಮೂಲಧನವಾಗಿ ಕೊಟ್ಟಿದ್ದಾರೆ ಈ ಹಣದ ಸಹಾಯದಿಂದ ಸಾಲದ ಭಾರದಿಂದ ನರಳುತ್ತಿದ್ದ ಅನೇಕ ರೈತರಿಗೆ ಪರಿಹಾರೋಪಾಯಗಳನ್ನು ಕಲ್ಪಿಸಿದ್ದಾಗಿದೆ ಜರ್ಮನಿ ದೇಶದಲ್ಲಿ ಹೆಚ್ಚು ಸಾಲದ ಭಾರದಿಂದ ಕಷ್ಟಪಡುತ್ತಿದ್ದ ರೈತರಿಗೆ ಅವರ ಬೆಳೆಯ ಆಧಾರದಮೇಲೆ ಸಾಲಕೊಡುವ ಏರ್ಪಾಡನ್ನು ಜರ್ಮನ್ ಸರ್ಕಾರದವರೇ ಪ್ರಾರಂಭಿಸಿದರು ಇದರಿಂದ ನಾಶಕರವಾದ ಸುಲಭ ಬೆಲೆಗೆ ಮಾರುತ್ತಿದ್ದ ಪದ್ಧತಿಯು ರೈತರಲ್ಲಿ ತಪ್ಪಿದಂತಾಯಿತು. ಸಾಲ ಕೊಡುವುದಕ್ಕೆ 'ರೀಷ್ ಬ್ಯಾಂಕು' ಸ್ಥಾಪಿತವಾಯಿತು ಸ್ವಂತ ಜಮೀನಿಲ್ಲದ ವ್ಯವಸಾಯಗಾರರಿಗೆ ಬೆಳೆಯಮೇಲೆ ಕೊಟ್ಟಿದ್ದ ಸಾಲದ ಬಡ್ಡಿಯನ್ನು ವಿನಾಯಿತಿ

ಕೊಡಬೇಕೆಂದು ೧೯೩೩ನೆಯ ಇಸವಿಯ ಒಂದು ಕಾನೂನು ಪ್ರಕಾರ ಆಚರಣೆಯಲ್ಲಿ ತರಲಾಯಿತು ಇದೇ ಶಾಸನವು ರೈತರ ಸಾಲವನ್ನು ಇತ್ಯರ್ಥಪಡಿಸುವುದಕ್ಕೂ, ಬಡ್ಡಿಯ ದರವನ್ನು ಕಡಿಮೆ ಮಾಡುವುದಕ್ಕೂ ಅನುಕೂಲವಾದ ವಿಧಿಗಳನ್ನು ನಿಯಮಿಸಿದೆ.

ಪೋಲೆಂಡ್ ದೇಶದಲ್ಲಿ ಕೈಗೊಂಡಿರುವ ರೈತರ ಸಾಲ ಪರಿಹಾರೋದ್ಯಮಗಳು ಸುಲಭವಾಗಿಯೂ ಪ್ರಯೋಜನಕಾರಿಯಾಗಿಯೂ ಇವೆ ವ್ಯವಸಾಯಕ್ಕೆ ಸಂಬಂಧಪಟ್ಟ ವ್ಯಾಪಾರೋದ್ಯಮಗಳನ್ನು ಮೊದಲು ಸರ್ಕಾರದವರು ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡರು ಧಾರಣೆವಾಸಿಗಳಲ್ಲಿ ಹೆಚ್ಚು ವ್ಯತ್ಯಾಸಬರದಂತೆ ಏರ್ಪಾಡುಮಾಡಿ, ವ್ಯವಸಾಯಕ್ರಮದ ಹೆಚ್ಚು ಖರ್ಚನ್ನು ತಗ್ಗಿಸುವಂತೆ ಕಾರ್ಯಕ್ರಮವನ್ನು ಸರ್ಕಾರದವರೇ ಆರಂಭಿಸಿದರು ಭೂಕಂದಾಯದ ದರವನ್ನು ಕಡಿಮೆಮಾಡಿದರು ಪ್ರತಿಯೊಂದು ಸಂದರ್ಭದಲ್ಲಿಯೂ ಸರ್ಕಾರದವರು ವಿಚಾರಣೆ ನಡೆಯಿಸಿ, ಅನುಕೂಲವಾದ ಕಾಯಿದೆಗಳನ್ನು ಆಚರಣೆಗೆ ತಂದು, ರೈತರ ಸಾಲದ ಭಾರವನ್ನು ಕಡಿಮೆಮಾಡುವುದಕ್ಕೆ ಏನೇನು ಬೇಕೋ ಅದನ್ನೆಲ್ಲಾ ಮಾಡಿದ್ದಾರೆ ೧೯೩೨ನೆಯ ಇಸವಿಯಲ್ಲಿ ದೀರ್ಘಕಾಲಾವಧಿ ಸಾಲಕ್ಕೆ ಪ್ರತಿಯಾಗಿ ರೂಪಾಂತರ ಬಾಂಡುಗಳನ್ನು ಕೊಡುವ ಪದ್ಧತಿಯನ್ನು ನಿರ್ಬಂಧಕ ಕಾನೂನನ್ನಾಗಿ ಮಾಡಿದ್ದಾರೆ ಬಡ್ಡಿಯ ದರವನ್ನು ಶೇ ೪ಕ್ಕೆ ಇಳಿಸಿ ರೂಪಾಂತರ ಬಾಂಡುಗಳ ವಾಯಿದೆಯನ್ನು ಬದಲಾದ ತಾರೀಖಿನಿಂದ ೫೫ ವರ್ಷಕ್ಕೆ ಹೆಚ್ಚಿಸಿದ್ದಾರೆ ಕಂತಿನ ಸಾಲವನ್ನು ಇತ್ಯರ್ಥಪಡಿಸುವುದಕ್ಕೆ ಮಧ್ಯಸ್ಥಿಕೆ ಪಂಚಾಯಿತಿಗಳನ್ನು ಸ್ಥಾಪಿಸಿದ್ದಾರೆ ಹೀಗೆ ಪೋಲೆಂಡ್ ಸರ್ಕಾರದವರು ಅನೇಕ ವಿಧವಾದ ಕಾನೂನುಗಳನ್ನು ಮಂಜೂರುಮಾಡಿ, ಸಾಧ್ಯವಾದ ಮಟ್ಟಿಗೆ ರೈತರ ಸಾಲದ ಹೊರೆಯನ್ನು ಕಡಿಮೆಮಾಡುತ್ತಲಿದ್ದಾರೆ

ಇದೇ ರೀತಿಯಲ್ಲಿ ಅನೇಕ ದೇಶಗಳಲ್ಲಿ ಸ್ಥಳವಿದ್ಯಮಾನಕ್ಕೆ ತಕ್ಕ ಹಾಗೆ ಬಡ್ಡಿ ದರವನ್ನು ಕಡಿಮೆಮಾಡುವುದು ಸಾಲದ ಪ್ರಮಾಣವನ್ನು ತಗ್ಗಿಸಿ, ಸುಲಭವಾದ ಸಣ್ಣ ಕಂತುಗಳಲ್ಲಿ ಪಾವತಿಮಾಡುವ ಏರ್ಪಾಡಿಡುವುದು, ಕೋರ್ಟು ವ್ಯವಹಾರಗಳಿಗೆ ಹೋಗದಂತೆ ಮಾಡುವುದು,

ತೆರಿಗೆಗಳನ್ನು ಕಡಿಮೆಮಾಡುವುದು, ಜಮೀನಿನ ಗೇಣಿ ದರವನ್ನು ಕಡಿಮೆ ಮಾಡುವುದು, ಜಮೀನಿನ ಹಂಚಿಕೆಯನ್ನು ನಿಲ್ಲಿಸುವುದು— ಇವೇ ಮುಂತಾದ ಉಪಾಯಗಳನ್ನು ಕಾಯಿದೆಗಳ ರೂಪದಲ್ಲಿ ಆಚರಣೆಗೆ ತಂದು ರೈತರ ಸಾಲದ ಸಮಸ್ಯೆಯನ್ನು ಬಗೆಹರಿಸಿದ್ದಾರೆ

ಭರತಖಂಡದಲ್ಲಿಯೂ ಕೂಡ ಕೆಲವು ಪ್ರಾಂತಗಳಲ್ಲಿ ಸಾಲ ಪರಿಹಾರೋಪಾಯಗಳನ್ನು ಆಚರಣೆಗೆ ತರುತ್ತಿದ್ದಾರೆ ಅದಕ್ಕಾಗಿ ಕೆಲವು ಕಾನೂನುಗಳನ್ನು ಮಂಜೂರುಮಾಡಿದ್ದಾರೆ ೧೯೧೮ನೆಯ ಇಸವಿಯ ('ಯುಸೂರಿಯಸ್ ಲೋನ್ ಆಕ್ಟ್') ಬಡ್ಡಿಯ ದರವನ್ನು ನಿರ್ಣಯ ಮಾಡುವ ಕಾನೂನು, ಪಂಜಾಬು ದೇಶದ ಆಧಾರದ ಜಮೀನು ರೈತರ ಕೈಬಿಟ್ಟುಹೋಗದಂತೆ ಮಾಡಿದ ಕಾನೂನು ('ಪಂಜಾಬ್ ಲ್ಯಾಂಡ್ ಎಲಿಯನೇಷನ್ ಆಕ್ಟ್'), 'ಮೈಸೂರು ಅಗ್ರಿಕಲ್ಚರಲ್ ರಿಲೀಫ್ ಆಕ್ಟ್' ಇವು ಮುಖ್ಯವಾಗಿವೆ ಇವುಗಳಲ್ಲದೆ ರೈತರ ನಿತ್ಯಜೀವನದ ಆವಶ್ಯಕತೆಗಳಾದ ದನಕರುಗಳು, ವ್ಯವಸಾಯ ಮುಟ್ಟುಗಳು— ಇವುಗಳನ್ನು ಕೋರ್ಟಿನವರು ಜಪ್ತಿಮಾಡದಂತೆಯೂ, ಆಧಾರದ ಜಮೀನು ಹರಾಜಾಗದಂತೆಯೂ, ಸಾಲದ ಹಣವನ್ನು ಸುಲಭ ಕಂತಿನಲ್ಲಿ ವಾವತಿಮಾಡುವಂತೆಯೂ ಏರ್ಪಾಡು ಮಾಡುವುದಕ್ಕೆ ಅನುಕೂಲವಾದ ಕಲವು ಶಾಸನಗಳನ್ನೂ ಕೂಡ ಅಲ್ಲಲ್ಲೆ ಆಚರಣೆಗೆ ತರಲಾಗಿದೆ ಇಷ್ಟಾದರೂ ಸಾಹುಕಾರರ ಮೋಸವನ್ನಾಗಲಿ ಅಥವಾ ರೈತರ ದುಂದುಗಾರಿಕೆ, ಡಂಭಾಚಾರದ ಖರ್ಚನ್ನಾಗಲಿ ತಪ್ಪಿಸುವುದಕ್ಕೆ ಸಾಧ್ಯವಿಲ್ಲವಾಗಿದೆ

ಭವನಗರ ಸಂಸ್ಥಾನದಲ್ಲಿ ಪ್ರಚಾರಕ್ಕೆ ತಂದಿರುವ ಸಾಲ ಪರಿಹಾರೋಪಾಯವು ಸುಲಭವಾಗಿಯೂ ಉತ್ತಮವಾಗಿಯೂ ಇದೆ ಸರ್ಕಾರದವರು ಋಣಪರಿಹಾರ ಸಮಿತಿಗಳನ್ನು ಸ್ಥಾಪಿಸಿ, ಸಾಲದ ಹಣವನ್ನು ಇತ್ಯರ್ಥಮಾಡುವ ಅಧಿಕಾರವನ್ನು ಅವುಗಳಿಗೆ ಒಪ್ಪಿಸಿದರು ಸಮಿತಿಯವರಿಂದ ಇತ್ಯರ್ಥಮಾಡಲ್ಪಟ್ಟ ಸಾಲವನ್ನು ಸರ್ಕಾರದವರು ತಾವೇ ವಹಿಸಿಕೊಂಡು, ಪೂರ್ತಿ ಸಾಲದ ಹಣವನ್ನು ಪಾವತಿಮಾಡಿದರು ರೈತರ ಪರವಾಗಿ ವಾವತಿಮಾಡಿದ ಹಣಕ್ಕೆ ರೈತರಿಂದ ಸುಲಭ ಕಂತಿನ ಕಂತು ಪತ್ರವನ್ನು ಬರೆಯಿಸಿಕೊಂಡರು ಹೀಗೆ ೮೦ ಲಕ್ಷ ರೂಪಾಯಿನ

ಸಾಲವನ್ನು ೨೦ ಲಕ್ಷ ರೂಪಾಯಿಗೆ ಇಳಿಸಿ, ಆ ಸಾಲವನ್ನು ತೀರಿಸಿ, ರೈತರನ್ನು ಉದ್ಧಾರಮಾಡಿದ ಪ್ರಖ್ಯಾತಿಯು ಈಗ ಭವನಗರ ಸಂಸ್ಥಾನಕ್ಕೇ ಇದೆ ಆದರೆ ಭವನಗರವು ಚಿಕ್ಕ ಸಂಸ್ಥಾನ, ಅಲ್ಲಿಯ ಸಾಲವು ಅಷ್ಟು ಹೆಚ್ಚಾಗಿರಲಿಲ್ಲ ಆದುದರಿಂದ ಸರ್ಕಾರದವರು ಸಾಲವನ್ನು ತಾವೇ ವಹಿಸಿಕೊಂಡು ತೀರಿಸುವುದಕ್ಕೆ ಅವಕಾಶವಾಯಿತು ದೊಡ್ಡ ದೊಡ್ಡ ಸಂಸ್ಥಾನ ಮತ್ತು ಪ್ರಾಂತಗಳಲ್ಲಿರುವ ಕೋಟ್ಯಂತರ ರೂಪಾಯಿಗಳನ್ನು ಸರ್ಕಾರದವರು ವಹಿಸಿಕೊಂಡು, ತೀರಿಸುವುದು ಸಾಧ್ಯವಿಲ್ಲ ಎಂಬದಾಗಿ ಕೆಲವರು ವಾದಮಾಡುತ್ತಾರೆ ಇದರಲ್ಲಿ ಹೆಚ್ಚು ಸತ್ಯಾಂಶವಿದೆ ಭವನಗರ ದಂತೆ ನಿಶ್ಚಿತ ರೀತಿಯಲ್ಲಿ ಪರಿಹಾರೋಪಾಯಗಳನ್ನು ಇತರ ದೊಡ್ಡ ಪ್ರಾಂತೀಯ ಸರ್ಕಾರದವರು ಕೈಗೊಳ್ಳಲು ಸಾಧ್ಯವಿಲ್ಲದಿದ್ದರೂ, ಭವನಗರ ಸರ್ಕಾರದ ಉದಾರ ನೀತಿಯನ್ನಾದರೂ ಅನುಸರಿಸಿ, ರೈತರ ಸಾಲವನ್ನು ಕಡಿಮೆಮಾಡುವುದಕ್ಕೆ ವಿಸ್ತಾರವಾದ ಕಾರ್ಯಕ್ರಮಗಳನ್ನು ಆಚರಣೆ ಯಲ್ಲಿ ತರಬಹುದು

ರೈತರ ಸಾಲ ಪರಿಹಾರೋಪಾಯ ರಚನೆಯಲ್ಲಿ ಪ್ರತಿಬಂಧಕ ಮತ್ತು ನಿವಾರಕ ಉಪಾಯಗಳಿದ್ದೇ ಇರಬೇಕು ಹಿಂದಿನ ಸಾಲದ ತೀರ್ಮಾನಗಳ ಉಪಾಯದ ಜೊತೆಗೆ ಮುಂದಿನ ಸಾಲ ಮಾಡದಿರುವುದಕ್ಕೆ ಅನುಕೂಲ ವಾದ ಶಾಸನವಿರಬೇಕು ಇದಕ್ಕೆ ರೈತರ ಆದಾಯವನ್ನು ಹೆಚ್ಚುಮಾಡು ವುದು, ಅವರು ಉತ್ಪತ್ತಿಮಾಡಿದ ಪದಾರ್ಥಗಳಿಗೆ ಸರಿಯಾದ ಬೆಲೆಯನ್ನು ಒದಗಿಸುವುದು— ಇವೇ ಮುಂತಾದ ಅನುಕೂಲಗಳಿಗೆ ಸಹಾಯಕ ಕಾನೂನು ಮಂಜೂರಾಗಬೇಕು

೧೯೨೮ನೆಯ ಇಸವಿಯ ಲಿನ್‌ಲಿತ್‌ಗೋ ವ್ಯವಸಾಯ ಸಮಿತಿ ಯವರು "ರೈತರನ್ನು ಅವರ ಸಾಲದ ಶೃಂಖಲೆಯಿಂದ ತಪ್ಪಿಸುವುದಕ್ಕೆ ಪರಸ್ಪರ ಸಹಾಯಕ ಸಂಘಗಳು ರಾಮಬಾಣದಂತಿವೆ ಅವುಗಳ ಸಹಾಯ ದಿಂದಲೇ ಇಂಡಿಯಾ ದೇಶದ ರೈತರು ತಮ್ಮ ಸಾಲದಿಂದ ಮುಕ್ತರಾಗ ಬಹುದು" ಎಂದು ಅಭಿಪ್ರಾಯಪಟ್ಟಿದ್ದಾರೆ ನಮ್ಮ ದೇಶದಲ್ಲಿ ಪರಸ್ಪರ ಸಹಾಯಕ ಚಳವಳಿಯನ್ನು ಪ್ರಾರಂಭಿಸಿ ೩೦ ವರ್ಷಗಳ ಮೇಲಾದರೂ ರೈತರ ಸಾಲವನ್ನು ಇಳಿಸುವುದಕ್ಕೆ ಅಷ್ಟು ಹೆಚ್ಚಿನ ಸಹಾಯವಾಗುತ್ತಿಲ್ಲ

ಪರಸ್ಪರ ಸಹಾಯಕ ಸಂಘಗಳ ಸಂಖ್ಯೆಯು ಹೆಚ್ಚುತ್ತಿದೆ ಅವುಗಳ ಬಂಡವಾಳವು ಬೆಳೆಯುತ್ತಾ ಇದೆ ಅವುಗಳ ಸದಸ್ಯರೂ ಹೆಚ್ಚುತ್ತಿದ್ದಾರೆ ಆದರೆ ನಿಜಸ್ಥಿತಿಯಲ್ಲಿ ಅನೇಕ ಸಂಘಗಳು ರೈತರ ಸಾಲದ ಕಷ್ಟವನ್ನು ಪರಿಹರಿಸಲಾರವು ಮೇಲ್ಕಂಡ ಸಮಿತಿಯವರೇ ಭರತಖಂಡದ ರೈತರಲ್ಲಿ ಅತ್ಯಲ್ಪ ಮಂದಿ ಪರಸ್ಪರ ಸಹಾಯಕ ಸಂಘಗಳ ಪ್ರಯೋಜನವನ್ನು ಹೊಂದುತ್ತಿದ್ದಾರೆ ಎಂಬದಾಗಿ ಬರೆದಿದ್ದಾರೆ* ಕೇಂದ್ರ ಬ್ಯಾಂಕಿಂಗ್ ಸಮಿತಿಯವರ ವರದಿಯ ಕೆಲವು ಅಂಕಿಗಳನ್ನು ನಾವು ಪರೀಕ್ಷಿಸಿದರೆ ಈ ಅಂಶವು ನಮಗೆ ಚೆನ್ನಾಗಿ ಮಂದಟ್ಟಾಗುವುದು —

| ಪ್ರಾಂತದ ಹೆಸರು | ರೈತರಿಗೆ ಬೇಕಾದ ಅವಶ್ಯಕ ಸಾಲ | ವ್ಯವಸಾಯ ಸಂಘಗಳು ಒದಗಿಸಿದ್ದು |
|---|---|---|
| ಬೊಂಬಾಯಿ | 3,250 ಲಕ್ಷ ರೂಪಾಯಿ | 220 ಲಕ್ಷ ರೂಪಾಯಿ |
| ಪಂಜಾಬು | 5,200 ಲಕ್ಷ ,, ಗಳಿಂದ<br>6,500 ಲಕ್ಷ ,, ವರೆಗೆ | ಬಹಳ ಸ್ವಲ್ಪ |
| ಮದರಾಸಾಧಿಪತ್ಯದ ತಂಜಾವೂರು ಜಿಲ್ಲೆ | 3,500 ಲಕ್ಷ ,, | 17½ ಲಕ್ಷ ರೂಪಾಯಿ |

ಪರಸ್ಪರ ಸಹಾಯಕ ಸಂಘಗಳಿಂದ ರೈತರ ಸಾಲ ಪರಿಹಾರ ಕೆಲಸಗಳು ಸಮರ್ಪಕವಾಗಿ ನಡೆಯುತ್ತಿಲ್ಲ ದೀರ್ಘಾವಧಿಯ ಸಾಲವನ್ನು ಕೊಡುವುದಕ್ಕೆ ಈ ಸಂಘಗಳಿಗೆ ಸಾಧ್ಯವಿಲ್ಲ ರೈತರಿಗೆ ವ್ಯವಸಾಯ ಕಾಲದಲ್ಲಿ ಅವಶ್ಯಕವಾದ ತುರ್ತು ಸಾಲವನ್ನು ಈ ಸಂಘಗಳು ಒದಗಿಸಬಹುದು ಸಹಕಾರ ಸಂಘಗಳಿಂದ ಮತ್ತಾವ ಹೆಚ್ಚಿನ ಉಪಕಾರವಾಗದಿದ್ದರೂ, ಅನೇಕ ಸಾಹುಕಾರರು ವಿಧಿಸುತ್ತಿದ್ದ ಮನೆಹಾಳು ಬಡ್ಡಿಯ ದರವನ್ನು ಕಡಿಮೆಮಾಡಿದೆಯೆಂದು ಧಾರಾಳವಾಗಿ ಹೇಳಬಹುದು

ದೀರ್ಘಾವಧಿಯ ಹೆಚ್ಚು ಸಾಲವನ್ನು ಒದಗಿಸುವುದಕ್ಕೆ ಅಡಮಾನದ ಬ್ಯಾಂಕುಗಳು ಈಗ ಎಲ್ಲೆಲ್ಲೂ ಸ್ಥಾಪಿಸಲ್ಪಡುತ್ತಿವೆ ಪರಸ್ಪರ ಸಹಾಯ ತತ್ವವನ್ನು ಅನುಸರಿಸಿ, ಈ ಸಂಸ್ಥೆಗಳು ರೈತರಿಗೆ ಹೆಚ್ಚು ಸಹಾಯಮಾಡುತ್ತಿವೆ. ಆದರೆ ಇವುಗಳ ಕಾರ್ಯವು ಇನ್ನೂ ಹೆಚ್ಚು ವಿಸ್ತರಿಸಬೇಕು

* "Royal Commission on Agriculture", p 446

೧೯೩೩ನೆಯ ಇಸವಿಯಲ್ಲಿ ನಮ್ಮ ದೇಶದ ಅಡಮಾನದ ಬ್ಯಾಂಕುಗಳ ಒಟ್ಟು ಬಂಡವಾಳವು ೩೨ ಲಕ್ಷ ರೂಪಾಯಿಗಳು ಮಾತ್ರವೆಂದು ಅಂದಾಜುಮಾಡಲ್ಪಟ್ಟಿದೆ ಈ ಅಲ್ಪ ಬಂಡವಾಳದಿಂದ ಕೋಟ್ಯಂತರ ರೂಪಾಯಿಗಳ ಸಾಲವನ್ನು ತೀರಿಸುವುದು ಅಸಾಧ್ಯ ಸಾಲದ ಕಷ್ಟದಿಂದ ನರಳುತ್ತಿರುವ ರೈತರು ಈ ಬ್ಯಾಂಕುಗಳ ಸಹಾಯವನ್ನು ಹೆಚ್ಚು ಹೆಚ್ಚಾಗಿ ಪಡೆಯುವಂತಾಗಬೇಕು ಇವುಗಳಿಂದ ರೈತರಿಗೆ ಆಗುವಷ್ಟು ಪ್ರಯೋಜನವೂ ಮತ್ತಾವ ಸಂಸ್ಥೆಗಳಿಂದಲೂ ಆಗುವುದಿಲ್ಲ ಆದುದರಿಂದ ಈ ಬ್ಯಾಂಕುಗಳ ಕಾರ್ಯವಿಸ್ತಾರಮಾಡುವುದಕ್ಕೆ ಪ್ರಾಂತೀಯ ಸರ್ಕಾರಗಳು ಹೆಚ್ಚು ಆಸಕ್ತಿ ವಹಿಸಬೇಕು ಹೀಗೆ ಪ್ರಾಂತೀಯ ಸರ್ಕಾರಗಳು ಸಹಕಾರ ಸಂಸ್ಥೆಗಳಿಗೂ, ಅಡಮಾನದ ಬ್ಯಾಂಕುಗಳಿಗೂ ಸಹಾಯ ಮಾಡಿದರೆ ರೈತರಿಗೆ ತಾತ್ಕಾಲಿಕವಾದ ಸಾಲವನ್ನು ಒದಗಿಸಬಲ್ಲವು ಆದರೆ ರೈತರ ಆರ್ಷೇಯ ಸಾಲವನ್ನು ಅಳಿಸುವುದೆಂತು? ಇದಕ್ಕೆ ಪರಿಹಾರೋಪಾಯಗಳೇನು? ರೈತರು ಅದರಿಂದ ಪಾರಾಗದಿದ್ದರೆ ಅವರು ಉಳಿಯುವುದೆಂತು?— ಇವೇ ಮುಂತಾದ ಪ್ರಶ್ನೆಗಳು ಅನೇಕರನ್ನು ಬಾಧಿಸುತ್ತಿವೆ

ಈ ವಿಧವಾದ ಸಮಸ್ಯೆಗಳನ್ನು ಬಗೆಹರಿಸುವುದಕ್ಕೆ ಕೆಲವು ಪ್ರಾಂತೀಯ ಸರ್ಕಾರಗಳು ಅನೇಕ ಉಪಾಯಗಳನ್ನು ಕಂಡುಹಿಡಿದು ಆಚರಣೆಗೆ ತರುತ್ತಿವೆ "ರೈತರಿಗೆ ತೀರಿಸಲಾರದಷ್ಟು ಸಾಲವಿದೆ ಈ ಸಾಲದ ಲೆಕ್ಕವನ್ನು ಸಾಹುಕಾರರ ಕಡತದಿಂದ ಅಳಿಸಿಹಾಕಿದಲ್ಲದೆ, ರೈತರಿಗೆ ಮೋಕ್ಷವಿಲ್ಲ ಸಾಲದ ಸಂಕೋಲೆಯಲ್ಲಿ ನರಳುತ್ತಿರುವ ರೈತರನ್ನು ಈ ತೊಡಕಿನಿಂದ ಬಿಡಿಸಿದಲ್ಲದೆ, ಅವರು ಬದುಕಲಾರರು" ಎಂಬುದಾಗಿ ತಿಳಿದು, ಅವರ ಸಾಲದ ಅನವಶ್ಯಕವಾದ ಅಥವಾ ಹೆಚ್ಚೆಂದು ತೋರುವ ಭಾಗವನ್ನು ಲೆಕ್ಕದಿಂದ ಅಳಿಸಿಹಾಕುವ ಪ್ರಯತ್ನ ಮಾಡುತ್ತಿದ್ದಾರೆ ಈ ವಿಧವಾದ ಸಂಪ್ರದಾಯವು ಹೊಸದೇನೂ ಅಲ್ಲ ಜರ್ಮನಿಯಮೇಲೆ ಹೊರಿಸಿದ್ದ ಅಗಾಧ ಸಾಲವನ್ನು ಅದು ಕೊಡಲಾರೆನೆಂದು ಹೇಳಿಬಿಟ್ಟಿತು ಅಮೇರಿಕಾ ದೇಶಕ್ಕೆ ಸಲ್ಲಿಸಬೇಕಾಗಿದ್ದ ಸಾಲವನ್ನು ಕೆಲವು ಯೂರೋಪ್ ಖಂಡದ ರಾಷ್ಟ್ರಗಳು ತಮಗೆ ಕೊಡಲು ಶಕ್ತಿಯಿಲ್ಲವೆಂದು ಹೇಳಿಬಿಟ್ಟವು.

ಹೀಗಿರುವಲ್ಲಿ ನಮ್ಮ ರೈತರು ಹೊರಲಾರದ ಸಾಲದ ಭಾರವನ್ನು ಏಕೆ ಧರಿಸಬೇಕು? ಅವರ ಸರ್ವಸ್ವವನ್ನೂ ಸೂರೆಮಾಡುತ್ತಿರುವ ಈ ಸಾಲದ ಹೊರೆಯನ್ನು ಹೇಗಾದರೂ ಕಡಿಮೆಮಾಡುವ ಪ್ರಯತ್ನಗಳು ಅಲ್ಲಲ್ಲೇ ನಡೆಯುತ್ತಿವೆ ಇದಕ್ಕಾಗಿ ಕೆಲವು ರಕ್ಷಣಾ ಮಾರ್ಗಗಳನ್ನು ಕಂಡು ಹಿಡಿದಿದ್ದಾರೆ

ಇವುಗಳಲ್ಲಿ ಮುಖ್ಯವಾದದ್ದು ಸಂಧಾನ ಸಮಿತಿಗಳ ಸ್ಥಾಪನೆ (Conciliation Boards) ಈ ಸಮಿತಿಯ ಸದಸ್ಯರು ಸಾಲಗಾರರನ್ನೂ ಸಾಹುಕಾರರನ್ನೂ ಸೇರಿಸಿ, ಸಾಲದ ಲೆಕ್ಕಪತ್ರಗಳನ್ನು ವಿಮರ್ಶೆಮಾಡಿ, ಸಾಹುಕಾರರನ್ನು ರಿಯಾಯಿತಿ ತೋರಿಸುವಂತೆ ಪ್ರೇರಿಸಿ, ಸಾಲದ ಹಣವನ್ನು ಇತ್ಯರ್ಥಪಡಿಸುವುದು ಅವರ ಮುಖ್ಯೋದ್ದೇಶ ಈ ರೀತಿಯ ಪಂಚಾಯಿತಿಗಳು ಮಧ್ಯಪ್ರಾಂತ, ಪಂಜಾಬು, ಕೊಚ್ಚಿನ್, ಮೈಸೂರು ಪ್ರಾಂತಗಳಲ್ಲಿ ಕೆಲಸಮಾಡುತ್ತಿವೆ ೧೯೩೩ನೆಯ ಇಸವಿಯಲ್ಲಿ ಈ ಪಂಚಾಯಿತಿಗಳು ಮಧ್ಯಪ್ರಾಂತದಲ್ಲಿ ೧½ ಕೋಟಿ ರೂಪಾಯಿಗಳ ಸಾಲ ವನ್ನು ೭೦ ಲಕ್ಷ ರೂಪಾಯಿಗಳಿಗೆ ಇಳಿಸಿ, ರೈತರಿಗೆ ಶೇ ೪೪ರಷ್ಟು ರಿಯಾ ಯಿತಿಯನ್ನು ಒದಗಿಸಿಕೊಟ್ಟಿವೆ ಎಂಬುದಾಗಿ ಅಂದಾಜು ಮಾಡಲಾಗಿದೆ

ಈ ರೀತಿಯ ಸಾಲದ ಪಂಚಾಯಿತಿಗಳು ಸಮರ್ಪಕವಾಗಿ ಕೆಲಸ ಮಾಡುತ್ತಿವೆ ಆದರೆ ಸಾಹುಕಾರರು ಸಮ್ಮತಿಸದಿದ್ದರೆ, ಅವು ಏನು ಮಾಡುವುದಕ್ಕೂ ಆಗುವುದಿಲ್ಲ ಪಂಚಾಯಿತಿಗಳು ಒಳ್ಳೆಯ ಕೆಲಸ ಮಾಡಿದರೆ, ರೈತರಿಗೆ ಸುಲಭವಾದ ಮತ್ತು ಪ್ರಾಮಾಣಿಕವಾದ ನ್ಯಾಯ ಸ್ಥಾನವು ದೊರೆತಂತಾಗುವುದರಲ್ಲಿ ಸಂದೇಹವಿಲ್ಲ ಹೀಗೆ ಮಾಡಬೇಕಾದರೆ ಅವುಗಳ ಅಧಿಕಾರವನ್ನು ಹೆಚ್ಚಿಸಬೇಕು ಪ್ರಾಮಾಣಿಕರಾದ, ಪಕ್ಷಪಾತ ವಿಲ್ಲದ ಪಂಚಾಯಿತರನ್ನು ಚುನಾಯಿಸಬೇಕು ಇಷ್ಟು ಮಾಡಿದರೂ ಅವು ರೈತರ ಸಾಲದ ಭಾರವನ್ನು ಕಡಿಮೆಮಾಡುವುದಕ್ಕೆ ಅನುಕೂಲವಾಗಿ, ಅವರ ಸಾಲದ ಪಾವತಿ ಮೊಬಲಗನ್ನು ನಿರ್ಧರಿಸುವ ಮಧ್ಯಸ್ಥಿಕೆ ಮಂಡಳಿ ಗಳೇ ವಿನಾ, ಸಾಲವನ್ನು ತೀರಿಸತಕ್ಕ ಸಾಮರ್ಥ್ಯ ಸಂಸ್ಥೆಗಳಲ್ಲವೇ ಅಲ್ಲ

ಇಂಡಿಯಾ ದೇಶದ ಇತರ ಭಾಗಗಳಲ್ಲಿರುವ ರೈತರು ಸಾಲದ ಹೊರೆಯಿಂದ ನರಳುತ್ತಿರುವಂತೆ, ಮೈಸೂರು ಸಂಸ್ಥಾನದಲ್ಲಿಯೂ ರೈತರು

ಸಾಲದ ಕಷ್ಟವನ್ನು ಅನುಭವಿಸುತ್ತಿದ್ದಾರೆ ಇಲ್ಲಿಯ ಸಾಲವು ಸುಮಾರು ೩೫ ಕೋಟಿ ರೂಪಾಯಿಗಳಿಗಿಂತ ಕಡಿಮೆ ಇಲ್ಲವೆಂದು ಮೈಸೂರು ರೈತರ ಕಷ್ಟನಿವಾರಣಾ ಸಮಿತಿಯವರು ಅಂದಾಜು ಮಾಡಿದ್ದಾರೆ ಮೈಸೂರು ಸರ್ಕಾರದವರು ತಾತ್ಕಾಲಿಕವಾದ ಕೆಲವು ಕಾಯಿದೆಗಳನ್ನು ಮಂಜೂರು ಮಾಡಿ, ರೈತರ ಸಾಲದ ಕಷ್ಟಪರಿಹಾರಗಳಿಗೆ ಸಹಾಯಮಾಡುತ್ತಿದ್ದಾರೆ ಸರ್ಕಾರದವರು ಆಚರಣೆಗೆ ತಂದಿರುವ ಅಗ್ರಿಕಲ್ಚರಲ್ ರಿಲೀಫ್ ಆಕ್ಟ್ ಸ್ತೋತ್ರಾರ್ಹವಾಗಿದೆ ಇದರಿಂದ ಸಾಹುಕಾರರು ರೈತರ ಜಮೀನನ್ನು ಅಪಹರಿಸುವುದಕ್ಕಾಗಲಿ ಅಥವಾ ಸಾಲಕ್ಕಾಗಿ ಅವರನ್ನು ಕಾರಾಗೃಹಕ್ಕೆ ಕಳುಹಿಸುವುದಕ್ಕಾಗಲಿ ಆಗುವುದಿಲ್ಲ ಸಂಸ್ಥಾನದ ಅಡಮಾನದ ಬ್ಯಾಂಕು ಅನೇಕ ಭಾಗಗಳಲ್ಲಿ ಶಾಖೆಗಳನ್ನು ಸ್ಥಾಪಿಸಿ, ದೀರ್ಘ ಅವಧಿಯ ಸಾಲವನ್ನು ರೈತರಿಗೆ ಕಡಿಮೆ ಬಡ್ಡಿಯ ದರದಲ್ಲಿ ಒದಗಿಸುತ್ತಾ ಇದೆ. ಸುಲಭ ರೀತಿಯಲ್ಲಿ ರೈತರು ೫,೦೦೦ ರೂಪಾಯಿಗಳವರೆಗೂ ಈ ಸಂಸ್ಥೆಗಳಲ್ಲಿ ಸಾಲವನ್ನು ಹೊಂದಿ, ಸುಲಭವಾದ ಸಣ್ಣ ಕಂತುಗಳಲ್ಲಿ ತೀರಿಸಬಹುದು ಒಂದು ನೂರು ರೂಪಾಯಿಗಳ ಸಾಲವನ್ನು ರೂ ೯–೬–೦ಯ ವಾರ್ಷಿಕ ಕಂತಿನ ಮೇರೆ ೨೦ ವರ್ಷದಲ್ಲಿ ತೀರಿಸಬಹುದು

ಮೈಸೂರು ಸಂಸ್ಥಾನದ ವ್ಯವಸಾಯ ಶಾಖೆಯು ರೈತರ ಉದ್ಧಾರಕ್ಕಾಗಿಯೇ ದುಡಿಯುತ್ತಿದೆ ಸಂಸ್ಥಾನದ ಅನೇಕ ಭಾಗಗಳಲ್ಲಿ ಸ್ಥಳೀಯ ಬೆಳೆಯನ್ನು ಅನುಸರಿಸಿ, ವ್ಯವಸಾಯ ಶೋಧನಾ ಕ್ಷೇತ್ರಗಳನ್ನು ಸ್ಥಾಪಿಸಿ, ರೈತರ ವ್ಯವಸಾಯಕ್ಕೆ ಅನುಕೂಲವಾದ ಗೊಬ್ಬರ, ಬೀಜ ಮತ್ತು ಇತರ ಯಂತ್ರೋಪಕರಣಗಳನ್ನು ಒದಗಿಸಿಕೊಟ್ಟು, ರೈತರು ತಮ್ಮ ಸಂಪಾದನೆಯನ್ನು ಹೆಚ್ಚಿಸಿಕೊಳ್ಳುವಂತೆ ಪ್ರಭುತ್ವದವರು ಸಹಾಯಮಾಡುತ್ತಿದ್ದಾರೆ ಇರ್ವಿನ್ ನಾಲಾ ಕ್ಷೇತ್ರಗಳಲ್ಲಿ ಕಬ್ಬಿನ ಬೆಳೆಯನ್ನು ಬಹು ಮಟ್ಟಿಗೆ ಉತ್ತಮಪಡಿಸಿ, ರೈತರು ಕಬ್ಬಿನ ಬೆಳೆಯಿಂದ ಹೆಚ್ಚು ವರಮಾನ ಹೊಂದುವಂತೆ ಏರ್ಪಡಿಸಿದ್ದಾರೆ ಮಧ್ಯಪ್ರಾಂತದಲ್ಲಿರುವಂತೆ, ಇಲ್ಲಿಯೂ ಕೂಡ ರೈತರ ಸಾಲವನ್ನು ನಿರ್ಧರಿಸುವ ಸಂಧಾನ ಸಮಿತಿಗಳನ್ನು ಕೆಲವು ಭಾಗದಲ್ಲಿ ಸ್ಥಾಪಿಸಿದ್ದಾರೆ ಸಮಿತಿಯವರು ರೈತರ ಪಾವತಿ ಸಾಲದ ಮೊಬಲಗನ್ನು ನಿರ್ಧರಿಸಬೇಕಾದರೆ ರೈತರು ಸಾಲವಾಗಿ ಪಡೆದ ಮೊಬಲಗನ್ನೂ,

ಅವರು ಕೊಡಲು ಒಪ್ಪಿದ ಬಡ್ಡಿ ದರವನ್ನೂ, ಹೀಗೆ ಸಂಚಿತವಾದ ಬಡ್ಡಿ ಮೊಬಲಗನ್ನೂ, ಇದೆಲ್ಲಕ್ಕಿಂತ ರೈತರು ಪಾವತಿ ಮಾಡುವ ಸಾಮರ್ಥ್ಯವನ್ನೂ ಚೆನ್ನಾಗಿ ಪರಿಶೀಲನೆಮಾಡಬೇಕು ಎಂಬದಾಗಿ* ರೈತರ ಕಷ್ಟನಿವಾರಣಾ ಸಮಿತಿಯವರು ಹೇಳಿದ್ದಾರೆ ಹೀಗೆ ಮೈಸೂರು ಸರ್ಕಾರದವರು ಅನೇಕ ಪರಿಹಾರೋಪಾಯಗಳನ್ನು ಆಚರಣೆಗೆ ತಂದು, ರೈತರ ಸಾಲವನ್ನು ಕಡಿಮೆಮಾಡುವ ಪ್ರಯತ್ನ ಮಾಡುತ್ತಿದ್ದಾರೆ ನೂರಾರು ವರ್ಷಗಳಿಂದ ಬಂದಿರುವ ಪದ್ಧತಿಯನ್ನು ತತ್‌ಕ್ಷಣ ಬಿಡಿಸುವುದು ಕಷ್ಟ ಆದುದರಿಂದ ಸರ್ಕಾರದವರು ದಕ್ಷರಾದ, ವಾಚಾಳಿಗಳಾದ, ಅಧಿಕಾರಿಗಳಿಂದ, ಹೆಚ್ಚು ಪ್ರಚಾರಕಾರ್ಯ ನಡೆಸಿ, ರೈತರಿಗೆ ತಿಳುವಳಿಕೆಯನ್ನುಂಟುಮಾಡುವುದರಿಂದ ಪರಿಸ್ಥಿತಿಯು ಉತ್ತಮವಾಗುವುದರಲ್ಲಿ ಸಂದೇಹವಿಲ್ಲ

ಒಟ್ಟಿನಲ್ಲಿ ರೈತರ ಸಾಲವನ್ನು ಕಡಿಮೆಮಾಡಬೇಕಾದರೆ, ಮುಖ್ಯವಾಗಿ ಅವರ ಸಂಪಾದನಾ ಶಕ್ತಿಯನ್ನು ಹೆಚ್ಚಿಸಬೇಕು ವ್ಯವಸಾಯ ಶಾಖೆಯವರು ರೈತರ ವ್ಯವಸಾಯೋದ್ಯಮಗಳಲ್ಲಿ ಹೆಚ್ಚು ಆಸಕ್ತಿ ವಹಿಸಿ, ಅನುಕೂಲಗಳನ್ನು ಕಲ್ಪಿಸಬೇಕು ಜಮೀನುಗಳಿಗೆ ನೀರಾವರಿ ಸೌಕರ್ಯವನ್ನು ಹೆಚ್ಚಿಸುವುದು, ಜಮೀನು ಹಂಚಿಕೆಯನ್ನು ಸಾಧ್ಯವಾದ ಮಟ್ಟಿಗೆ ನಿಲ್ಲಿಸುವುದು, ರೈತರು ಉಪವೃತ್ತಿಯನ್ನು ಕೈಗೊಳ್ಳುವಂತೆ ಪ್ರೋತ್ಸಾಹಿಸುವುದು, ರೈತರು ಅಡಮಾನ ಬ್ಯಾಂಕು, ಸಹಕಾರ ಸಂಘಗಳಿಂದ ಹೆಚ್ಚು ಪ್ರಯೋಜನ ಹೊಂದುವಂತೆ ಮಾಡುವುದು, ಲೇವಾದೇವಿ ವಿಚಾರದಲ್ಲಿ ಸಾಹುಕಾರರಿಗೆ ಕೆಲವು ನಿರ್ಬಂಧಗಳನ್ನೇರ್ಪಡಿಸಿ ಲೈಸೆನ್ಸ್ ಪದ್ಧತಿಯನ್ನು ಆಚರಣೆಗೆ ತರುವುದು—ಇವೇ ಮುಂತಾದ ರೈತರ ಕಷ್ಟನಿವಾರಣಾ ಪ್ರಯತ್ನಗಳ ಮೂಲಕ ಪರಿಸ್ಥಿತಿಯನ್ನು ಉತ್ತಮಪಡಿಸಬೇಕು ಹೀಗೆ ಒಂದೇ ಕಾಲದಲ್ಲಿ ಅನೇಕ ವಿಧವಾದ ಪರಿಹಾರೋದ್ಯಮಗಳನ್ನು ಕೈಗೊಳ್ಳದಿದ್ದರೆ, ರೈತರ ಕಷ್ಟವು ಪರಿಹಾರವಾಗಲಾರದೆಂದು ಹೇಳಬಹುದು

## ೭. ಜಮೀನು ಹಂಚಿಕೆ

ವ್ಯವಸಾಯವೇ ಪ್ರಾಧಾನ್ಯ ವೃತ್ತಿಯಾಗುಳ್ಳ ದೇಶಗಳ ರೈತರ ಜೀವನವನ್ನು, ಅವರ ವ್ಯವಸಾಯಕ್ರಮ ಮತ್ತು ಜಮೀನು ತಾಕುಗಳ ಪ್ರಮಾಣಗಳಿಂದ ನಿರ್ಧರಿಸಬಹುದು ಸಾಗುವಳಿ ಜಮೀನೇ ಆಸರೆಯಾಗುಳ್ಳ ಜನಸಾಂದ್ರತೆ, ಜಮೀನಿನ ಸ್ವಭಾವ, ಪಿತ್ರಾರ್ಜಿತ ಆಸ್ತಿಯ ಹಂಚಿಕೆಯ ವಿಧಾನ— ಇವೇ ಮುಂತಾದುವುಗಳಿಂದ ಬೇರೆ ಬೇರೆ ದೇಶಗಳಲ್ಲಿ ರೈತರ ಜೀವನದ ಮಟ್ಟವು ಬೇರೆ ಬೇರೆ ರೀತಿಯಲ್ಲಿ ವ್ಯತ್ಯಾಸ ಹೊಂದುತ್ತಾ ಬರುತ್ತಿದೆ ಭರತಖಂಡದಲ್ಲಿ ಸಾಗುವಳಿ ಜಮೀನಿನ ತಾಕುಗಳ ಸಂಖ್ಯೆಯೂ ವರ್ಷ ವರ್ಷವೂ ಹೆಚ್ಚುತ್ತಿರುವುದಲ್ಲದೆ, ಈ ಸಣ್ಣ ತಾಕುಗಳು, ಗ್ರಾಮದ ಅನೇಕ ಭಾಗಗಳಲ್ಲಿ ಚದುರಿಹೋಗುತ್ತಿವೆ

ಸಾಗುವಳಿ ಜಮೀನಿನ ವಿಭಾಗವನ್ನು ಮತ್ತು ಅವುಗಳು ಹರಡಿರುವಿಕೆಯನ್ನು ಎರಡು ಭಾಗವಾಗಿ ವಿಂಗಡಿಸಬಹುದು ಒಂದು, ನ್ಯಾಯವಾದ ಹಕ್ಕುಳ್ಳ ಜಮೀನುದಾರರ ವಂಗಡಗಳಲ್ಲಿ ಉಂಟಾಗುತ್ತಿರುವ ವಿಂಗಡನೆ ಇನ್ನೊಂದು, ಜಮೀನಿನಲ್ಲಿ ಹಕ್ಕಿಲ್ಲದ ವ್ಯವಸಾಯಗಾರರ ಗುಂಪಿನಲ್ಲಿ ಉಂಟಾಗುತ್ತಿರುವ ಸಣ್ಣ ಸಣ್ಣ ವಿಭಾಗಗಳು ಈ ಎರಡು ಸಮುದಾಯಗಳಲ್ಲಿಯೂ ಪ್ರತಿನಿತ್ಯವೂ ಉಂಟಾಗುತ್ತಿರುವ ಹಂಚಿಕೆಯ ಜೊತೆಗೆ ಕ್ಷಾಮ, ರೋಗರುಜಿನಾದಿಗಳು, ಸಾಹುಕಾರರ ದಬ್ಬಾಳಿಕೆ— ಇವುಗಳೊಂದೊಂದರಿಂದಲೂ ಸಾಗುವಳಿ ಜಮೀನಿನ ತಾಕುಗಳು ಚಿಕ್ಕವಾಗುತ್ತಿವೆ ಕೆಲವು ಉದಾಹರಣೆಗಳಿಂದ ಇದನ್ನು ವಿಶದೀಕರಿಸುವುದು ಉತ್ತಮ

ಒಂದು ಗ್ರಾಮದಲ್ಲಿ ಒಬ್ಬ ಸಾಹುಕಾರನಿಗೆ ೫೦ ಎಕರೆ ಜಮೀನಿದ್ದರೆ ಅದನ್ನು ಸಾಗುವಳಿ ಮಾಡಿಸುವುದಕ್ಕೆ ಅವನು ಆ ಜಮೀನನ್ನು ಸ್ವಂತ ಜಮೀನಿಲ್ಲದ ಇತರರಿಗೆ ಹಂಚುತ್ತಾನೆ ಹೀಗೆ ವ್ಯವಸಾಯಕ್ಕೆ ಜಮೀನು ತೆಗೆದುಕೊಂಡವರು ತಮಗೆ ಅನಾನುಕೂಲವಾದಾಗ ಆ ಜಮೀನಿನಲ್ಲಿ ಒಂದು ಭಾಗವನ್ನು ತಮಗೆ ಬೇಕಾದವರಿಗೆ ಗೇಣಿ ಕೊಟ್ಟು ವ್ಯವಸಾಯ ಮಾಡಿಸುತ್ತಾರೆ ಅನೇಕ ಗ್ರಾಮಗಳಲ್ಲಿ ಈ ರೀತಿಯಾಗಿ

ನಡೆಯುತ್ತಿದೆ ಜಮೀನುದಾರರು ನಗರಗಳಲ್ಲಿದ್ದರೆ, ಈ ರೀತಿಯ ಹಂಚಿಕೆಯೂ ನಡೆಯಲೇಬೇಕು ಇದರ ಅನುಕೂಲ ಅನಾನುಕೂಲಗಳು ಏನೇ ಇರಲಿ, ಒಟ್ಟಿನಲ್ಲಿ ಸಾಗುವಳಿ ಜಮೀನು ಸಣ್ಣ ತಾಕುಗಳಾಗಿ ವಿಭಾಗವಾಗುವುದಕ್ಕೆ ಇದೊಂದು ಬಲವಾದ ಕಾರಣವಾಗಿದೆ ಹತ್ತು ಎಕರೆ ಸಾಗುವಳಿ ಜಮೀನನ್ನು ಅನುಭವಿಸುತ್ತಿರುವ ಒಬ್ಬ ರೈತನಿಗೆ ೫ ಜನ ಮಕ್ಕಳಿದ್ದರೆ, ಅವನು ತನ್ನ ೧೦ ಎಕರೆ ಜಮೀನನ್ನು ೫ ಜನಗಳಿಗೂ ಹಂಚಲೇಬೇಕು ಇದು ಇಲ್ಲಿಯ ಶಾಸನೀಯವಾದ ಪದ್ಧತಿ ಹೀಗೆ ಪ್ರತಿಯೊಬ್ಬನ ಭಾಗಕ್ಕೆ ಬರುವ ಎರಡು ಎಕರೆ ಜಮೀನು ಸಣ್ಣ ಸಣ್ಣ ತಾಕುಗಳಾಗಿ ಗ್ರಾಮದ ಅನೇಕ ಭಾಗಗಳಲ್ಲಿವೆ ಅವನ ಭಾಗಕ್ಕೆ ಬಂದಿರುವ ಈ ಸಣ್ಣ ತಾಕುಗಳನ್ನು ಅವನು ತನ್ನ ಮಕ್ಕಳಿಗೆ ಹಂಚಬೇಕು ಹೀಗಾಗಿ ಜಮೀನು ಸಣ್ಣ ತಾಕುಗಳಾಗುತ್ತಾ ಬಂದು, ಅದರಿಂದ ರೈತರು ಜೀವನ ನಡೆಸುವುದೇ ಕಷ್ಟವಾಗುತ್ತಿದೆ

ಜಮೀನು ತಾಕುಗಳು ಸಣ್ಣವಾಗಿ ಅನೇಕ ಕಡೆಗಳಲ್ಲಿ ಹರಡಿರುವುದಕ್ಕೆ ಬಹಳ ಕಾರಣಗಳಿವೆ. ನಮ್ಮ ಸಾಗುವಳಿಯಲ್ಲಿ ಖುಷ್ಕಿ, ತರಿ, ಬಾಗಾಯ್ತು ಎಂಬುದಾಗಿ ಮೂರು ಕ್ರಮಗಳಿವೆ ಖುಷ್ಕಿ ಸಾಗುವಳಿಗೆ ಹೊಲಗಳು ದೊಡ್ಡ ಭಾಗಗಳಾಗಿ ವಿಭಾಗಿಸಲ್ಪಟ್ಟು, ಮಧ್ಯೆ ತೆವರಿಗಳನ್ನೊಳಗೊಂಡಿವೆ ತರಿ ಸಾಗುವಳಿ ಜಮೀನನ್ನು ಬಹಳ ಸಣ್ಣ ಚೌಕಗಳನ್ನಾಗಿ ವಿಂಗಡಿಸಲಾಗಿದೆ ಹಾಗೆಯೇ ಬಾಗಾಯ್ತು ಜಮೀನುಗಳನ್ನೂ ಕೂಡ ಬಹಳ ಚಿಕ್ಕ ತಾಕುಗಳನ್ನಾಗಿ ವಿಂಗಡಿಸಿದ್ದಾರೆ ವಿಭಾಗಮಾಡಿಕೊಳ್ಳುವಾಗ ಈ ರೀತಿ ಜಮೀನು ವಿಂಗಡನೆಯು ಬಹಳ ಅನುಕೂಲವಾಗಿದೆ ರೆವಿನ್ಯೂ ಇಲಾಖಾ ಸಂಬಂಧವಾದ ರಿಕಾರ್ಡಿನಲ್ಲಿಯೂ ಕೂಡ ಖುಷ್ಕಿ, ತರಿ, ಬಾಗಾಯ್ತು ಜಮೀನುಗಳು ಇಷ್ಟೇ ಎಕರೆ ಇದ್ದರೆ ಒಂದು ನಂಬರಾಗಿ ಪರಿಗಣಿಸಲ್ಪಡುವುದೆಂದು ನಿರ್ಧರಿಸಿದ್ದಾರೆ ಆದರೆ ಈ ವಿಧಿಯೆಲ್ಲವೂ ಪುಸ್ತಕಗಳಲ್ಲಿವೆಯೇ ಹೊರತು ಆಚರಣೆಯಲ್ಲಿ ಇಲ್ಲ ತಂದೆಯಾದವನು ತನ್ನ ಆಸ್ತಿಯನ್ನು ಮಕ್ಕಳಿಗೆ ಹಂಚುವಾಗ, ತನಗಿರುವ ಖುಷ್ಕಿ, ತರಿ, ಬಾಗಾಯ್ತು ಜಮೀನನ್ನು ಸಮನಾಗಿ ವಿಂಗಡಿಸಿ, ಎಷ್ಟೇ ಸಣ್ಣದಾದರೂ ಒಂದೊಂದು ಭಾಗವನ್ನು ಒಬ್ಬೊಬ್ಬ ಮಗನಿಗೆ ಹಂಚುತ್ತಾನೆ

ಕೆಲವು ಸಾರ್ವಜನಿಕ ಕೆಲಸಗಳಿಗೆ ಸರ್ಕಾರದವರು ಜನಗಳ ಜಮೀನನ್ನು ತೆಗೆದುಕೊಳ್ಳುವುದು ಪದ್ಧತಿ ಅವರು ಅನುಸರಿಸುವ ನೀತಿಯು ಕೆಲವು ಸಂದರ್ಭಗಳಲ್ಲಿ ಜಮೀನು ತಾಕುಗಳ ಸಂಖ್ಯೆಯನ್ನು ಹೆಚ್ಚಿಸುತ್ತದೆ ಅನೇಕ ಸಂದರ್ಭಗಳಲ್ಲಿ ತಾವು ವಹಿಸಿಕೊಂಡಿರುವ ಒಂದು ತಾಕು ಜಮೀನಿಗೆ, ಅಷ್ಟೇ ವಿಸ್ತಾರವುಳ್ಳ ಜಮೀನನ್ನು ಅನೇಕ ಕಡೆಗಳಲ್ಲಿ ಇರುವ ಸಣ್ಣಸಣ್ಣ ತಾಕುಗಳಾಗಿ ಬದಲಾಯಿಸಿಕೊಟ್ಟಿದ್ದಾರೆ ೧೫ ಗುಂಟೆ ವಿಸ್ತಾರವುಳ್ಳ ಒಂದು ಜಮೀನನ್ನು ತೆಗೆದುಕೊಂಡು, ಅದಕ್ಕೆ ಸರ್ಕಾರದವರು ಎರಡು ಅಥವಾ ಮೂರು ಗುಂಟೆ ವಿಸ್ತಾರವುಳ್ಳ, ಆರು ಕಡೆಗಳಲ್ಲಿರುವ ೬ ತಾಕುಗಳನ್ನು ಕೊಟ್ಟಿದ್ದಾರೆ ಈ ವಿಧವಾದ ಅನೇಕ ನಿದರ್ಶನಗಳನ್ನು ನಾವು ನೋಡಬಹುದು

ನಮ್ಮ ರೈತರಿಗೆ ಜಮೀನೇ ಸರ್ವಸ್ವವಾಗಿದೆ ಅವರು ಸಾಲವನ್ನು ಮಾಡುವಾಗ ಈ ಜಮೀನನ್ನು ಆಧಾರ ಅಥವಾ ಭೋಗ್ಯವನ್ನಾಗಿ ಮಾಡಿಯೇ ತೆಗೆಯಬೇಕು ಸಾಲದ ಭಾರವು ಹೆಚ್ಚಾದಾಗ, ಹೀಗೆ ಆಧಾರ, ಭೋಗ್ಯಮಾಡಿದ ಜಮೀನಿನ ಒಂದು ಭಾಗವನ್ನು ಕ್ರಯಮಾಡಿ, ಸಾಲ ತೀರಿಸುವುದು ವಾಡಿಕೆ ಇದು ಅನಿವಾರ್ಯವಾಗಿ ನಡೆಯುತ್ತಲೇ ಇದೆ ಜಮೀನು ತಾಕುಗಳ ಸಂಖ್ಯೆಯನ್ನು ಹೆಚ್ಚಿಸುವುದಕ್ಕೆ ಇದೂ ಒಂದು ಕಾರಣ

ಈಗ ಹೊಸದಾಗಿ ಪ್ರಾರಂಭಿಸಿರುವ "ರಿಕಾರ್ಡ್ ಆಫ್ ರೈಟ್ಸ್" ನಿಬಂಧನೆಯ ಪ್ರಕಾರ, ರೈತರ ಜಮೀನು ತಾಕುಗಳ ಸಂಖ್ಯೆಯು ವೃದ್ಧಿಯಾಗುತ್ತಿದೆ ಈ ಕಾರ್ಯಕ್ರಮದಿಂದ ರೈತರಿಗೆ ಕಂದಾಯ ಕೊಡುವ ವಿಚಾರದಲ್ಲಿ, ಸಾಲ ತೆಗೆಯುವ ವಿಚಾರದಲ್ಲಿ, ಕಂದಾಯ ಕಡಿಮೆ ಅಥವಾ ವಿಮೋಚನೆ ಆಗುವ ವಿಚಾರದಲ್ಲಿ,' ಸೌಕರ್ಯಗಳುಂಟಾಗುತ್ತಿದ್ದರೂ, ಜಮೀನಿನ ತಾಕುಗಳ ಸಂಯೋಜನೆಗೆ ಇದು ಸಹಾಯಮಾಡುವುದಿಲ್ಲ ಸಾರ್ವಜನಿಕ ಹಿತದೃಷ್ಟಿಯಿಂದ ನೋಡಿದರೆ, ರೈತರ ಜೀವನಕ್ಕೆ ಇದು ಹಿತಕಾರಿಯಾಗಿಲ್ಲ ಏಕೆಂದರೆ ರೈತರ ಜಮೀನು ಯಾವಾಗ ಸಣ್ಣ ಸಣ್ಣ ತಾಕುಗಳಾಗಿ ಹೋಗುತ್ತದೋ, ಆಗ ಅವನ ಆದಾಯವು ಕಡಿಮೆಯಾಗುತ್ತಾ ಬಂದು, ಅವನ ಜೀವನದ ಮಟ್ಟವೂ ಇಳಿದು, ಅವನು ಬಹಳ ಕಷ್ಟಕ್ಕೆ ಗುರಿಯಾಗುತ್ತಾನೆ

ಭರತಖಂಡದಲ್ಲಿ ಜನಸಂಖ್ಯೆ ಹೆಚ್ಚುತ್ತ ಬಂದಹಾಗೆಲ್ಲಾ, ಜಮೀನಿನಿಂದ ಜೀವಿಸುವವರ ಸಂಖ್ಯೆಯೂ ಹೆಚ್ಚುತ್ತಿದೆ ಇಲ್ಲಿರತಕ್ಕ ಜಮೀನಿನ ಪ್ರಮಾಣವು ಇದ್ದಷ್ಟೇ ಇದ್ದು ಜನಸಂಖ್ಯೆಯು ಹೆಚ್ಚುತ್ತಿದ್ದರೆ, ಪ್ರತಿಯೊಬ್ಬ ವ್ಯವಸಾಯಗಾರನಿಗೆ ಬರತಕ್ಕ ಜಮೀನಿನ ಅಳತೆಯು ಕಡಿಮೆಯಾಗುತ್ತ ಬರುತ್ತದೆ ಇತರ ದೇಶಗಳಂತೆ ನಮ್ಮ ದೇಶದಲ್ಲಿರುವ ಜನರು ವ್ಯವಸಾಯವನ್ನು ಬಿಟ್ಟು ಬೇರೆ ವೃತ್ತಿಯನ್ನು ಅವಲಂಬಿಸುವುದಕ್ಕೆ ಇಷ್ಟಪಡುವುದಿಲ್ಲ ನಮ್ಮ ಜನರಿಗೆ ಮಣ್ಣಿನಮೇಲೆ ಬಹಳ ಆಸೆ ಹಣವಿದ್ದವನು ಜಮೀನು ಕೊಳ್ಳುವುದರಿಂದಲೂ, ಹಣವಿಲ್ಲದವನು ಜಮೀನು ಮಾರುವುದರಿಂದಲೂ ಜಮೀನು ತಾಕುಗಳ ಸಂಖ್ಯೆ ಪ್ರತಿ ದಿನವೂ ಹೆಚ್ಚುತ್ತಾ ಇದೆ

ಮೇಲ್ಕಂಡ ಕಾರಣಗಳಿಂದ ರೈತರ ಪಾಲಿಗೆ ಬರುತ್ತಿರುವ ಜಮೀನು ತಾಕುಗಳು ದಿನೇ ದಿನೇ ಚಿಕ್ಕದಾಗುತ್ತಿರುವುವು ವ್ಯವಸಾಯವೇ ಮುಖ್ಯವಾಗಿರುವ ಇತರ ದೇಶಗಳ ತಾಕುಗಳ ಪ್ರಮಾಣದೊಡನೆ ನಮ್ಮ ದೇಶದ ತಾಕುಗಳನ್ನು ಹೋಲಿಸಿದರೆ ಆಗ ವಿಷಯವು ಸ್ಪಷ್ಟವಾಗುವುದು —

| ನಂ | ದೇಶದ ಹೆಸರು | ತಾಕುಗಳ ಸರಾಸರಿ ಪ್ರಮಾಣ |
|---|---|---|
| 1 | ಬಂಗಾಳಾ | 3 ಎಕರೆ * |
| 2 | ಪಂಜಾಬು | 6 ,, † |
| 3 | ಬೊಂಬಾಯಿ | 7 ,, ‡ |
| 4 | ಬೆಲ್ಜಿಯಂ | 5 7 ,, $ |
| 5 | ಫ್ರಾನ್ಸ್ | 15 05 ,, § |
| 6 | ಜರ್ಮನಿ | 21 0 ,, § |
| 7 | ಡೆನ್ಮಾರ್ಕ್ | 35 59 ,, § |
| 8 | ಮೈಸೂರು | 6 5 ,, ‖ |

* "Agricultural Progress in Western India", by Keatinge, p 63–ff
† "Recent Economic Development in the Panjab" by James Wilson, p 45
‡ "Land and Labour in Deccan", by H Mann, pp 43–49
$ "Land and Labour lessons from Belgium", by Rowntree p 106
§ "Economic Rural", by Jazier, p 347
‖ "Agriculture in Mysore", Govt Publication, p 3

| ನಂ | ಹಳ್ಳಿಯ ಹೆಸರು | 1 ಎಕರೆಗಿಂತ ಕಮ್ಮಿ ತಾಕು | 1—5 ಎಕರೆ ತಾಕು | 5—10 ಎಕರೆ ತಾಕು | 10 ಎಕರೆ ಮೇಲೆ ಇರುವ ತಾಕು |
|---|---|---|---|---|---|
| 1 | ದಖನ್ ದೇಶದ ಪಿಂಪ್ಲಸೌದಿಗರ್ | 382 | 321 | 20 | 8 * |
| 2 | ತಿನ್ನವೆಲ್ಲಿಯ ಗಂಗೈಕೊಂಡನ್ | 105 | 220 | 250 | 110 † |
| 3 | ಮೈಸೂರು ಡಿಸ್ಟ್ರಿಕ್ಟಿನ ದುದ್ದ | 93 | 146 | 41 | 4 ‡ |
| 4 | ದಕ್ಷಿಣ ಗುಜರಾತಿನ ಅಟ್ಗಂ | 109 | 132 | 71 | 46 § |

| ನಂ | ದೇಶದ ಹೆಸರು | ಸಾಗುವಳಿ ತಾಕುಗಳ ಸಂಖ್ಯೆ | ತಾಕುಗಳ ಸರಾಸರಿ ಪ್ರಮಾಣ |
|---|---|---|---|
| 1 | ಇಂಡಿಯಾ | 550 ಲಕ್ಷ | 5 ಎಕರೆ |
| 2 | ಇಂಗ್ಲೆಂಡ್ | 5 9 ,, | 55 ,, |
| 3 | ಅಮೇರಿಕಾ | 63 0 ,, | 157 ,, |
| 4 | ಕಾನಡಾ | 7 1 ,, | 198 ,, |
| 5 | ಜರ್ಮನಿ | 51 0 ,, | 21 ,, |
| 6 | ಜಪಾನ್ | 56 0 ,, | 4·2 ,, ‖ |

* "Land and Labour in Deccan Village", by Mann, p 46
† "Some South Indian Villages", by G Slater, p 57
‡ "Personal Investigation", by the Author
§ "Land and Labour in South Gujarat Village", by Mukhtyar, p. 106
‖ "Planned Economy for India", by Sir M V , page Appendix

| ನಂ | ಪ್ರಾಂತದ ಹೆಸರು | ಪ್ರತಿ ರೈತನಿಗಿರತಕ್ಕ ಸಾಗುವಳಿ ಜಮೀನು |
|---|---|---|
| 1 | ಬೊಂಬಾಯಿ | 12 15 ಎಕರೆ |
| 2 | ವಾಯುವ್ಯಪ್ರಾಂತ | 11 22 ,, |
| 3 | ಪಂಜಾಬು | 9 8 ,, |
| 4 | ಮಧ್ಯಪ್ರಾಂತ, ಬಿರಾರ್ | 8 48 ,, |
| 5 | ಬರ್ಮ | 5 65 ,, |
| 6 | ಮದರಾಸು | 4·91 ,, |
| 7 | ಬಂಗಾಳಾ | 3 12 ,, |
| 8 | ಬಿಹಾರ್ | 3 09 ,, |
| 9 | ಅಸ್ಸಾಂ | 2 96 ,, |
| 10 | ಸಂಯುಕ್ತಪ್ರಾಂತ | 2 51 ,, * |

ಮೇಲ್ಕಂಡ ತಃಖ್ತೆಗಳಿಂದ ಇಂಡಿಯಾದೇಶದ ತಾಕುಗಳ ಸಂಖ್ಯೆಯು ಬಹಳ ಹೆಚ್ಚಾಗಿದೆಯೆಂದೂ, ಪ್ರಮಾಣದಲ್ಲಿ ಬಹಳ ಚಿಕ್ಕ ವಾಗಿವೆಯೆಂದೂ ಗೊತ್ತಾಗುತ್ತದೆ ರೈತರ ಆರ್ಥಿಕಾಭಿವೃದ್ಧಿಗೆ ಹೀಗೆ ಚಿಕ್ಕದಾಗುತ್ತಿರುವ ತಾಕುಗಳನ್ನು ಸಾಗುವಳಿ ಮಾಡುವುದು ಒಂದು ಅಡಚಣೆಯಾಗಿದೆ ಇವು ರೈತರ ನಿತ್ಯಜೀವನಕ್ಕೆ ಅವಶ್ಯಕವಾದ ಅನುಕೂಲ ಗಳನ್ನು ಕಲ್ಪಿಸುತ್ತಿಲ್ಲ ದಿನೇ ದಿನೇ ಚಿಕ್ಕದಾಗುತ್ತಿರುವ ಸಾಗುವಳಿ ಜಮೀನಿನ ತಾಕುಗಳಿಂದ ಬಹಳ ಅನಾನುಕೂಲಗಳಿವೆ. ಸಣ್ಣ ತಾಕುಗಳ ಸಾಗುವಳಿಗೆ ಖರ್ಚು ಹೆಚ್ಚು, ಉತ್ಪತ್ತಿಯು ಕಡಿಮೆ ಜಮೀನುಗಳಿಗೆ ಬೇಲಿ ಹಾಕುವುದು ಕಷ್ಟ ಯಾವಾಗ ಬೇಲಿಯಿಂದ ಪೈರುಗಳು ರಕ್ಷಿಸಲ್ಪಡುವುದಿಲ್ಲವೋ, ಆಗ ರೈತರು ಲಾಭದಾಯಕವಾಗಿ ತೋರುವ ಬೆಳೆಯನ್ನು ಮಾಡುವುದಕ್ಕೆ ಆಗುವುದಿಲ್ಲ ಆದುದರಿಂದಲೇ ನಮ್ಮ ಹಳ್ಳಿಗಳಲ್ಲಿ ರೈತರೆಲ್ಲರೂ ಒಂದೇ ಕಾಲದಲ್ಲಿ, ಒಂದೇ ಸಲ, ಒಂದೇ ಬೆಳೆಯನ್ನು ಮಾಡುತ್ತಿರುವುದು ತಾಕುಗಳ, ವ್ಯವಸಾಯೋಪಕರಣಗಳ, ಅಥವಾ ಪ್ರತಿಫಲದ ವಿಷಯಗಳು ರೈತರನ್ನು ಬಾಧಿಸುತ್ತಿಲ್ಲ ಈ ವಿಧವಾದ ಸಮಸ್ಯೆಗಳಿಗೆ

* "Mysore Census Report", 1921, Vol 1, p 244

ಅವರು ಗಮನ ಕೊಡುತ್ತಲೇ ಇಲ್ಲ ಆದುದರಿಂದಲೇ ನಮ್ಮ ದೇಶದ ವ್ಯವಸಾಯವು ಬಹಳ ಹಿಂದುಳಿದಿದೆ

ಜಮೀನನ್ನೇ ಮುಖ್ಯವಾಗಿ ನಂಬಿರುವ ನಮ್ಮ ದೇಶದ ರೈತರಿಗೆ, ಸಾಗುವಳಿಯಿಂದಲೇ ಅವರ ಜೀವನವು ನಡೆಯುವುದಿಲ್ಲ ಸಾಗುವಳಿ ಕಾಲದಲ್ಲಿ ವಿನಾ ಉಳಿದ ಕಾಲದಲ್ಲಿ ಅವರಿಗೆ ತಕ್ಕಷ್ಟು ಕೆಲಸವಿಲ್ಲ ವ್ಯವಸಾಯವಲ್ಲದೆ ಬೇರೆ ಅವರಿಗೆ ಉದ್ಯೋಗವಿಲ್ಲದೇ ಇರುವುದರಿಂದಲೂ, ವ್ಯವಸಾಯಕ್ಕೆ ಬೇಕಾಗಿರುವ ಸಂಖ್ಯೆಗಿಂತ ಅವರ ಸಂಖ್ಯೆಯು ಹೆಚ್ಚಾಗಿರುವದ್ದರಿಂದಲೂ, ಅವರು ಬಡತನದಲ್ಲಿಯೇ ಮುಳುಗಿದ್ದಾರೆ ಮೇಲ್ಕಂಡ ಅಂಕಿಗಳ ಪ್ರಕಾರ, ಅವರ ಪಾಲಿಗೆ ಬರತಕ್ಕ ಜಮೀನು ತಾಕು, ಅವರ ಜೀವನಕ್ಕೆ ಸಾಕಾಗುವುದಿಲ್ಲ ನಮ್ಮ ದೇಶದಲ್ಲಿ ಒಬ್ಬ ರೈತನಿಗೆ ಸಾಕಾಗತಕ್ಕ ತಾಕಿನ ಪ್ರಮಾಣವನ್ನು ನಿರ್ಧರಿಸುವುದು ಸ್ವಲ್ಪ ಕಷ್ಟ. ಯಾಕೆಂದರೆ ಜಮೀನಿನ ಯೋಗ್ಯತೆ, ಅಲ್ಲಿಯ ವಾಯುಗುಣ, ಸಾಗುವಳಿ ಕ್ರಮ, ಇವೆಲ್ಲವನ್ನೂ ವಿಮರ್ಶೆಮಾಡಿ, ಪ್ರಮಾಣವನ್ನು ನಿಷ್ಕರ್ಷಿಸಬೇಕು ಈ ವಿಚಾರದಲ್ಲಿ ಅರ್ಥಶಾಸ್ತ್ರಜ್ಞರು ಬೇರೆ ಬೇರೆ ರೀತಿಯಾಗಿ ಅಭಿಪ್ರಾಯಪಟ್ಟಿದ್ದಾರೆ ಒಬ್ಬ ರೈತನ ಸಂಸಾರವು ಕಷ್ಟವಿಲ್ಲದೆ ಜೀವನವನ್ನು ನಡೆಸಬೇಕಾದರೆ ಕನಿಷ್ಠಪಕ್ಷ ಅವನಿಗೆ ೨೦ ಅಥವಾ ೨೫ ಎಕರೆ ಖುಷ್ಕಿ ಜಮೀನೂ ಅಥವಾ ೫–೬ ಎಕರೆ ತರಿ ಜಮೀನೂ ಇರಬೇಕೆಂದು* ಬಿ ಜಿ ಸಪ್ರೆಯವರು ಅಭಿಪ್ರಾಯಪಟ್ಟಿದ್ದಾರೆ ಒಂದು ಒಳ್ಳೆಯ ಬಾವಿ ಮತ್ತು ಮನೆಯನ್ನೊಳಗೊಂಡಿರುವ ೫೦ ಅಥವಾ ೬೦ ಎಕರೆ ಜಮೀನಿನ ತಾಕು ದಖನ್ ದೇಶದಲ್ಲಿ ಮಾದರಿ ತಾಕಾಗುವುದೆಂದು ಕೀಟಿಂಜ್† ರವರು ಹೇಳಿದ್ದಾರೆ ಖುಷ್ಕಿ, ತರಿ ಮತ್ತು ಬಾಗಾಯ್ತು ಎಲ್ಲವೂ ಸೇರಿ, ಕನಿಷ್ಠಪಕ್ಷ ೨೦ ಎಕರೆಗಳಾದರೂ ಇರಲೇಬೇಕೆಂದು ಹೆರಾಲ್ಡ್ ಮನ್ ರವರು‡ ಬರೆದಿದ್ದಾರೆ ಒಟ್ಟಿನಲ್ಲಿ ಮಾದರಿ ತಾಕನ್ನು ನಿರ್ಧರಿಸುವುದು ಕಷ್ಟ ಎಲ್ಲಾ ದೇಶದಲ್ಲಿಯೂ ಇದೇ ವಿಧವಾದ ಕಷ್ಟವಿದೆ

* "Essentials of Indian Economics", by B. G Sapre, p 126
† "Rural Economy in Bombay Deccan", by Kealinge, pp 52–53
‡ "Land and Labour in a Deccan Village", by Mann

| ನಂ | ದೇಶ. | ತಾಕುಗಳ ಸರಾಸರಿ ಪ್ರಮಾಣ |
|---|---|---|
| 1 | ಜರ್ಮನಿ | 21 5 ಎಕರೆ |
| 2 | ಡೆನ್ಮಾರ್ಕ್ | 40 0 ,, |
| 3 | ಹಾಲೆಂಡ್ | 26 0 ,, |
| 4 | ಫ್ರಾನ್ಸ್ | 20 5 ,, |
| 5 | ಬೆಲ್ಜಿಯಂ | 14 5 ,, |

ಇಟಲಿ ದೇಶದ ೪೯,೩೧,೦೦೦ ಸಾಗುವಳಿದಾರರಲ್ಲಿ, ೩೨,೭೫,೦೦೦ ಜನರಿಗೆ ೨॥ ಎಕರೆಗಿಂತ ಕಡಿಮೆಯಾದ ತಾಕುಗಳು ಇವೆ ಜಪಾನ್ ದೇಶದಲ್ಲಿ ಶೇ ೯೬ ಜನ ಸಾಗುವಳಿದಾರರು, ೮ ಎಕರೆಗಿಂತ ಕಡಿಮೆ ತಾಕಿನ ಜಮೀನುದಾರರಾಗಿದ್ದಾರೆ ಆದರೆ ಈ ಸಣ್ಣ ತಾಕುಗಳಿರುವ ದೇಶಗಳಲ್ಲೆಲ್ಲಾ, ರೈತರ ಜೀವನದ ಅಂತಸ್ತು ಸರಿಯಾಗಿರುವಂತೆ ಹಲವು ಉಪಾಯಗಳು ಆಚರಣೆಯಲ್ಲಿವೆ

ಭರತಖಂಡದಲ್ಲಿ ಹೀಗೆ ವರ್ಷ ವರ್ಷವೂ ಚಿಕ್ಕದಾಗುತ್ತಿರುವ ಜಮೀನು ತಾಕುಗಳ ವಿಷಯದಲ್ಲಿ, ಈಗಲೇ ಸರಿಯಾದ ಕಾರ್ಯಕ್ರಮವನ್ನು ಅನುಸರಿಸದಿದ್ದರೆ, ಮುಂದೆ ಇದರಿಂದ ಬಹಳ ಅನರ್ಥ ಸಂಭವಿಸಬಹುದು ಜಮೀನು ತಾಕುಗಳು ಸಣ್ಣವಾಗುತ್ತ ಬಂದಹಾಗೆಲ್ಲಾ, ಅವುಗಳ ವ್ಯವಸಾಯದಲ್ಲಿ ಅಸಡ್ಡೆ ಹುಟ್ಟುವುದು ಅವುಗಳಿಗೆ ಗೊಬ್ಬರ, ಗೋಡು, ಬೇಲಿ, ಮುಂತಾದ ಸೌಕರ್ಯಗಳನ್ನು ಒದಗಿಸಲು ಕಷ್ಟವಾಗುತ್ತದೆ ಅವುಗಳ ಬೇಸಾಯಕ್ರಮವನ್ನು ಸ್ವಲ್ಪವೂ ಬದಲಾಯಿಸುವುದಕ್ಕೆ ಆಗದೆ ಅಕ್ಕಪಕ್ಕದವರು ಯಾವಾಗ ಯಾವ ಬೆಳೆಯನ್ನು ಮಾಡುವರೋ, ಅದರ ಹಾಗೆಯೇ ಮಾಡಬೇಕಾಗುವುದು ಒಬ್ಬ ರೈತನಿಗೆ ಸೇರಿದ ನಾಲ್ಕಾರು ತಾಕುಗಳು ಗ್ರಾಮದ ನಾಲ್ಕಾರು ಕಡೆಗಳಲ್ಲಿದ್ದರೆ, ಅವನಿಗೆ ಬೇಸಾಯದ ಖರ್ಚು ಹೆಚ್ಚುವುದು ಉತ್ತಮ ಉಪಕರಣಗಳನ್ನು ಉಪಯೋಗಿಸುವುದು ಲಾಭಕರವಾಗಿರುವುದಿಲ್ಲ ಒಂದು ತಾಕಿನಿಂದ ಇನ್ನೊಂದು ತಾಕಿಗೆ ಹೋಗುವುದಕ್ಕೆ ಕಾಲಹರಣವಾಗುವುದು. ಹೀಗೆ

ಅನೇಕ ಕಡೆಗಳಲ್ಲಿ ಈ ಸಣ್ಣ ತಾಕುಗಳಿರುವುದರಿಂದ, ಅಕ್ಕಪಕ್ಕದವರೊಡನೆ ವ್ಯಾಜ್ಯವಿದ್ದೇ ಇರುವುದು

ರೈತರ ಜಮೀನು ಅವರ ವಾಸಸ್ಥಳದಿಂದ ದೂರವಾಗಿರುವಷ್ಟೂ ಅವರಿಗೆ ಕಷ್ಟವಾಗುವುದಲ್ಲದೆ, ವ್ಯವಸಾಯದ ಖರ್ಚು ಹೆಚ್ಚುವುದು ಈ ರೀತಿ ದೂರವಾಗಿರುವ ಪ್ರತಿ ೫೦೦ ಗಜಕ್ಕೂ, ರೈತರು ಜಮೀನಿನ ಉಳುಮೆ ಮತ್ತು ಕೂಲಿ ಕೆಲಸಗಳಿಗೆ ಶೇ ೫೩ ರಷ್ಟನ್ನೂ, ಗೊಬ್ಬರ ಗೋಡು ಸಾಗಿಸುವುದಕ್ಕೆ ಶೇ ೨೦ರಿಂದ ೩೫ರಷ್ಟನ್ನೂ, ಬೆಳೆಯ ಫಸಲನ್ನು ಸಾಗಿಸುವುದಕ್ಕೆ ಶೇ ೧೫ರಿಂದ ೩೨ರಷ್ಟನ್ನೂ ಹೆಚ್ಚು ಖರ್ಚು ಮಾಡಬೇಕಾಗುವುದು ಎಂಬದಾಗಿ ವಿಮರ್ಶಕಾರರು ಹೇಳಿದ್ದಾರೆ* ರೈತರ ಆರ್ಥಿಕಜೀವನವು ಉತ್ತಮವಾಗಬೇಕಾದರೆ, ಅವರ ವ್ಯವಸಾಯಕ್ರಮವು ಅಭಿವೃದ್ಧಿಯಾಗಬೇಕಾದರೆ, ಒಡೆದುಹೋಗುತ್ತಿರುವ ಅವರ ಜಮೀನು ತಾಕುಗಳನ್ನು ಒಟ್ಟುಗೂಡಿಸಬೇಕು ಇತರ ದೇಶಗಳಲ್ಲಿ ತಾಕುಗಳನ್ನು ಒಟ್ಟುಗೂಡಿಸುವುದಕ್ಕೆ ನಡೆಸಿರುವ ಚಳವಳಿಯು ಎಷ್ಟರ ಮಟ್ಟಿಗೆ ರೈತರ ಕಷ್ಟನಿವಾರಣೆಯನ್ನು ಮಾಡಿದೆ ಎಂಬುದನ್ನು ವಿಚಾರ ಮಾಡುವುದು ಅವಶ್ಯಕ ಹೀಗೆ ವಿಮರ್ಶೆಮಾಡುವುದರಿಂದ, ನಮ್ಮ ದೇಶದಲ್ಲಿ ಕೈಗೊಳ್ಳುವ ಕಾರ್ಯಕ್ರಮವು ಸುಲಭವಾಗಬಹುದು

ಪ್ರಯೋಜನಕಾರಿಯಾದ ತಾಕುಗಳ ಸಂಯೋಗವನ್ನು ಇಂಗ್ಲೆಂಡ್ ದೇಶದ ಜಮೀನುಗಳಿಗೆ ಅವರು (Enclosure system) ಬೇಲಿಯನ್ನು ಕಲ್ಪಿಸುವ ಚಳವಳಿಯಲ್ಲಿ ಚೆನ್ನಾಗಿ ಕಾಣಬಹುದು ಈ ಚಳವಳಿಯಿಂದ, ಬಯಲಾಗಿದ್ದ ಹೊಲಗಳೆಲ್ಲವೂ ಬೇಲಿಯಿಂದ ಆವರಿಸಲ್ಪಟ್ಟು, ಸ್ವತಂತ್ರ ವ್ಯವಸಾಯಕ್ಕೆ ಅನುಕೂಲವಾಯಿತು, ಈ ಕಾರ್ಯಕ್ರಮವನ್ನು ಮೊದಲು ಆಚರಣೆಗೆ ತರುವುದಕ್ಕೆ ಸ್ವಲ್ಪ ಕಷ್ಟವಾದರೂ, ಅನಂತರ ಇದರಿಂದ ಪ್ರಯೋಜನವಾದ, ಲಾಭದಾಯಕವಾದ ಜಮೀನು ತಾಕುಗಳು ಸೃಷ್ಟಿಯಾದುವು ಸುವ್ಯವಸ್ಥಿತ ರೀತಿಯಲ್ಲಿ ಕಾರ್ಯಕ್ರಮವು ಆಚರಣೆಯಲ್ಲಿ ಬರದಿದ್ದರೂ, ಸ್ವಲ್ಪ ಕಾಲದಲ್ಲಿ ಜನರು ಇದರ ಪ್ರಯೋಜನವನ್ನು ಕಂಡು, ಸಣ್ಣ ಸಣ್ಣ ಜಮೀನು ತಾಕುಗಳ ಸಾಗುವಳಿದಾರರು, ತಮ್ಮ

* "Indian Economics", by Jathar and Beri, Vol 1, p 198

ತಾಕುಗಳನ್ನು ಇತರ ಜಮೀನುದಾರರಿಗೆ ಕೊಟ್ಟುಬಿಟ್ಟು, ತಾವು ಕೈಗಾರಿಕೋದ್ಯಮಗಳಿಗೆ ಹೊರಟುಹೋದರು ಹೀಗೆ ಹೆಚ್ಚಿನ ಪ್ರಜಾಸಂಖ್ಯೆಯು ಹಳ್ಳಿಗಳನ್ನು ಬಿಟ್ಟು ಬೇರೆ ವೃತ್ತಿಗಳಿಗೆ ಹೊರಟುಹೋದುದರಿಂದ, ಉಳಿದ ಜನರ ವ್ಯವಸಾಯಕ್ರಮವನ್ನು ಒಂದು ವಿಧವಾದ ಹದ್ದುಬಸ್ತಿನಲ್ಲಿಟ್ಟು, ಅದರ ನ್ಯೂನತೆಗಳನ್ನು ಸರಿಪಡಿಸಲಾಯಿತು *

ಆಧುನಿಕ ರೀತಿಯ ತಾಕುಗಳ ಸಂಯೋಜನೆಯನ್ನು ಡೆನ್ಮಾರ್ಕ್ ದೇಶದಲ್ಲಿ ನಾವು ಚೆನ್ನಾಗಿ ನೋಡಬಹುದು ಶೇ ೬೦ರಷ್ಟು ಜಮೀನು ತಾಕುಗಳು ೬ ಎಕರೆಗಿಂತ ಚಿಕ್ಕವಾಗಿ, ಇವುಗಳ ಸಾಗುವಳಿಯು ಕೂಡ ಅಷ್ಟು ಲಾಭದಾಯಕವಾಗಿರಲಿಲ್ಲ ನೆಪೋಲಿಯನ್ ಯುದ್ಧವಾದ ತರುವಾಯ ಸ್ವದೇಶಪ್ರೇಮಪೂರಿತವಾದ ಪುನರುದ್ಧಾರ ಚಳವಳಿಗಳು ಪ್ರಾರಂಭವಾದುವು ದೇಶದ ಅನೇಕ ಭಾಗಗಳಲ್ಲಿ ಜನರು ಮಾಂಸ, ಬೆಣ್ಣೆ ಮತ್ತು ಮೊಟ್ಟೆ— ಇವುಗಳನ್ನು ಪರದೇಶಗಳಿಗೆ ರಫ್ತು ಮಾಡಿ, ಹಣಸಂಪಾದನೆ ಮಾಡುವ ಕಸಬುಗಳನ್ನು ಕೈಗೊಂಡರು ಯಾವಾಗ ಈ ರೀತಿಯ ಉಪವೃತ್ತಿಗಳು ಹೆಚ್ಚಾದುವೋ, ಆಗ ಸರ್ಕಾರದವರು ಜಮೀನುಗಳನ್ನೆಲ್ಲಾ ತಾವು ವಹಿಸಿಕೊಂಡು, ಸರಿಯಾದ ಪ್ರಮಾಣವುಳ್ಳ ತಾಕುಗಳನ್ನಾಗಿ ವಿಂಗಡಿಸಿ, ಉತ್ತಮ ರೀತಿಯಲ್ಲಿ ಸಾಗುವಳಿಮಾಡುವ ಜನರಿಗೆ ಹಂಚಿದರು ಹೀಗೆ ವಿಂಗಡಿಸಿದ ಕ್ಷೇತ್ರಗಳಲ್ಲಿ ರೈತರಿಗೆ ಅನುಕೂಲವಾದ ಮನೆ, ದಾರಿ, ಇತರ ಸೌಕರ್ಯಗಳನ್ನೆಲ್ಲಾ ಸರ್ಕಾರದವರೇ ಕಲ್ಪಿಸಿದ್ದಾರೆ ಈ ಕ್ಷೇತ್ರಗಳನ್ನು ಜಮೀನುದಾರರು ವಿಭಾಗಿಸದಂತೆಯೂ, ಹೆಚ್ಚು ಸಾಲವಿದ್ದ ಭಾಗದಲ್ಲಿ ಸರ್ಕಾರದವರೇ ಅದನ್ನು ತೀರಿಸುವಂತೆಯೂ ಏರ್ಪಾಡು ಮಾಡಲಾಗಿದೆ ತಾಕುಗಳ ಪ್ರಮಾಣ, ಅಚ್ಚುಕಟ್ಟು— ಇವೇ ಮುಂತಾದ ವಿಷಯಗಳಲ್ಲಿ ಹೆಚ್ಚು ಅನುಕೂಲಗಳನ್ನು ಕಲ್ಪಿಸಲಾಗಿದೆ ಡೆನ್ಮಾರ್ಕ್ ಸರ್ಕಾರದವರು ಹೆಚ್ಚು ಆಸಕ್ತಿ ವಹಿಸಿ, ಅಧಿಕ ವೆಚ್ಚವಿಲ್ಲದಹಾಗೆ, ಅತ್ಯುತ್ತಮ ರೀತಿಯ ಜಮೀನು ತಾಕುಗಳ ಸಂಯೋಜನಾಕ್ರಮವನ್ನು ವ್ಯವಸ್ಥೆಪಡಿಸಿದ್ದಾರೆ

* "History of English Farming Past and Present", by Prothero, pp 47-52

ಈಗ ಡೆನ್ಮಾರ್ಕ್ ದೇಶದ ವ್ಯವಸಾಯವು ಕೈಗಾರಿಕೆಗಿಂತ ಉತ್ತಮವಾಗಿಯೂ, ಲಾಭದಾಯಕವಾದ ವೃತ್ತಿಯಾಗಿಯೂ ಪರಿಣಮಿಸಿದೆ ಎಂದು ಹೇಳಬಹುದು *

ಸ್ವಿಟ್ಜರ್‌ಲೆಂಡ್ ದೇಶದಲ್ಲಿ ಜಮೀನು ತಾಕುಗಳು ಬಹಳ ಸಣ್ಣವಾಗಿದ್ದುವು ಪ್ರತಿಯೊಂದು ಕ್ಷೇತ್ರವು ಕಾಲು ಎಕರೆಗಿಂತ ಚಿಕ್ಕದಾಗಿದ್ದಿತು ಇದು ಕೂಡ ೩೦–೪೦ ಸ್ಥಳಗಳಲ್ಲಿ ಚದುರಿಹೋಗಿದ್ದುವು ತಾಕುಗಳನ್ನು ಒಟ್ಟುಗೂಡಿಸುವುದಕ್ಕೆ ರೈತರು ಪ್ರತಿಭಟಿಸಿ, ಅವಕಾಶವನ್ನೇ ಕೊಡಲಿಲ್ಲ ಈ ಸಣ್ಣ ತಾಕುಗಳಿಂದ ಉತ್ಪತ್ತಿಯು ಕಡಿಮೆಯಾಗುತ್ತಾ ಬಂದಿತು ಹೀಗಾಗಿ ದೇಶವು ಬಹಳ ಹೀನಸ್ಥಿತಿಗೆ ಬರುತ್ತಿತ್ತು ಅಂತಹ ಸಂದಿಗ್ಧ ಕಾಲದಲ್ಲಿ ಪ್ರಭುತ್ವದವರು ಮುಂದೆ ಬಂದು, ಸೂಕ್ತವಾದ ಕೆಲವು ಶಾಸನಗಳನ್ನು ಮಂಜೂರುಮಾಡಿ, ತಾಕುಗಳನ್ನು ಒಟ್ಟುಗೂಡಿಸುವ ಪ್ರಯತ್ನಮಾಡಿದರು ೧೯೦೭ನೆಯ ಇಸವಿಯಲ್ಲಿ ವಿಧಿಸಿದ ಕಾನೂನು ಪ್ರಕಾರ, ತಾಕುಗಳ ಸಂಯೋಜನೆಯು ಬಲಾತ್ಕಾರ ಕಟ್ಟಳೆಯಾಗಿ ಪರಿಣಮಿಸಿತು ಇದರ ಪ್ರಕಾರ, ಜಮೀನುದಾರರಿಗೆ ತಮ್ಮ ನೆರೆಯವನ ಜಮೀನು ೩೦೦ ಚದರ ಮೀಟರುಗಳಿಗೆ ಕಡಿಮೆಯಾಗಿದ್ದರೆ, ಅದನ್ನು ಅವನೇ ಕ್ರಯಕ್ಕೆ ತೆಗೆದುಕೊಳ್ಳುವ ಅಥವಾ ಅದಕ್ಕೆ ಬದಲಾಗಿ ಅವನಿಗೆ ಬೇರೆ ಕಡೆ ಜಮೀನು ಕೊಡುವ ಹಕ್ಕು ವಿಧಿಸಲ್ಪಟ್ಟಿತು ಈ ಶಾಸನವು ಆಚರಣೆಯಲ್ಲಿ ಇಲ್ಲದಕಡೆ, ಬಹು ಜನರ ಸಮ್ಮತವೇ ಮೇಲಾಗಿ, ತಾಕುಗಳ ಸಂಯೋಜನೆಯು ಬಹಳ ಸಮರ್ಪಕವಾಗಿ ನಡೆಯಿತು ಹೀಗೆ ತಾಕುಗಳನ್ನು ಒಟ್ಟುಗೂಡಿಸಿದುದರಿಂದ ಜಮೀನಿಲ್ಲದವರು, ಇತರ ಬೇರೆ ವೃತ್ತಿಯನ್ನು ಕೈಗೊಂಡು ಸುಖಜೀವನ ಮಾಡಿಕೊಂಡರು †

ಜಪಾನ್ ದೇಶದ ಸಾಗುವಳಿ ಜಮೀನು, ಬಹಳ ಸಣ್ಣವಾಗಿ ಅವ್ಯವಸ್ಥಿತ ರೀತಿಯಲ್ಲಿದ್ದವು ನೀರಾವರಿ, ದಾರಿ, ಇವೇ ಮುಂತಾದ ಸೌಕರ್ಯಗಳಂತೂ ಇರಲೇ ಇಲ್ಲ ಶೇಕಡ ೪೯ರಷ್ಟು ತಾಕುಗಳು

* "Report of the Scottish Commission of Agriculture in Denmark," by Rider Haggard, p 78

"Bulletin of Bureau of Economics Intelligence", July, Sept 1925

† "Bulletin of Economics and Social Intelligence", March 1913

ಒಂದೂಕಾಲು ಎಕರೆಗಿಂತ ಕಡಿಮೆಯಾಗಿಯೂ, ೪೨ರಷ್ಟು ತಾಕುಗಳು ೧¼ರಿಂದ ೭½ ಎಕರೆಯೊಳಗೂ ಇದ್ದುವು* ಒಟ್ಟನಲ್ಲಿ ಶೇ ೯೧ರಷ್ಟು ತಾಕುಗಳು ೧೦ ಎಕರೆಗಿಂತ ಕಡಿಮೆಯಾಗಿಯೂ, ಅಥವಾ ಶೇ ೭೦ರಷ್ಟು ೨½ ಎಕರೆಗಿಂತ ಕಡಿಮೆ ವಿಸ್ತಾರವುಳ್ಳ ತಾಕುಗಳಾಗಿ ಇದ್ದುವು ಇಷ್ಟು ಸಣ್ಣದಾದ ತಾಕುಗಳೂ ಕೂಡ ಅನೇಕ ಕಡೆ ಚದುರಿದ್ದುವು ಇತರ ದೇಶಗಳಲ್ಲಿ ಇದ್ದಂತೆ, ಇಲ್ಲಿಯೂ ಕೂಡ ಈ ಸಣ್ಣ ಜಮೀನು ತಾಕುಗಳಿಂದ ಉಂಟಾಗುತ್ತಿದ್ದ ಕಷ್ಟವು ಮಿತಿಮೀರಿತು ಇದನ್ನು ನೋಡಿ ಸರ್ಕಾರದವರು ತಾಕು ಸಂಯೋಜನಾ ಕೆಲಸಕ್ಕೆ ಒಂದು ಸಮಿತಿಯನ್ನು ಚುನಾಯಿಸಿದರು ಅವರ ತೀರ್ಮಾನದಂತೆ ೧೮೯೯ನೆಯ ಇಸವಿಯಲ್ಲಿ ಒಂದು ಕಾನೂನು ಮಂಜೂರುಮಾಡಿ, ಅದನ್ನು ೧೯೦೯ನೆಯ ಇಸವಿಯಲ್ಲಿ ತಿದ್ದುಪಡಿಮಾಡಿದರು ಇದರ ಪ್ರಕಾರ ಸಣ್ಣ ತಾಕುಗಳನ್ನು ಒಟ್ಟುಗೂಡಿಸಿ, ಹೀಗೆ ಒಟ್ಟುಗೂಡಿಸಿದ ತಾಕುಗಳಿಗೆ ಕಂದಾಯದ ವಿನಾಯಿತಿ, ಒಳ್ಳೆಯ ದಾರಿ, ನೀರಾವರಿ ಸೌಕರ್ಯಗಳನ್ನೆಲ್ಲಾ ಏರ್ಪಡಿಸಲಾಯ್ತು ತಾಕುಗಳನ್ನು ವ್ಯವಸ್ಥಿತವಾದ ಕ್ಷೇತ್ರಗಳನ್ನಾಗಿ ಮಾಡಿ, ಅವುಗಳ ವ್ಯವಸಾಯಾಭಿವೃದ್ಧಿಗೆ ಬೇಕಾದ ಎಲ್ಲಾ ಸಲಕರಣೆಗಳನ್ನು ಸರ್ಕಾರದವರು ಒದಗಿಸಿಕೊಟ್ಟರು ಜಪಾನ್ ದೇಶದಲ್ಲಿ ಹೀಗೆ ಸಮರ್ಪಕವಾಗಿ, ಸಣ್ಣ ತಾಕುಗಳ ಸಮಸ್ಯೆಯು ಬಗೆಹರಿಸಲ್ಪಟ್ಟಿತು †

ಭರತಖಂಡದಲ್ಲಿಯೂ ಕೂಡ ಚಿಕ್ಕದಾಗುತ್ತಿರುವ ತಾಕುಗಳ ಕಷ್ಟ ನಿವಾರಣೆ ಮಾಡುವುದಕ್ಕೆ ಅಲ್ಲಲ್ಲೇ ಹಲವು ಪ್ರಯತ್ನಗಳು ನಡೆಯುತ್ತಿವೆ ಆದರೂ ಸರಿಯಾದ ಕಾನೂನು ಆಚರಣೆಯಲ್ಲಿ ಇಲ್ಲದೇ ಇರುವುದರಿಂದ, ಸಮರ್ಪಕವಾದ ಕೆಲಸವು ನಡೆಯುತ್ತಿಲ್ಲ ಬೊಂಬಾಯಿ ಆಧಿಪತ್ಯದಲ್ಲಿ ಒಂದು ಸರ್ವೆ ನಂಬರು ಇಷ್ಟೇ ಎಕರೆ ಇರಬೇಕೆಂದೂ, ಹಾಗೆ ಇಲ್ಲದಿದ್ದ ಪಕ್ಷದಲ್ಲಿ ಕಾನೂನು ಪ್ರಕಾರ ಅದು ಸರ್ವೆ ನಂಬರಾಗಿ ಪರಿಗಣಿಸಲ್ಪಡುವುದಿಲ್ಲವೆಂದೂ ಅಲ್ಲಿಯ ರಿಕಾರ್ಡಿನಲ್ಲಿದೆ ಅನುಭವದಲ್ಲಿ ಮಾತ್ರ ರೈತರು ತಮ್ಮ ಜಮೀನಿನಲ್ಲಿ ಎಷ್ಟು ಸಣ್ಣ ತಾಕುಗಳನ್ನಾಗಿ ಬೇಕಾದರೂ

* "Bulletin of Economics and Social Intelligence", October–Nov 1923

† "Outlines of Agricultural in Japan", Published by Agricultural Bureau, Tokio, pp 22–23

ವಿಂಗಡಿಸಬಹುದು "ರಿಕಾರ್ಡ್ಸ್ ಆಫ್ ರೈಟ್ಸ್" ಆಚರಣೆಗೆ ಬಂದ ಮೇಲಂತೂ, ಈ ಸಣ್ಣ ತಾಕುಗಳ ಸಂಖ್ಯೆಯು ವಿಪರೀತವಾಗಿ ಹೆಚ್ಚುತ್ತಿವೆ ಪಂಜಾಬು ಪ್ರಾಂತದಲ್ಲಿ ಮಾತ್ರ ಸ್ವಲ್ಪಮಟ್ಟಿಗೆ ಸಣ್ಣ ತಾಕುಗಳ ಅಭಿವೃದ್ಧಿಯು ತಟಸ್ಥವಾಗಿದೆ ಕೆಲವು ಸಹಕಾರ ಸಂಘಗಳು ತಾಕುಗಳ ಸಂಯೋಜನೆಯನ್ನು ಬಹಳ ಜರೂರಿನಿಂದ ನಡೆಸುತ್ತಿವೆ ಮಧ್ಯಪ್ರಾಂತದ "ಕನ್‌ಸಾಲಿಡೇಷನ್ ಆಫ್ ಹೋಲ್ಡಿಂಗ್ಸ್ ಆಕ್ಟ್" ಮಂಜೂರಾತಿಯಿಂದ, ಸಾಗುವಳಿದಾರರ ತಾಕುಗಳ ಸಂಯೋಜನೆಯು ಸ್ವಲ್ಪಮಟ್ಟಿಗೆ ನಡೆಯಿತು ಸಣ್ಣ ತಾಕುಗಳ ಒಟ್ಟುಗೂಡಿಸುವಿಕೆಯನ್ನು ಒಂದು ವಿಧವಾದ ನಿರ್ಬಂಧದಿಂದಾಗಲಿ ಅಥವಾ ಯಾವುದಾದರೂ ಕಾನೂನನ್ನು ಆಚರಣೆಗೆ ತರುವುದರಿಂದಾಗಲಿ, ಸಮರ್ಪಕವಾಗಿ ಮಾಡುವುದಕ್ಕೆ ಆಗುವುದಿಲ್ಲ ಎಂಬದಾಗಿ ಮದರಾಸು ಸರ್ಕಾರದವರು ಅಭಿಪ್ರಾಯಪಟ್ಟಿದ್ದಾರೆ ಇದು ಚರ್ಚಾಂಶವಾದ ವಿಷಯವಾಗಿದೆ ಯಾವುದಾದರೂ ವ್ಯವಸ್ಥಿತವಾದ ಕ್ರಮವು, ತಾಕುಗಳ ಸಂಯೋಜನೆಗೆ ಆಚರಣೆಯಲ್ಲಿ ಬಂದೇ ಬರಬೇಕೆಂಬುದಾಗಿ ಸರ್ವರೂ ಒಪ್ಪುತ್ತಾರೆ

ಪಂಜಾಬು ದೇಶದ ಉದಾಹರಣೆಯು ಬಹಳ ಉತ್ತಮವಾಗಿದೆ ಇಲ್ಲಿಯ ಸಹಕಾರ ಸಂಘಗಳ ತೀವ್ರ ಕಾರ್ಯಕ್ರಮದಿಂದ ತಾಕುಗಳ ಸರಾಸರಿ ವಿಸ್ತೀರ್ಣವು ಹೆಚ್ಚಿದೆ ೧೯೩೧–೩೨ನೆಯ ಇಸವಿಯಲ್ಲಿ ೭೯೫ ತಾಕು ಸಂಯೋಜನಾ ಸಂಘಗಳು ೭೨,೮೨೧ ಎಕರೆ ಜಮೀನನ್ನು ಒಟ್ಟುಗೂಡಿಸಿವೆ ತಾಕುಗಳ ಸರಾಸರಿ ವಿಸ್ತೀರ್ಣವು ೨೪ ಗುಂಟೆಯಿಂದ ೩೪ ಎಕರೆಗೆ ಏರಿದೆ ಈ ಕಾರ್ಯಕ್ರಮಕ್ಕೆ ಸರ್ಕಾರದವರು ಪ್ರತಿಯೊಂದು ಎಕರೆಗೂ ೧ ರೂ ೨ ಆಣೆ ಖರ್ಚುಮಾಡಿದಂತೆ ಆಗಿದೆ ಪಂಜಾಬು ಸರ್ಕಾರದವರು ಈ ವಿಧವಾದ ಸಂಯೋಜನಾ ಕೆಲಸಕ್ಕೆ ಅಧಿಕಾರಿಗಳನ್ನು ನೇಮಿಸಿ, ಅವರಿಂದ ಮೊದಲು ಪ್ರಚಾರಕಾರ್ಯವನ್ನು ಚೆನ್ನಾಗಿ ನಡೆಸಿ, ಜನಗಳಲ್ಲಿ ತಿಳಿವಳಿಕೆಯುಂಟಾಗುವಂತೆ ಮಾಡುತ್ತಿದ್ದಾರೆ ಹೀಗೆ ತಾಕುಗಳನ್ನು ಒಟ್ಟುಗೂಡಿಸುವುದರಿಂದ ಉಂಟಾಗುವ ಪ್ರಯೋಜನವೂ, ಅನುಕೂಲವೂ ರೈತರಿಗೆ ಚೆನ್ನಾಗಿ ಮಂದಟ್ಟಾದಮೇಲೆ, ಅವರ ಒಪ್ಪಿಗೆಯಿಂದ ಜಮೀನುಗಳ ನಕ್ಷೆಯನ್ನು ತಯಾರಿಸಿ, ಒಟ್ಟುಗೂಡಿಸಿದ ತಾಕುಗಳನ್ನು ಸರಿಯಾಗಿ

ವಿಂಗಡಿಸಿ, ಅವುಗಳ ನಂಬರು, ವಿಸ್ತೀರ್ಣ ಮತ್ತು ಚತುರ್ಗಡಿಗಳನ್ನು ನಮೂದಿಸಿ, ಸರ್ಕಾರದವರು ಜಮೀನುದಾರರಿಗೆ ವಾಪಸು ಕೊಡುತ್ತಾರೆ ಇದನ್ನು ಬದಲಾವಣೆ ಪುಸ್ತಕಕ್ಕೆ ಬರೆಸುತ್ತಾರೆ ಇದಕ್ಕೆ ತಗಲುವ ವೆಚ್ಚವನ್ನೆಲ್ಲಾ ಜಮೀನಿನ ಕಂದಾಯ ಹೊಸದಾಗಿ ತೀರ್ವೆಯಾಗುವ ಕಾಲದಲ್ಲಿ ವಸೂಲು ಮಾಡುತ್ತಾರೆ ಈ ರೀತಿಯಾದ ಉತ್ತಮ ಸಂಯೋಜನಾ ಕಾರ್ಯವು ಪಂಜಾಬು ದೇಶದಲ್ಲಿ ಸುಮಾರು ಶೇಕಡಾ ೬೬ರಷ್ಟು ಹಳ್ಳಿಗಳಲ್ಲಿ ಉತ್ತಮ ಸಹಕಾರ ಸಂಘಗಳಿಂದ ನಡೆಸಲ್ಪಡುತ್ತಿದೆ

ಚಿಕ್ಕದಾದ ಜಮೀನು ತಾಕುಗಳ ಸಂಯೋಜನೆಯು ಇಂಡಿಯಾ ದೇಶದಲ್ಲಿ ಬಹಳ ಕಷ್ಟವಾಗಿದೆ ಇದಕ್ಕೆ ಕಾರಣವೇನೆಂದರೆ, ಇಲ್ಲಿಯ ಹಕ್ಕುಬಾಧ್ಯತೆಯ ಕಾನೂನು ಅನುಕೂಲವಾಗಿಲ್ಲ ಇದರಲ್ಲಿ ಯಾವ ರೀತಿಯ ಬದಲಾವಣೆಯಾದರೂ, ಅದು ಜನರಿಂದ ಪ್ರತಿಭಟಿಸಲ್ಪಡುವುದು ಸಂಯೋಜನೆಯ ಅನುಕೂಲ್ಯವು ನಮ್ಮ ರೈತರಿಗೆ ಚೆನ್ನಾಗಿ ತಿಳಿದಿಲ್ಲ ಸ್ವಾರ್ಥಪೂರಿತವಾದ ರೈತರ ಪಕ್ಷಗಳು ಬಲವಾಗಿರುವುದರಿಂದ ಅವರು ತಾಕುಗಳ ಸಂಯೋಜನಗೆ ಒಪ್ಪುವುದಿಲ್ಲ ಆದುದರಿಂದ ರೈತರಲ್ಲಿ ಜ್ಞಾನ ಪ್ರಚಾರವಾಗಬೇಕು ಇತರ ದೇಶಗಳು ಸಂಯೋಜನಾ ಕ್ರಮದಿಂದ ಹೊಂದುತ್ತಿರುವ ಪ್ರಯೋಜನವನ್ನೂ, ಅನುಕೂಲ್ಯವನ್ನೂ ನಮ್ಮ ರೈತರಿಗೆ ಮುಂದಟ್ಟಾಗುವಂತೆ ತಿಳಿಸಬೇಕು ಅನಂತರ ಚುನಾಯಿಸಿದ ಕೆಲವು ಗ್ರಾಮಗಳಲ್ಲಿ ರೈತರ ಒಪ್ಪಿಗೆಯಿಂದ, ತಾಕುಗಳ ಬದಲಾವಣೆಗಳನ್ನು ನಡೆಸಬೇಕು ಹೀಗೆ ಬದಲಾಯಿಸಿದ ಕ್ಷೇತ್ರಗಳು ಅನುಕೂಲವಾಗಿದ್ದರೆ ಇವುಗಳಿಗೆ ದಾರಿ, ವಾಸದ ಮನೆ, ನೀರಾವರಿ ಸೌಕರ್ಯಗಳನ್ನು ಒದಗಿಸಬೇಕು ಹೀಗ ಮೊದಲು ಉದಾಹರಣೆಗಾಗಿ, ಕೆಲವು ತಾಕುಗಳ ಸಂಯೋಜನೆಯನ್ನು ರೈತರ ಮುಂದಿಟ್ಟರೆ ಅನಂತರ ಅವರೇ ಈ ವಿಧವಾದ ಕಾರ್ಯಕ್ಕೆ ಪ್ರಯತ್ನಪಡಬಹುದು ಹೊಸದಾಗಿ ನಿರ್ಮಿಸುವ ಕೆಲವು ಕೃಷಿಕ್ಷೇತ್ರಗಳನ್ನು ಸರಿಯಾದ ತಾಕುಗಳಾಗಿ ವಿಂಗಡಿಸಿ, ಅಲ್ಲಿ ಎಲ್ಲಾ ಸೌಕರ್ಯಗಳನ್ನೂ ಕಲ್ಪಿಸಿ ಮಾದರಿಯಾಗಿ ರೈತರಿಗೆ ತೋರಿಸಬಹುದು

ಮಧ್ಯಪ್ರಾಂತದಲ್ಲಿ ಆಚರಣೆಯಲ್ಲಿರುವ ಶಾಸನವು ಸಹಾಯಕವಾಗಿದೆ ಒಂದು ಹಳ್ಳಿಯ ಮೂರನೆಯ ಎರಡು ಭಾಗ ಜನರು ಒಪ್ಪುವುದಾದರೆ, ಅಲ್ಲಿ

ಕಾನೂನು ಆಚರಿಸಲ್ಪಡುವುದು ಉಳಿದವರು ಒಪ್ಪದಿದ್ದರೂ ಸರ್ಕಾರದವರು ತಾಕುಗಳನ್ನು ಒಟ್ಟುಗೂಡಿಸುವುದಕ್ಕೆ ಬಲಾತ್ಕಾರಮಾಡಬಹುದು ರೈತರು ಒಪ್ಪುವ ಪಕ್ಷದಲ್ಲಿ ತಾಕುಗಳನ್ನು ಒಟ್ಟುಗೂಡಿಸುವುದಕ್ಕೆ ಬರೋಡಾ ಸರ್ಕಾರದವರು ಅನುಕೂಲವಾದ ಶಾಸನವನ್ನು ಮಾಡಿದ್ದಾರೆ ಒಂದು ಹಳ್ಳಿಯಲ್ಲಿ ಕೆಲವರು ಒಪ್ಪದಿದ್ದರೂ ಕೂಡ ಕಾನೂನು ವಿಧಿಸಲು ಅವಕಾಶವಿಲ್ಲ ಜರ್ಮನಿ ದೇಶದ ವ್ಯವಸಾಯಕ್ರಮವು ಫ್ರಾನ್ಸ್ ದೇಶದ ವ್ಯವಸಾಯಕ್ರಮಕ್ಕಿಂತ ಉತ್ತಮವಾಗಿರುವುದಕ್ಕೆ ಜರ್ಮನ್ ಸರ್ಕಾರದ ಬಲಾತ್ಕಾರ ತಾಕು ಸಂಯೋಜನಾಕ್ರಮವೇ ಮುಖ್ಯ ಕಾರಣವೆಂದು ಡಾರ್ಲಿಂಗ್‌ರವರು ಬರೆದಿದ್ದಾರೆ *

ವ್ಯವಸಾಯದ ಜಮೀನು ಸಣ್ಣ ತಾಕುಗಳಾಗುತ್ತಿರುವ ದೇಶಗಳಲ್ಲೆಲ್ಲಾ ಹಲವು ಉಪಾಯಗಳಿಂದ ಕೂಡಿದ ಶಾಸನಮಾಡಿ, ಅದರಿಂದ ಉಂಟಾಗುತ್ತಿರುವ ಕಷ್ಟವನ್ನು ಪರಿಹರಿಸುತ್ತಾ ಇದ್ದಾರೆ ಫ್ರಾನ್ಸ್ ದೇಶದಲ್ಲಿ ಶಾಸ್ತ್ರೀಯ ಸಂತಾನನಿರೋಧ ಕ್ರಮವನ್ನು ಅನುಸರಿಸಿ, ಜಮೀನು ತಾಕುಗಳು ವಿಂಗಡಿಸಲ್ಪಡದಹಾಗೆ ಮಾಡಿ, ಜನಸಾಮಾನ್ಯದ ಜೀವನದ ಅಂತಸ್ತು ಕೂಡ ಕ್ಷೀಣವಾಗದಹಾಗೆ ಏರ್ಪಡಿಸಿದ್ದಾರೆ ಇಟಲಿ ದೇಶದಲ್ಲಿ ರೈತರ ಸಂಖ್ಯೆ ಹೆಚ್ಚಿದಹಾಗೆಲ್ಲಾ ಅವರನ್ನು ಪರದೇಶಗಳಿಗೆ ಕಳುಹಿಸಿ, ಅವರಿಂದ ಹಣ ಬರಮಾಡಿಕೊಂಡು ತಮ್ಮ ದೇಶದಲ್ಲಿರುವವರ ಜೀವನವು ಸರಿಯಾಗಿ ನಡೆಯುವಂತೆ ಅನುಕೂಲಗಳನ್ನು ಕಲ್ಪಿಸುತ್ತಾ ಇದ್ದಾರೆ ಜಪಾನ್ ದೇಶದಲ್ಲಿ ರೈತರಿಗೆ ಅನೇಕ ವಿಧವಾದ ಉಪವೃತ್ತಿಗಳನ್ನು ಕಲ್ಪಿಸಿ, ಕಷ್ಟನಿವಾರಣೆಮಾಡುತ್ತಿದ್ದಾರೆ ಹೀಗೆಯೇ ಹಾಲೆಂಡ್, ಡೆನ್ಮಾರ್ಕ್ ದೇಶಗಳಲ್ಲಿ ಪಶುಪಾಲನೆ ಮತ್ತು ವ್ಯವಸಾಯಕ್ಕೆ ಸಂಬಂಧಪಟ್ಟ ಇತರ ವೃತ್ತಿಗಳನ್ನು ಒದಗಿಸಿ, ಅವುಗಳಿಂದ ರೈತರ ಸಂಪಾದನೆ ಹೆಚ್ಚುವಂತೆ ಮಾಡುತ್ತಿದ್ದಾರೆ ಹೀಗೆ ಇತರ ದೇಶಗಳ ಉದಾಹರಣೆಯನ್ನು ನಾವು ಚೆನ್ನಾಗಿ ವಿಮರ್ಶೆಮಾಡಿ, ಅವುಗಳಲ್ಲಿ ಸೂಕ್ತವಾದುದನ್ನು ನಾವು ಆರಿಸಿಕೊಂಡು ನಮ್ಮ ದೇಶಕ್ಕೆ ಅನುಕೂಲವಾದ ಕಾರ್ಯಕ್ರಮವನ್ನು ಆಚರಣೆಯಲ್ಲಿ ತರಬೇಕು.

* "The Punjab Peasent in Prosperity and Debt", by Darling, p 266

ಪ್ರಾರಂಭದಲ್ಲಿ ತಾಕುಗಳ ಸಂಯೋಜನೆಯು ಪರಸ್ಪರ ಸಹಾಯಕ ಸಂಘಗಳಿಂದಲೇ ನಡೆಯಬೇಕು ಇದಕ್ಕೆ ಸರ್ಕಾರದ ಒತ್ತಾಸೆ ಚೆನ್ನಾಗಿರಬೇಕು ಇದರಿಂದುಂಟಾಗುವ ಪ್ರಯೋಜನವು ನಮ್ಮ ರೈತರಿಗೆ ತಿಳಿಯಬೇಕು ಸಣ್ಣ ತಾಕುಗಳನ್ನು ಒಟ್ಟುಗೂಡಿಸಿ, ಅವುಗಳಿಂದ ಹೆಚ್ಚು ಪ್ರಯೋಜನವನ್ನೂ, ಅನುಕೂಲವನ್ನೂ ಹೊಂದುವಂತೆ ನಮ್ಮ ರೈತರನ್ನು ಪ್ರೋತ್ಸಾಹಿಸಬೇಕು ಸಣ್ಣ ತಾಕುಗಳಲ್ಲಿಯೇ ಉತ್ತಮ ತರಹ ಹಣ್ಣು ಹಂಪಲು, ತರಕಾರಿ— ಇವೇ ಮುಂತಾದುವುಗಳನ್ನು ಚೆನ್ನಾಗಿ ಬೆಳೆಯಿಸಿ, ಹೆಚ್ಚು ಲಾಭ ಹೊಂದುತ್ತಿರುವ ಬೆಲ್ಜಿಯಂ ಮತ್ತು ಜಪಾನ್ ದೇಶದ ರೈತರ ನಿದರ್ಶನಗಳನ್ನು ನಮ್ಮ ರೈತರ ಮುಂದಿಡಬೇಕು

ಮೈಸೂರು ಸಂಸ್ಥಾನದಲ್ಲಿ ತಾಕುಗಳ ಸಂಯೋಜನೆಯು ಅಷ್ಟು ಸಮರ್ಪಕವಾಗಿ ನಡೆಯುತ್ತಿಲ್ಲವೆಂದೇ ಹೇಳಬಹುದು ಸಂಸ್ಥಾನದ ಶೇ ೫೩ ೩ರಷ್ಟು ತಾಕುಗಳು ೫ ಎಕರೆಗಿಂತ ಕಡಿಮೆ ವಿಸ್ತೀರ್ಣವುಳ್ಳವುಗಳಾಗಿವೆ ಇಂಡಿಯಾ ದೇಶದ ಇತರ ಭಾಗಗಳಂತೆ ಇಲ್ಲಿಯೂ ತಾಕುಗಳು ಸಣ್ಣವಾಗುತ್ತಿವೆ ಹೀಗೆ ಚಿಕ್ಕದಾಗುತ್ತಿರುವ ಜಮೀನು ತಾಕುಗಳ ಗುಣದೋಷಗಳನ್ನು ವಿಮರ್ಶೆಮಾಡುವುದಕ್ಕೆ ಮೈಸೂರು ಸರ್ಕಾರದವರು ಒಂದು ಸಮಿತಿಯನ್ನೇರ್ಪಡಿಸಿದ್ದರು ಈ ಸಮಿತಿಯವರು ಸಂಸ್ಥಾನದ ಬೇರೆ ಬೇರೆ ಭಾಗಗಳಲ್ಲಿ ಕೆಲವು ಹಳ್ಳಿಗಳನ್ನು ಚುನಾಯಿಸಿ, ಒಟ್ಟು ೮೦ ಹಳ್ಳಿಗಳ ಪರಿಸ್ಥಿತಿಯನ್ನು ಕೂಲಂಕಷವಾಗಿ ವಿಮರ್ಶೆಮಾಡಿ, ಅಲ್ಲಿಯ ತಾಕುಗಳ ಸಂಖ್ಯೆಯನ್ನು ಈ ರೀತಿ ವಿವರಿಸಿದ್ದಾರೆ —

| | | |
|---|---|---|
| ಒಂದು ಎಕರೆಗಿಂತ ಸಣ್ಣವಾದ ತಾಕುಗಳು | ಶೇಕಡ | ೨೦ ೯ |
| ೧ ರಿಂದ ೫ರ ವರೆಗೆ ಇರುವ ತಾಕುಗಳು | ,, | ೩೯ ೮ |
| ೫ ,, ೧೦ ,, | ,, | ೧೮ ೮ |
| ೧೦ ,, ೨೫ ,, | ,, | ೧೪ ೯ |
| ೨೫ ,, ೫೦ ,, | ,, | ೪.೧ |
| ೫೦ ಎಕರೆಗಿಂತ ಹೆಚ್ಚಿನ ವಿಸ್ತಾರವುಳ್ಳ ತಾಕು | ,, | ೧ ೫ |

ಹಾಸನ ಡಿಸ್ಟ್ರಿಕ್ಟಿನ ಅರಕಲಗೂಡು ತಾಲ್ಲೂಕಿನ ೩ ಹಳ್ಳಿಗಳಲ್ಲಿ ಶೇ. ೭೬.೧ ತಾಕುಗಳು ಒಂದು ಎಕರೆಗಿಂತ ಚಿಕ್ಕವಾಗಿವೆಯೆಂದೂ,

ಕೋಲಾರದಲ್ಲಿ ಶೇ ೮೧.೨ ತಾಕುಗಳು ೫ ಎಕರೆಗಿಂತ ಕಡಿಮೆ ವಿಸ್ತಾರವುಳ್ಳದ್ದಾಗಿವೆಯೆಂದೂ, ಬೆಂಗಳೂರು ತಾಲ್ಲೂಕಿನ ೫ ಗ್ರಾಮಗಳಲ್ಲಿ ಶೇ ೮೨ ತಾಕುಗಳು ೫ ಎಕರೆಗಳಿಗಿಂತ ಕಡಿಮೆ ವಿಸ್ತೀರ್ಣವುಳ್ಳದ್ದಾಗಿವೆ ಎಂದೂ ಸಮಿತಿಯವರು ಅಭಿಪ್ರಾಯಪಟ್ಟಿದ್ದಾರೆ *

ಈ ಅಧ್ಯಾಯದಲ್ಲಿ ಚರ್ಚಿಸಮಾಡಿರುವಂತೆ ಇಲ್ಲಿಯೂ ಪರಿಹಾರೋಪಾಯಗಳ ಕಾರ್ಯಕ್ರಮವು ಅಗತ್ಯವಾಗಿದೆ ಜಮೀನು ತಾಕುಗಳನ್ನು ಒಟ್ಟುಗೂಡಿಸುವುದಕ್ಕೆ ಮೊದಲು, ಪರಸ್ಪರ ಸಹಾಯಕ ಸಂಘಗಳು ಹೆಚ್ಚು ಪ್ರಚಾರಕಾರ್ಯಮಾಡಿ ರೈತರನ್ನು ಪ್ರೋತ್ಸಾಹಿಸಿ, ಹಿಡುವಳಿ ಏಕೀಕರಣ ಶಾಸನವನ್ನು ಆಚರಣೆಯಲ್ಲಿ ತರಬೇಕು ಹೀಗೆ ತಾಕುಗಳು ಒಟ್ಟುಗೂಡುವ ಅಥವಾ ಬದಲಾವಣೆಯಾದ ಸ್ಥಳಗಳಲ್ಲಿ ಸ್ಟಾಂಪು, ರಿಜಿಸ್ಟ್ರೇಷನ್ ಫೀಜುಗಳ ವಿನಾಯಿತಿ, ಜಮೀನು ಕಂದಾಯದಲ್ಲಿ ರಿಯಾಯಿತಿ, ವ್ಯವಸಾಯದ ಇತರೇ ಸೌಕರ್ಯಗಳು— ಇವೇ ಮುಂತಾದ ಅಂಶಗಳಲ್ಲಿ ಸೌಕರ್ಯವನ್ನು ಸರ್ಕಾರದವರೂ ಕಲ್ಪಿಸಿ, ರೈತರ ಕಷ್ಟಪರಿಹಾರೋಪಾಯಗಳನ್ನು ಆಚರಣೆಯಲ್ಲಿ ತರಬೇಕು ಹೀಗೆ ಸೂಕ್ತವಾದ ಕಾರ್ಯಕ್ರಮದ ಜೊತೆಗೆ, ಹೊಂದಿಕೆಯಾದ ಉಪವೃತ್ತಿಗಳನ್ನು ಕಲ್ಪಿಸುವುದರಿಂದಲೂ, ಹೆಚ್ಚಾಗುತ್ತಿರುವ ಜನಸಂಖ್ಯೆಯನ್ನು ಬೇರೆ ಬೇರೆ ವೃತ್ತಿಗಳಿಗೆ ಕಳುಹಿಸುವ ಏರ್ಪಾಡಿನಿಂದಲೂ, ರೈತರ ಜೀವನವನ್ನು ಉತ್ತಮಪಡಿಸುವುಲ್ಲದೆ, ಜಮೀನು ತಾಕುಗಳ ಸಂಯೋಜನೆಯನ್ನು ಸಮರ್ಪಕ ರೀತಿಯಲ್ಲಿ ನಡೆಸಬಹುದು

* "Mysore Gazette", Nov 28, 1935

## ೮. ಗ್ರಾಮ ಕೈಗಾರಿಕೆ

ಕೆಲಸಗಾರರು ತಮ್ಮ ಉಪಯೋಗಕ್ಕೂ ತಮ್ಮ ನೆರೆಹೊರೆಯುವರ ಉಪಯೋಗಕ್ಕೂ ಪದಾರ್ಥಗಳನ್ನು ಮಾಡುವ ವೃತ್ತಿಗೆ ಗ್ರಾಮ ಕೈಗಾರಿಕೆ ಎಂದು ಹೇಳಬಹುದು ಇದರಲ್ಲಿ ಕೆಲಸಮಾಡತಕ್ಕವರ ಸಂಖ್ಯೆ ಕಡಿಮೆ ಕೆಲಸದ ಪ್ರತಿಫಲವೂ ಅಷ್ಟು ಹೆಚ್ಚಾಗಿರುವುದಿಲ್ಲ ಇಲ್ಲಿ ತಯಾರಾದ ಪದಾರ್ಥಗಳಿಗೆ ವ್ಯಾಪಾರವೂ ಅಷ್ಟು ಹೆಚ್ಚಾಗಿರುವುದಿಲ್ಲ ದಳ್ಳಾಳಿಗಳ ಸಂಪರ್ಕವಿಲ್ಲದಹಾಗೆ ಪದಾರ್ಥ ತಯಾರಿಸುವವರೂ, ಪದಾರ್ಥ ಕೊಳ್ಳತಕ್ಕವರೂ ಒಟ್ಟಿಗೆ ಸೇರಿ ವ್ಯಾಪಾರಮಾಡಿ ಲಾಭವನ್ನೆಲ್ಲಾ ಕೆಲಸಗಾರರೇ ಹೊಂದುವ ಏರ್ಪಾಡನ್ನು ಇಲ್ಲಿ ನೋಡಬಹುದು

ಒಂದಾನೊಂದು ಕಾಲದಲ್ಲಿ ಭರತಖಂಡವು ಗ್ರಾಮ ಕೈಗಾರಿಕೆಗಳ ತವರುಮನೆಯಾಗಿತ್ತು ಹಳ್ಳಿಯ ಕಸಬುದಾರರು ತಮ್ಮ ಪಿತ್ರಾರ್ಜಿತವಾದ ಕುಶಲತೆಯನ್ನು ಬಿಡದೆ ಅದನ್ನು ಅನೂಚಾನವಾಗಿ ಅನುಸರಿಸುತ್ತಾ ಬರುತ್ತಿದ್ದರು ರೈತರಲ್ಲಿ ಭತ್ತವನ್ನು ಕುಟ್ಟಿ ಅಕ್ಕಿಮಾಡುವುದು, ಧಾನ್ಯವನ್ನು ಬೀಸಿ ಹಿಟ್ಟುಮಾಡುವುದು, ಕಬ್ಬಿನಿಂದ ಬೆಲ್ಲಮಾಡುವುದು, ಇವುಗಳೆಲ್ಲಾ ವಾಡಿಕೆಯಲ್ಲಿತ್ತು ಹತ್ತಿ, ರೇಷ್ಮೆ ಮತ್ತು ಲೋಹಗಳಲ್ಲಿಯೂ ಕೂಡ, ಅತ್ಯುತ್ತಮವಾದ ಪದಾರ್ಥಗಳು ತಯಾರಾಗುತ್ತಿದ್ದುವು ನೂಲುವುದೂ ಮತ್ತು ನೇಯುವುದೂ ಸಾಮಾನ್ಯವಾಗಿ ಹಳ್ಳಿಯವರಿಗೆಲ್ಲಾ ತಿಳಿದಿದ್ದಿತು ಇಂಡಿಯಾ ದೇಶವು ಮೇಲ್ಕಂಡ ಪದಾರ್ಥಗಳನ್ನೆಲ್ಲಾ ಇಲ್ಲಿಯ ಜನರಿಗೆ ಒದಗಿಸಿ ಉಳಿದ ಪದಾರ್ಥಗಳನ್ನು ಬರ್ಮ, ಚೈನಾ ಮತ್ತು ಅರಬ್ಬಿ ದೇಶಗಳಿಗೆ ರಫ್ತುಮಾಡುತ್ತಿತ್ತು ಇಂಡಿಯಾ ದೇಶದ ನೇಯ್ಗೆಯ ಕುಶಲತೆಯು ಎಷ್ಟರ ಮಟ್ಟಿನ ಉನ್ನತಸ್ಥಾನವನ್ನು ಹೊಂದಿದ್ದಿತು ಎಂಬುದನ್ನು ದಾಕಾಮುಸ್ಲಿನ್ನಿನಿಂದ ನಾವು ತಿಳಿಯಬಹುದು

ಕಾಲಕ್ರಮೇಣ ಪಾಶ್ಚಾತ್ಯ ದೇಶಗಳ ಸಂಪರ್ಕದಿಂದಲೂ, ಇಲ್ಲಿಯ ವ್ಯಾಪಾರದ ಅಧಿಕಾರವೆಲ್ಲಾ ಕೆಲವು ಯೂರೋಪು ಖಂಡದ ದೇಶಗಳ ಕೈವಶವಾದುದರಿಂದಲೂ, ಭರತಖಂಡದ ಹೆಸರುವಾಸಿಯಾದ ಗ್ರಾಮ

ಕೈಗಾರಿಕೆಗಳೆಲ್ಲಾ ಒಂದೊಂದಾಗಿ ಹಾಳಾಗುತ್ತಾ ಬಂದವು ಪಾಶ್ಚಾತ್ಯ ರಿಂದ ಸ್ಥಾಪಿಸಲ್ಪಟ್ಟ ಕೆಲವು ವ್ಯಾಪಾರ ಸಂಸ್ಥೆಗಳೂ ಕೂಡ ಇಲ್ಲಿಯ ಕೈಗಾರಿಕೆಗಳನ್ನು ನಾಶಪಡಿಸುವುದಕ್ಕೆ ನೆರವಾದುವು ಈ ಕೈಗಾರಿಕೆ ಗಳಲ್ಲಿ ಕೆಲಸಮಾಡುತ್ತಿದ್ದ ಅನೇಕ ಜನರು ತಮ್ಮ ವೃತ್ತಿಯನ್ನೇ ಬಿಟ್ಟು ಸಾಗುವಳಿದಾರರಾದರು ಇದಲ್ಲದೆ, ಇಂಡಿಯಾ ದೇಶದಲ್ಲಿ ತಯಾರಾಗು ತ್ತಿದ್ದ ಪದಾರ್ಥಗಳಮೇಲೆ ಹೆಚ್ಚು ಸುಂಕವು ಹಾಕಲ್ಪಟ್ಟು ಅವು ಪರದೇಶ ಗಳಿಗೆ ರಫ್ತಾಗದಂತೆಯೂ, ಇಲ್ಲಿ ತಯಾರುಮಾಡುವುದು ಲಾಭಕರ ವಾಗದಂತೆಯೂ ಮಾಡಲ್ಪಟ್ಟಿತು ಈ ಸ್ವದೇಶಿ ಕೈಗಾರಿಕೆಗಳಿಗೆ ಇಲ್ಲಿಯ ರಾಜ, ಮಹಾರಾಜರುಗಳ ಆಸರೆಯೂ ಕೂಡ ಇಲ್ಲವಾಯಿತು ಯಂತ್ರ ಸಲಕರಣೆಯಿಂದ ತಯಾರಾಗುತ್ತಿದ್ದ ಪಾಶ್ಚಾತ್ಯ ಪದಾರ್ಥಗಳ ಪೋಟಾ ಪೋಟಿಯ ಮುಂದೆ ಇಲ್ಲಿಯ ಪದಾರ್ಥಗಳು ನಿಲ್ಲಲಾರದೆಹೋದುವು ಹೀಗಾಗಿ ಇಲ್ಲಿಯ ಅನೇಕ ಗ್ರಾಮ ಕೈಗಾರಿಕೆಗಳು ನಾಶವಾದುದಲ್ಲದೆ ಅನೇಕ ಕಸಬುದಾರರು ತಮ್ಮ ಕಸಬನ್ನೇ ಬಿಟ್ಟುಬಿಟ್ಟು, ನೇಗಿಲ ಯೋಗಿಗಳಾದರು

ಇನ್ನೊಂದು ಕಡೆ ದಳ್ಳಾಳಿಗಳ ಅವಾಂತರ ಹೆಚ್ಚಾಗಿ ಹೆಚ್ಚು ಲಾಭ ವನ್ನು ಇವರೇ ಹೊಂದುತ್ತಿದ್ದರು ಕಸಬುದಾರರಿಗೆ ಹಗಲಿರಳು ದುಡಿದರೂ ಕೂಡ ನಿತ್ಯಜೀವನಕ್ಕೆ ಅತ್ಯಗತ್ಯವಾದಷ್ಟು ಸಂಪಾದನೆ ಕೂಡ ಆಗುತ್ತಿರ ಲಿಲ್ಲ ದಳ್ಳಾಳಿಗಳು ಕಸಬುದಾರರಿಗೆ ಬೇಕಾದ ಮೂಲಪದಾರ್ಥಗಳನ್ನು ಒದಗಿಸುವುದು, ಅರ್ಧಹೊಟ್ಟೆಗೆ ಸಾಕಾಗುವಷ್ಟು ಕೂಲಿ ಕೊಡುವುದು, ಅವರು ತಯಾರುಮಾಡಿದ ಪಹಾರ್ಥಗಳನ್ನು ತಾವು ತೆಗೆದುಕೊಂಡು ಅದರ ಮಾರಾಟದಿಂದ ಹೆಚ್ಚು ಲಾಭ ಹೊಂದುವುದು—ಹೀಗಾಗಿ ನೇಯ್ಗೆ, ಲೋಹ ಮತ್ತು ದಂತದ ಕೆಲಸಗಳಲ್ಲಿ ದುಡಿಯುತ್ತಿದ್ದವರ ವರಮಾನವು ಕಡಿಮೆಯಾಗಿ ಅವರು ಜೀವನ ನಡೆಸುವುದೇ ಕಷ್ಟವಾಯಿತು ಆ ವರಮಾನವು ಸುಮಾರು ಶೇ ೪೦ಕ್ಕಿಂತ ಹೆಚ್ಚಾಗಿ ಕಡಿಮೆಯಾಯಿತು ಎಂಬುದಾಗಿ ಅಂದಾಜುಮಾಡಲಾಗಿದೆ *

*"Ascot's Report on the Development of Cottage Industry in Bengal", p 3

ಇಷ್ಟು ಕಷ್ಟದಲ್ಲಿಯೂ ಕೂಡ ಇನ್ನೂ ಕೆಲವು ಸಣ್ಣ ಕೈಗಾರಿಕೆಗಳು ನಮ್ಮ ದೇಶದಲ್ಲಿ ಉಳಿದಿವೆ ಇವುಗಳಲ್ಲಿ ಮುಖ್ಯವಾದುದು ಹಿತ್ತಾಳೆ, ತಾಮ್ರದ ಕೆಲಸ ಇದಕ್ಕೆ ಪರದೇಶದ ಪೈಪೋಟಿ ಬಂದಿಲ್ಲವೆಂದೇ ಹೇಳಬಹುದು ಇದಲ್ಲದೆ ಹಳ್ಳಿಯ ಬಡಗಿ, ಕುಂಬಾರ, ನೇಯ್ಗೆಯವರು ಇನ್ನೂ ತಮ್ಮ ಕಸಬನ್ನು ಪೂರ್ತಿಯಾಗಿ ಬಿಟ್ಟಿಲ್ಲ ಇನ್ನೂ ಕೆಲವು ಗ್ರಾಮ ಕೈಗಾರಿಕೆಗಳು ಅಲ್ಲಲ್ಲೇ ಇವೆ ವ್ಯವಸಾಯವೇ ಮುಖ್ಯ ವೃತ್ತಿಯಾಗಿ ಉಳ್ಳ ಭರತಖಂಡದಲ್ಲಿ ಇಂತಹ (ಸಣ್ಣ ಕೈಗಾರಿಕೆ ಅತ್ಯವಶ್ಯಕವಾಗಿದೆ ರೈತರ ಆರ್ಥಿಕ ಜೀವನವನ್ನು ಸರಿಯಾದ ಸ್ಥಿತಿಯಲ್ಲಿಡಬೇಕಾದರೆ ಗ್ರಾಮ ಕೈಗಾರಿಕೆಗಳು ಅಭಿವೃದ್ಧಿ ಹೊಂದಬೇಕು) ಜಮೀನನ್ನು ಅವಲಂಬಿಸಿರುವವರ ಸಂಖ್ಯೆಯು ಹೆಚ್ಚಿದಹಾಗೆಲ್ಲಾ ಅಧಿಕ ಜನಗಳಿಗೆ ಉದ್ಯೋಗವನ್ನು ಒದಗಿಸಲು ಬೇಕಾದರೆ ಈ ಗ್ರಾಮ ಕೈಗಾರಿಕೆಗಳು ಅತ್ಯಾವಶ್ಯಕ

(ಹಳ್ಳಿಯ ರೈತರು ಸರಿಯಾದ ಉಪವೃತ್ತಿಗಳನ್ನು ಅನುಸರಿಸದೆ, ತಮ್ಮ ವಿರಾಮ ಕಾಲವನ್ನು ಅನ್ಯಾಯವಾಗಿ, ಪ್ರತಿಫಲವಾಗದ ರೀತಿಯಲ್ಲಿ ಕಳೆಯುತ್ತಿರುವರು ಇದರಿಂದ ದೇಶಕ್ಕೆ ನಷ್ಟವಾಗುತ್ತಿರುವುದಲ್ಲದೆ ರೈತರ ಆರ್ಥಿಕ ಜೀವನವೂ ಕಷ್ಟವಾಗುತ್ತಿದೆ ಪಂಜಾಬು ದೇಶದ ರೈತರಿಗೆ ಒಂದು ವರ್ಷದಲ್ಲಿ ೧೫೦ ದಿವಸಗಳು ಮಾತ್ರ ಕೆಲಸವಿದೆ ಎಂದೂ, ಉಳಿದ ೨೧೫ ದಿವಸಗಳನ್ನು ವ್ಯರ್ಥವಾಗಿ ಅವರು ಕಳೆಯುತ್ತಿದ್ದಾರೆಂದೂ ಹೇಳಲಾಗಿದೆ * ಬಂಗಾಳಾ ದೇಶದ ಭತ್ತ, ಸಣಬು ಬೆಳೆಯತಕ್ಕ ಪ್ರದೇಶಗಳಲ್ಲಿ ರೈತರು ವರ್ಷದಲ್ಲಿ ಆರು ತಿಂಗಳು ಮಾತ್ರ ಕೆಲಸಮಾಡುವರೆಂದೂ, ಸಣಬು ಬೆಳೆಯುವ ಪ್ರದೇಶದಲ್ಲಿ ಮಾತ್ರ ಮೂರೇ ತಿಂಗಳು ದುಡಿಯುತ್ತಾರೆಂದೂ ತಿಳಿಯಬಂದಿದೆ † ಹಾಗೆಯೇ ಸಂಯುಕ್ತ ಪ್ರಾಂತದಲ್ಲಿ ರೈತರು ಏಳು ತಿಂಗಳಕಾಲ ಕೆಲಸಮಾಡುವರೆಂದೂ ‡ ಮದ್ರಾಸಾಧಿಪತ್ಯದಲ್ಲಿ ಒಂದು ಬೆಳೆಯನ್ನು ತೆಗೆಯುವ ರೈತರು ಐದು ತಿಂಗಳೂ, ಎರಡುಬೆಳೆಯನ್ನು ತೆಗೆಯುವವರು ೮ ತಿಂಗಳೂ ಕೆಲಸಮಾಡುವರೆಂದೂ ನಿರ್ಧರಿಸಿದ್ದಾರೆ §

* " Wealth and Welfare of the Punjab ", p 245
† "Economic Life of Bengal District", by Jack, p 53
‡ "Wastage of India's Man power", by R K Das, Modern India, Ap 1927
§ " Some South Indian Villages ", by Slater, p 1

೧೯೨೮ನೆಯ ಇಸವಿಯ ವ್ಯವಸಾಯ ವಿಮರ್ಶನಾ ಸಮಿತಿಯವರು ಇಂಡಿಯಾ ದೇಶದ ರೈತರಿಗೆ ಒಂದು ವರ್ಷದಲ್ಲಿ ಕನಿಷ್ಠಪಕ್ಷ ೨ರಿಂದ ೪ ತಿಂಗಳವರೆಗಾದರೂ ವಿರಾಮವಿದ್ದೇ ಇದೆ ಎಂಬುದಾಗಿ ಹೇಳಿದ್ದಾರೆ ಈ ವಿರಾಮವನ್ನು ಅವರು ವ್ಯರ್ಥವಾಗಿ ಕಳೆಯುತ್ತಿದ್ದಾರೆ ರೈತರ ಜೀವನವು ಉತ್ತಮವಾಗಿ ಅವರ ಸಂಪಾದನೆಯು ಹೆಚ್ಚಬೇಕಾದರೆ, ತಮ್ಮ ಮುಖ್ಯ ಕಸಬಾದ ವ್ಯವಸಾಯದ ಜೊತೆಗೆ ಯಾವುದಾದರೂ ಉಪಕೈಗಾರಿಕೆಯನ್ನು ಕೈಗೊಳ್ಳಬೇಕು ಈ ಸಂದರ್ಭದಲ್ಲಿ ಕೆಲವು ದೇಶಗಳು ಹೇಗೆ ಈ ಸಣ್ಣ ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸುತ್ತಾ ಇವೆ, ಎಂಬ ವಿಷಯವನ್ನು ವಿಚಾರಮಾಡಿದರೆ ನಮ್ಮ ದೇಶದ ಸಣ್ಣ ಕೈಗಾರಿಕೆಗಳ ಪುನರುಜ್ಜೀವನಕ್ಕೆ ಸಹಾಯವಾಗಬಹುದು

ಪ್ರಾಚೀನ ಮನೋಧರ್ಮವುಳ್ಳ ಫ್ರಾನ್ಸ್ ದೇಶದ ರೈತರು ಅನೇಕ ವಿಧವಾದ ಸಣ್ಣ ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸುತ್ತಿದ್ದಾರೆ ಅವರು ತಾವು ತಯಾರುಮಾಡುವ ಪದಾರ್ಥಗಳ ವಿಷಯದಲ್ಲಿ ಚೆನ್ನಾಗಿ ಆಲೋಚನೆಮಾಡಿ, ಜನರ ಸಮಯಕ್ಕೆ ಅನುಕೂಲವಾದ ಪದಾರ್ಥಗಳನ್ನು ತಯಾರುಮಾಡುತ್ತಾರೆ ರೇಷ್ಮೆಯ ಲಾಡಿ, ನೊಗಸಾದ ಜರತಾರಿ —ಇವೇ ಮುಂತಾದ ಕೈಗಾರಿಕೆಗಳು ಒಳ್ಳೆಯ ಉಪವೃತ್ತಿಯಾಗಿ ಪರಿಣಮಿಸಿವೆ ಹೀಗೆಯೇ ಇಟಲಿ ದೇಶದಲ್ಲಿಯೂ ಕೂಡ ಈ ಸಣ್ಣ ಕೈಗಾರಿಕೆಗಳು ರೈತರ ಉತ್ತಮ ಜೀವನಕ್ಕೆ ಸಹಾಯಕವಾಗಿವೆ ಚಾಪೆ, ಬುಟ್ಟಿ, ಬತ್ತಿ ಮತ್ತು ಹುಲ್ಲಿನ ಹೆಣಿಕೆ ಮುಂತಾದ ಕೈಗಾರಿಕೆಗಳು ಬಹಳ ಉತ್ತಮಸ್ಥಿತಿಯಲ್ಲಿವೆ

ಸ್ವಿಟ್ಜರ್ಲೆಂಡ್ ಸಣ್ಣ ಕೈಗಾರಿಕೆಗಳ ತವರುಮನೆ ಎಂಬುದಾಗಿ ಹೇಳಬಹುದು ಇಲ್ಲಿಯ ಒಟ್ಟು ಜನಸಂಖ್ಯೆಯ ಮೂರನೆಯ ಒಂದು ಭಾಗದಷ್ಟು ಜನರು ಗಡಿಯಾರದ ಸಾಮಾನುಮಾಡುವುದು, ಸಂಗೀತ ಸಾಧನಗಳನ್ನು ಮಾಡುವುದು, ನೇಯ್ಗೆ ಮತ್ತು ಕೆತ್ತನೆ ಕೆಲಸ— ಇವೇ ಮುಂತಾದ ಕೈಗಾರಿಕೆಗಳಲ್ಲಿ ಕೆಲಸಮಾಡುತ್ತಿದ್ದಾರೆ ಈ ಸಣ್ಣ ಕೈಗಾರಿಕೆಗಳ ಅವಶ್ಯಕತೆಯನ್ನು ಈ ದೇಶದ ಜನರು ಚೆನ್ನಾಗಿ ತಿಳಿದಿದ್ದಾರೆ ರಷ್ಯಾದೇಶದಲ್ಲಿ ಈ ಕೈಗಾರಿಕೆಗಳು ಸಾಮಾನ್ಯವಾಗಿ ರೈತರ ನಿತ್ಯಜೀವನದ

ಅವಶ್ಯಕತೆಯನ್ನೆಲ್ಲಾ ಒದಗಿಸಿ, ಒಳ್ಳೆಯ ವರಮಾನವನ್ನುಂಟುಮಾಡುತ್ತಿದೆ ಉತ್ತರ ರಷ್ಯಾದಲ್ಲಿ ಪ್ರತಿ ಒಂದು ಗ್ರಾಮವೂ ಒಂದೊಂದು ವಿಧವಾದ ಕೈಗಾರಿಕೆಯಲ್ಲಿ ವಿಶೇಷ ನೈಪುಣ್ಯತೆಯನ್ನು ಹೊಂದಿ, ಬಹಳ ಸುಲಭ ಬೆಲೆಗೆ ಪದಾರ್ಥಗಳನ್ನು ಮಾರುತ್ತಿವೆ ಲಕ್ಷಾಂತರ ಜನಗಳಿಗೆ ಅಶನವಸನಾದಿಗಳನ್ನು ಒದಗಿಸುತ್ತಿರುವ ರಷ್ಯನರ 'ಕುಸ್ತಾರ್' ಸಂಸ್ಥೆಗಳು ಲೋಕಪ್ರಸಿದ್ಧವಾಗಿವೆ ಸೋವಿಯಟ್ ಕಾರ್ಖಾನೆಯನ್ನು ವಜಾ ಮಾಡಿದಮೇಲೆ, ಪ್ರತಿಯೊಂದು ಹಳ್ಳಿಯಲ್ಲಿಯೂ ನೆಯ್ಗೆ ಮುಂತಾದ ವೃತ್ತಿಗಳನ್ನು ನಿರುದ್ಯೋಗಿಗಳಾದ ಜನರಿಗೆ ಒದಗಿಸಿದ್ದಾಗಿದೆ ಸಾರ್ವಜನಿಕ ದೃಷ್ಟಿಯಿಂದ ರಷ್ಯಾ ದೇಶದ ಶ್ರೀಮಂತರು, ಈ ಸಣ್ಣ ಗ್ರಾಮ ಕೈಗಾರಿಕೆಗಳಿಗೆ ಉತ್ತೇಜನಕೊಡುವುದನ್ನೇ ತಮ್ಮ ಮುಖ್ಯ ಕಸಬನ್ನಾಗಿ ಮಾಡಿಕೊಂಡು ದೇಶಾಭಿವೃದ್ಧಿ ಕೆಲಸಮಾಡುತ್ತಿದ್ದಾರೆ *

ಸಣ್ಣ ಕೈಗಾರಿಕೆ ವಿಷಯದಲ್ಲಿ ಜಪಾನ್ ದೇಶದವರ ಉದಾಹರಣೆಯು ಸರ್ವೋತ್ತಮವಾಗಿದೆ ಇದಕ್ಕೆ ಮುಖ್ಯವಾಗಿ ಅಲ್ಲಿ ಕೊಡುತ್ತಿರುವ ಔದ್ಯೋಗಿಕಶಿಕ್ಷಣವೂ, ಜಪಾನೀಯರ ವ್ಯಾಪಾರೋದ್ಯಮ ವಿಚಕ್ಷಣೆಯೂ ಕಾರಣವಾಗಿವೆ ಜನರ ಅಪೇಕ್ಷೆಯನ್ನು ಚೆನ್ನಾಗಿ ತಿಳಿದು ಅವರಿಗೆ ಬೇಕಾದ ಪದಾರ್ಥಗಳನ್ನು ಸಕಾಲದಲ್ಲಿ ಒದಗಿಸುವ ಏರ್ಪಾಡು ಮಾಡುವುದರಲ್ಲಿ ಜಪಾನೀಯರು ನಿಪುಣರು ಈ ವಿಚಾರದಲ್ಲಿ ಅವರು ಪ್ರಪಂಚಕ್ಕೇ ಆದರ್ಶಪ್ರಾಯರಾಗಿದ್ದಾರೆಂದು ಧಾರಾಳವಾಗಿ ಹೇಳಬಹುದು ಜಪಾನ್ ದೇಶದ ಸ್ಥಳೀಯ ವಿದ್ಯಮಾನಗಳಿಗೆ ಅನುಗುಣವಾಗಿ ಕೆಲವು ಭಾಗವನ್ನು ಕೈಗಾರಿಕಾ ಪ್ರದೇಶವೆಂದೂ, ಇನ್ನು ಕೆಲವು ಭಾಗವನ್ನು ವ್ಯವಸಾಯ ಪ್ರದೇಶವೆಂದೂ ವಿಭಾಗಿಸಿ ಆಯಾ ಸ್ಥಳಕ್ಕೆ ಅನುಗುಣವಾದ ಉತ್ತೇಜನವನ್ನು ಸರ್ಕಾರದವರೇ ಕೊಡುತ್ತಿದ್ದಾರೆ ವ್ಯಾಪಾರದ ತೊಡಕುಗಳು ಎಷ್ಟಿದ್ದರೂ ಅವನ್ನು ಲೆಕ್ಕಿಸದೆ ಜಪಾನ್ ದೇಶೀಯರು ತಮ್ಮ ಪದಾರ್ಥಗಳನ್ನು ಪ್ರಪಂಚದ ಎಲ್ಲಾ ಭಾಗಕ್ಕೂ ಕಳುಹಿಸುತ್ತಿದ್ದಾರೆ. ಅವರ ಪದಾರ್ಥಗಳು ಸಿಕ್ಕದೇ ಇರತಕ್ಕ ಸ್ಥಳವೇ ಇಲ್ಲ ಇದರಿಂದಲೇ ಅವರ ವ್ಯಾಪಾರದ ನೈಪುಣ್ಯತೆಯನ್ನು ನಾವು ತಿಳಿಯಬಹುದು

---

* "Rural Reconstruction", by Henry Wolff, p 282

ಈಗ್ಗೆ ಸುಮಾರು ೩೦–೩೫ ವರ್ಷಗಳಿಗೆ ಹಿಂದೆ, ಜಪಾನ್ ದೇಶವು ಭಾರತಕ್ಕಿಂತ ಹಿಂದುಳಿದಿದ್ದಿತು ಕಳೆದ ಯೂರೋಪ್ ಮಹಾಯುದ್ಧವಾದಮೇಲೆ, ಜಪಾನ್ ದೇಶವು ತನ್ನ ಕೈಗಾರಿಕೆಯನ್ನು ಬಹಳ ಜಾಗ್ರತೆ ಉತ್ತಮಪಡಿಸಿಕೊಂಡಿತು ಯೂರೋಪಿನ ರಾಷ್ಟ್ರಗಳೆಲ್ಲಾ ಯುದ್ಧದಲ್ಲಿ ಮಗ್ನರಾಗಿದ್ದಾಗ, ಯುದ್ಧ ಮುಗಿದು ವಿರಾಮವಾಗಿ ತಮ್ಮ ಸುತ್ತುಮುತ್ತನ್ನು ನೋಡಿಕೊಳ್ಳಲು ಪ್ರಾರಂಭಿಸಿದ ಕಾಲಕ್ಕೆ ಸರಿಯಾಗಿ, ಜಪಾನ್ ದೇಶವು ಪಾಶ್ಚಾತ್ಯ ಕೈಗಾರಿಕಾ ದೇಶಗಳಿಗೆಲ್ಲಾ ಪ್ರತಿಸ್ಪರ್ಧಿಯಾಗಿ ನಿಂತಿತು ಪ್ರಪಂಚಕ್ಕೆಲ್ಲಾ ಗಡಿಯಾರವನ್ನು ತಯಾರುಮಾಡುತ್ತಿದ್ದ ಸ್ವಿಟ್ಜರ್ಲೆಂಡ್ ದೇಶವನ್ನು ಗಡಿಯಾರ ತಯಾರಿಕೆಯಲ್ಲಿ ಜಪಾನ್ ದೇಶವು ಮೀರಿಸಿ, ಒಂದೂವರಾಣೆಗೆ ಒಂದು ಗಡಿಯಾರವನ್ನು ಮಾರುತ್ತಾ ಇದೆ ಹಾಗೆಯೇ ಹತ್ತಿ ಬಟ್ಟೆಯನ್ನು ತಯಾರುಮಾಡುವುದರಲ್ಲಿ ಜಗತ್ ಪ್ರಸಿದ್ಧವಾದ ಮ್ಯಾಂಚೆಸ್ಟರ್ ಬಟ್ಟೆಯನ್ನೂ ಮೀರಿಸಿ, ಅದಕ್ಕಿಂತ ಸುಲಭ ಕ್ರಯದಲ್ಲಿ ಅಷ್ಟೇ ಉತ್ತಮವಾದ ಹತ್ತಿ ಬಟ್ಟೆಯನ್ನು ತಯಾರುಮಾಡುತ್ತಿದೆ. ಈಗ ಪ್ರಪಂಚದಲ್ಲಿ ಜಪಾನ್ ದೇಶದ ವ್ಯಾಪಾರ ವ್ಯಾಪ್ತಿಯಿಂದ ಪಾರಾದ ದೇಶವೇ ಇಲ್ಲ ಅದು ಕಾಲಿಡದ ಪ್ರದೇಶವೇ ಇಲ್ಲ ೧೯೦೧ನೆಯ ಇಸವಿಯಲ್ಲಿ ಜಪಾನ್ ದೇಶವು ೧೨,೫೨,೮೩,೭೧೫ ಎನ್‌ಗಳಷ್ಟು ಬೆಲೆಯುಳ್ಳ ಪದಾರ್ಥಗಳನ್ನು ರಫ್ತುಮಾಡಿದ್ದರೆ, ೧೯೩೪ನೆಯ ಇಸವಿಯಲ್ಲಿ ೨,೧೭,೧೯,೨೪,೬೨೩ ಎನ್‌ಗಳಷ್ಟು ಬೆಲೆಯ ಪದಾರ್ಥಗಳನ್ನು ಪರದೇಶಕ್ಕೆ ಕಳುಹಿಸಿದೆ (ಮೊದಮೊದಲು ಜಪಾನ್ ದೇಶವು ರೇಷ್ಮೆ, ಆಟದ ಸಾಮಾನು ಮತ್ತು ಕಾಗದದ ಸಾಮಾನು ಕಳುಹಿಸುತ್ತಿತ್ತು ಈಗ ಮೋಟಾರುಗಳು, ಆಶುವಾರ್ತಾ ಯಂತ್ರಗಳು, ಬೈಸಿಕಲ್ಲು — ಇವೇ ಮುಂತಾದ ಪದಾರ್ಥಗಳನ್ನು ಹೆಚ್ಚು ಹೆಚ್ಚಾಗಿ ಕಳುಹಿಸುತ್ತಿದೆ ಜಪಾನ್ ದೇಶದಲ್ಲಿ ಸೃಷ್ಟಿಯಾಗದ ಪದಾರ್ಥವೇ ಇಲ್ಲ ಮನುಷ್ಯನ ಭೋಗವಿಲಾಸಕ್ಕೆ ಬೇಕಾದ ಎಲ್ಲಾ ಪದಾರ್ಥಗಳನ್ನು ಜಪಾನ್ ದೇಶೀಯರು ತಯಾರುಮಾಡಿ, ಇನ್ನು ಎಲ್ಲಿಯೂ ಮಾರದಷ್ಟು ಕಡಿಮೆ ಬೆಲೆಗೆ ಮಾರುತ್ತಿದ್ದಾರೆ )

ಜಪಾನ್ ದೇಶದ ಕೈಗಾರಿಕಾಭಿವೃದ್ಧಿಯು ಆಶ್ಚರ್ಯವಾಗಿದೆ

ಇದರ ಗುಟ್ಟನ್ನು ಯಾರೂ ಸಮಂಜಸವಾಗಿ ಬಗೆಹರಿಸಿಲ್ಲ ಕೆಲವರು ಕೂಲಿಗಾರರಿಗೆ ಸರಿಯಾಗಿ ಕೂಲಿ ಕೊಡದೆ, ಇಲ್ಲಿ ಕೆಲಸ ನಡೆಸುತ್ತಾರೆಂದೂ, ಇನ್ನುಕೆಲವರು ಜಪಾನ್ ಸರ್ಕಾರವೇ ಹಣ ಒದಗಿಸಿ, ಪದಾರ್ಥಗಳನ್ನು ತಯಾರುಮಾಡಿಸುತ್ತಾರೆಂದೂ ಮತ್ತೆ ಕೆಲವರು ಪಾಶ್ಚಾತ್ಯ ದೇಶಗಳಮೇಲೆ ಪೈಪೋಟಿ ನಡೆಸುವುದಕ್ಕೋಸ್ಕರ ನಾಣ್ಯದಲ್ಲಿ ಮೋಸಪಡಿಸಿ, ಬಹಳ ಕಡಿಮೆ ಬೆಲೆಗೆ ಪದಾರ್ಥಗಳನ್ನು ಮಾರುತ್ತಿದೆ ಎಂದೂ ನಾನಾವಿಧವಾಗಿ ಹೇಳುತ್ತಾರೆ ಈ ಕಾರಣಗಳ್ಯಾವುವೂ ಅಷ್ಟು ಸಮಂಜಸವಾಗಿ ಕಾಣುವುದಿಲ್ಲ ಹಾಗಿದ್ದಪಕ್ಷದಲ್ಲಿ, ಬಹಳ ಕಾಲ ಆ ರೀತಿಯಾದ ವ್ಯಾಪಾರ ನಡೆಸಲು ಜಪಾನ್ ದೇಶಕ್ಕೆ ಸಾಧ್ಯವಾಗುತ್ತಿರಲಿಲ್ಲ. ಪಾಶ್ಚಾತ್ಯ ದೇಶಗಳ ಮಾದರಿಯಲ್ಲಿಯೇ ಜಪಾನ್ ದೇಶವು ತನ್ನ ಯಂತ್ರ ಕೈಗಾರಿಕೆಗಳನ್ನು ಮುಂದುವರಿಸಿ, ಹೆಚ್ಚು ಪ್ರೋತ್ಸಾಹವನ್ನು ಕೊಟ್ಟಿರುತ್ತದೆ ಅದೇ ಕಾಲದಲ್ಲಿ ದೇಶದಲ್ಲಿ ಹಿಂದೆ ಇದ್ದ ಕೈಕಸಬುಗಳಿಗೂ ಕೂಡ ಹೆಚ್ಚು ಗಮನ ಕೊಟ್ಟಿದೆ ದೇಶದ ಪ್ರತಿಯೊಂದು ಭಾಗದಲ್ಲಿಯೂ ಪ್ರತಿಯೊಬ್ಬ ವ್ಯಕ್ತಿಯೂ ಯಾವುದಾದರೊಂದು ಉದ್ಯೋಗದಲ್ಲಿ ನಿರತನಾಗಿರಬೇಕೆಂಬ ತತ್ವವನ್ನು ಅಲ್ಲಿಯ ಸರ್ಕಾರವು ಸಾರುತ್ತಿದೆ ಗ್ರಾಮ ಕೈಗಾರಿಕೆಗಳನ್ನು ಕೂಡ ನೂತನ ವಿಜ್ಞಾನ ರೀತಿಯಲ್ಲಿ ಪರಿಷ್ಕೃತಗೊಳಿಸುತ್ತಿದೆ ಬೆಳಿಗ್ಗೆ ೭ ಘಂಟೆಯಿಂದ ಸಾಯಂಕಾಲ ೭½ ಘಂಟೆಯವರಿಗೂ (ಮಧ್ಯೆ ಅರ್ಧ ಘಂಟೆಯ ವಿರಾಮಕಾಲ ಹೊರತು) ಅಲ್ಲಿಯ ಕಸಬುದಾರರು ಕಷ್ಟಪಟ್ಟು ಕೆಲಸಮಾಡಿ, ಗಂಡಹೆಂಡರಿಬ್ಬರು ತಿಂಗಳು ಒಂದಕ್ಕೆ ೮೮ ರೂಪಾಯಿಗಳು ಸಂಪಾದನೆಮಾಡಿ, ಸುಖಜೀವನ ನಡೆಸಿಕೊಳ್ಳುತ್ತಾರೆ

ಜಪಾನ್ ದೇಶೀಯರು ಶ್ರಮಜೀವಿಗಳು, ಅಲ್ಲಿ ಜಾತಿದ್ವೇಷವಿಲ್ಲ ಜಪಾನೀಯರು ಕೈಗಾರಿಕಾನೈಪುಣ್ಯತೆಯಲ್ಲಿ ಪಾಶ್ಚಿಮಾತ್ಯರನ್ನು ಮೀರಿಸಿದರೂ, ತಮ್ಮ ಜೀವನದ ನಡತೆ, ಮಿತವ್ಯಯ, ಸರಳತೆ— ಇವುಗಳನ್ನು ಬದಲಾಯಿಸದೆ ಚೆನ್ನಾಗಿ ಕಾಪಾಡಿಕೊಂಡು ಬರುತ್ತಿದ್ದಾರೆ ಅವರ ಸ್ವದೇಶ ಪ್ರೇಮವು ಅಸಾಧಾರಣವಾದದ್ದು ದೇಶೋದ್ಧಾರಕ್ಕಾಗಿ ಪ್ರತಿಯೊಬ್ಬ ಜಪಾನೀಯನೂ ತನ್ನ ಪ್ರಾಣವನ್ನರ್ಪಿಸಲು ಸಿದ್ಧನಿದ್ದಾನೆ

ಇಲ್ಲಿಯ ಶಿಕ್ಷಣಕ್ರಮವೂ ಉತ್ತಮವಾಗಿದೆ ಮೊದಲಿನಿಂದಲೂ ಕೈಗಾರಿಕೆಯನ್ನು ಅಭಿವೃದ್ಧಿಪಡಿಸುವ ಉದ್ದೇಶದಿಂದಲೇ ಶಿಕ್ಷಣವು ಪ್ರಾರಂಭವಾಯಿತು ಬಲಾತ್ಕಾರ ಶಿಕ್ಷಣವು ಆಚರಣೆಯಲ್ಲಿದೆ ಈಗ ಪ್ರಪಂಚದ ಪ್ರತಿಯೊಬ್ಬ ವ್ಯಕ್ತಿಯ ದೃಷ್ಟಿಯೂ ಜಪಾನ್ ದೇಶದಮೇಲಿದೆ ಇದಕ್ಕೆಲ್ಲಾ ಮುಖ್ಯವಾಗಿ ಜಪಾನ್ ಸರ್ಕಾರದ ಉತ್ತೇಜನ, ಕಡಿಮೆ ದರದ ತೆರಿಗೆ, ಅವರ ದೇಶವಾತ್ಸಲ್ಯ, ಅನೂಚಾನವಾಗಿ ಬಂದ ಪದ್ಧತಿಯನ್ನು ಬಿಡದೆ ಇರುವುದು ಇವೇ ಮುಂತಾದ ಉತ್ತಮ ಮಾರ್ಗಗಳು ಪ್ರಪಂಚಕ್ಕೆ ಆದರ್ಶಪ್ರಾಯವಾಗಿವೆ ಮೇಲ್ಕಂಡ ಪ್ರತಿಯೊಂದು ಅಂಶದಲ್ಲಿಯೂ ಜಪಾನು ಭರತಖಂಡಕ್ಕೆ ಮಾದರಿಯಾಗಿದೆ ಎಂದು ಹೇಳಬಹುದು

ಭರತಖಂಡದ ಗ್ರಾಮ ಕೈಗಾರಿಕೆಗಳನ್ನು ಎರಡು ಪಂಗಡವಾಗಿ ವಿಂಗಡಿಸಬಹುದು ಒಂದು, ವ್ಯವಸಾಯದ ಜೊತೆಯಲ್ಲೇ ಉಪವೃತ್ತಿಯನ್ನಾಗಿ ಅವಲಂಬಿಸಿ, ಅದರಿಂದ ಹೆಚ್ಚು ಸಂಪಾದನೆ ಮಾಡುವುದು ಇನ್ನೊಂದು, ವ್ಯವಸಾಯದ ಸಹಾಯವಿಲ್ಲದೆ ಸ್ವತಂತ್ರವಾಗಿ ಮನೆಯಲ್ಲಿ ಕೆಲಸಮಾಡಿ ಪದಾರ್ಥಗಳನ್ನು ತಯಾರಿಸಿ, ಅವುಗಳ ಮಾರಾಟದಿಂದ ಬಂದ ಹಣದಲ್ಲಿ ಜೀವನ ನಡೆಸುವುದು ಈ ಕೈಗಾರಿಕೆಗಳಲ್ಲಿ ಕೆಲಸ ಮಾಡುವವರಿಗೆ ಕಾಲ, ಸ್ಥಳ ನಿರ್ದೇಶ— ಇವುಗಳ ನಿರ್ಬಂಧವಿಲ್ಲ ಅವರ ಜೀವನದ ಮಟ್ಟವೂ ಕೂಡ ಅಷ್ಟು ಉತ್ತಮದರ್ಜೆಯದಾಗಿರಲು ಅವಕಾಶವಿಲ್ಲ ಸಾಮಾನ್ಯವಾಗಿ ಮನೆಯ ಸಂಸಾರಕ್ಕೆ ಸೇರಿದವರೇ ಅಲ್ಲಿಯ ಕೆಲಸಗಾರರು ಮನೆಗಳೇ ಕೈಗಾರಿಕಾ ಕಾರ್ಖಾನೆ ಅಲ್ಲಿ ಹೆಚ್ಚು ವಿಸ್ತಾರಕ್ಕಾಗಲಿ ಅಥವಾ ಹೆಚ್ಚು ಜನರು ಸೇರಿ ಕೆಲಸಮಾಡಿ ಹೆಚ್ಚು ಸಂಪಾದನೆ ಮಾಡುವುದಕ್ಕಾಗಲಿ ಅವಕಾಶವಿಲ್ಲ

ನಮ್ಮ ದೇಶದ ಗ್ರಾಮ ಅಥವಾ ಮನೆ ಕೈಗಾರಿಕೆಗಳ ವಿಷಯದಲ್ಲಿ ಹೆಚ್ಚು ಸಾಮಗ್ರಿಗಳು ನಮಗೆ ಸಿಕ್ಕುವುದಿಲ್ಲ ದೇಶದ ಗ್ರಾಮ ಕೈಗಾರಿಕಾ ಹುಟ್ಟುವಳಿಗೆ ಈ ಸಣ್ಣ ಕೈಗಾರಿಕೆಗಳು ಹೆಚ್ಚು ಸಹಾಯಮಾಡುತ್ತಿದ್ದರೂ ಇವುಗಳ ವಿಚಾರವಾಗಿ ನಮಗೆ ಸಿಕ್ಕುತ್ತಿರುವ ವಿಷಯವು ಬಹಳ ಸ್ವಲ್ಪ. ಅನೇಕ ಕಡೆಗಳಲ್ಲಿ ಈ ಕೈಗಾರಿಕೆಗಳಲ್ಲಿ ಕೆಲಸಮಾಡುತ್ತಿರುವವರ ಸಂಖ್ಯೆ, ಕೆಲಸದ ಕಾಲ, ಉತ್ಪತ್ತಿಯ ಬೆಲೆ, ಸರಾಸರಿ ವರಮಾನ— ಇವೇ

ಮುಂತಾದುವುಗಳನ್ನು ಶೇಖರಿಸಲು ಬಹಳ ಕಷ್ಟವಾಗಿದೆ ಈ ಕೈಗಾರಿಕೆಗಳ ಒಟ್ಟು ಉತ್ಪತ್ತಿಯು ನಮಗೆ ಸಿಕ್ಕುವುದಿಲ್ಲ ಈ ಕೈಗಾರಿಕೆಗಳಲ್ಲಿ ಉಪಯೋಗವಾಗುತ್ತಿರುವ ಪದಾರ್ಥಗಳ ಬೆಲೆ, ಅವುಗಳಿಂದ ಬರುತ್ತಿರುವ ಲಾಭ, ಇವುಗಳು ನಮಗೆ ಸಿಕ್ಕದೇ ಇರುವುದರಿಂದ, ಇವುಗಳ ಅವ್ಯವಸ್ಥೆಯನ್ನು ನಾವು ತಿಳಿಯಬಹುದು ಇದರ ಜೊತೆಗೆ ಇವುಗಳನ್ನು ಸುವ್ಯವಸ್ಥಿತ ರೀತಿಯಲ್ಲಿಡುವಂತೆ ಏರ್ಪಾಡು ಮಾಡಲು ಅವಕಾಶವಿಲ್ಲವಾಗಿದೆ ಆದುದರಿಂದಲೇ ಇಂಡಿಯಾ ದೇಶದ ಆರ್ಥಿಕ ವಿಚಾರಣಾ ಸಮಿತಿಯುವರು ಈ ಕೈಗಾರಿಕೆಗಳ ವಿಷಯದಲ್ಲಿ ಸರಿಯಾದ ವಿಚಾರಣೆ ನಡೆಯಿಸಿ, ಇವುಗಳ ಅಭಿವೃದ್ಧಿಗೆ ಸೂಕ್ತವಾದ ಸಲಹೆಯನ್ನು ಕೊಡಬೇಕೆಂದು ಬರೆದಿದ್ದಾರೆ *

ನಮ್ಮ ದೇಶದಲ್ಲಿ ಈಗ ಆಚರಣೆಯಲ್ಲಿರುವ ಕೆಲವು ಅತಿ ಮುಖ್ಯವಾದ ಮನೆಕೈಗಾರಿಕೆಗಳನ್ನು ವಿಚಾರಮಾಡುವುದು ಸೂಕ್ತವಾಗಿ ಕಾಣುತ್ತದೆ ಕೈಮಗ್ಗದಿಂದ ನೇಯುವುದು ಬಹಳ ಕಾಲದಿಂದ ಅನೂಚಾನವಾಗಿ ಬಂದಿರುವ ವೃತ್ತಿ ಈಗಲೂ ಕೂಡ ಅನೇಕ ಕಡೆಗಳಲ್ಲಿ ದೊಡ್ಡ ದೊಡ್ಡ ನೆಯ್ಗೆ ಕಾರ್ಖಾನೆಗಳಿದ್ದರೂ, ಕೈಮಗ್ಗವು ಹೆಚ್ಚಾಗಿ ಆಚರಣೆಯಲ್ಲಿದೆ ಸುಮಾರು ಒಂದು ಕೋಟಿ ಜನರು ಕೈಮಗ್ಗಗಳಲ್ಲಿ ಕೆಲಸಮಾಡುತ್ತಿದ್ದಾರೆ ಕೈಮಗ್ಗದಿಂದ ತಯಾರಾದ ಬಟ್ಟೆಗಳನ್ನೇ ನಮ್ಮ ಹಳ್ಳಿಯ ಅನೇಕ ಜನರು ಅಪೇಕ್ಷಿಸುತ್ತಾರೆ ಇದರಲ್ಲಿ ಸರಿಯಾದ ವರಮಾನ ಬರುತ್ತಿರುವುದರಿಂದ, ಅನೇಕ ಸಾಗುವಳಿದಾರರು ಈ ವೃತ್ತಿಯನ್ನು ಕೈಗೊಂಡಿದ್ದಾರೆ ಆದರೆ ಇವುಗಳ ಅಭಿವೃದ್ಧಿಗೆ ಇನ್ನೂ ಅನೇಕ ತೊಂದರೆಗಳಿವೆ ಪುರಾತನ ಉಪಕರಣಗಳನ್ನು ಉಪಯೋಗಿಸುವುದು, ಹೆಚ್ಚು ಲಾಭವಿಲ್ಲದೆ ಇರುವುದು, ಇವೇ ಮುಂತಾದ ಹಲವು ಕಾರಣಗಳಿಂದ ಈ ಕಸಬುದಾರರು, ಒಂದು ದಿನದ ಸಂಪಾದನೆಯಿಂದ ನಾಲ್ಕಾರು ದಿವಸಗಳ ಜೀವನವನ್ನು ತಳ್ಳಬೇಕಾಗಿರುವುದು ಹೀಗೆ ಈ ಕೈಗಾರಿಕೆಯು ಬಹಳ ಹಿಂದೆ ಬಿದ್ದಿದೆ ಆದರೆ ಈಚೀಚೆಗೆ ಕೆಲವುಕಡೆ ಸರಿಯಾದ ಸಂಸ್ಥೆಗಳನ್ನೇರ್ಪಡಿಸಿ, ಕ್ರಮಬದ್ಧವಾದ ವ್ಯವಸ್ಥಾ ಪ್ರಯತ್ನ ಮಾಡುತ್ತಿದ್ದಾರೆ

* "Report of the Indian Economic Enquiry Committee", p 30

ಭಾರತದ ನೂಲುವ ಮತ್ತು ನೇಯ್ಗೆ ಕೈಗಾರಿಕೆಗಳನ್ನು ಅಭಿವೃದ್ಧಿ ಪಡಿಸುವುದಕ್ಕಾಗಿಯೇ ಮಹಾತ್ಮಾ ಗಾಂಧಿಯವರು ಚರಕಾ ಪುನರುಜ್ಜೀವನವನ್ನು ಪ್ರಾರಂಭಿಸಿದ್ದು ದೇಶದ ಆರ್ಥಿಕಜೀವನದ ಹೆಚ್ಚು ಅಭಿವೃದ್ಧಿಗೆ ಚರಕವು ಮುಖ್ಯವಾದ ಸಾಧನವಾಗದಿದ್ದರೂ ಕೂಡ, ಬಡತನದಿಂದ ನರಳುತ್ತಿರುವ ಹಳ್ಳಿಯ ಜನರಿಗೆ ಇದು ಉಪವೃತ್ತಿಯಾಗುವುದರಲ್ಲಿ ಸಂದೇಹವಿಲ್ಲ ಇದಲ್ಲದೆ ಚರಕವು ಬಹಳ ಸುಲಭವಾದ ಯಂತ್ರ ಹೆಚ್ಚು ಬಂಡವಾಳವಿಲ್ಲದೆ ಸುಲಭದಿಂದ ಎಲ್ಲಾ ಕಡೆಗಳಲ್ಲೂ ಮಾಡಿಸಿ, ಸಂಪಾದನೆಯನ್ನು ಹೆಚ್ಚಿಸಿಕೊಳ್ಳಲು ಅನುಕೂಲವಾದ ಸಾಧನವಾಗಿದೆ ಚರಕವನ್ನೇಕೆ ಪ್ರತಿಯೊಂದು ಹಳ್ಳಿಯಲ್ಲಿಯೂ ಆಚರಣೆಯಲ್ಲಿ ತರಬೇಕೆಂಬ ವಿಷಯದಲ್ಲಿ ಇದಕ್ಕೆ ಹೆಚ್ಚು ಬಂಡವಾಳ, ಬುದ್ಧಿಶಕ್ತಿ ಬೇಕಿಲ್ಲವೆಂದೂ, ನಮ್ಮ ದೇಶದಲ್ಲಿ ಕೈ ನೂಲಿಗೆ ಹೆಚ್ಚು ಗಿರಾಕಿ ಇದೆಯೆಂದೂ, ಇದನ್ನು ಯಾರು ಬೇಕಾದರೂ ಅವಲಂಬಿಸಬಹುದೆಂದೂ, ಒಂದು ಮನೆಯಲ್ಲಿರುವವರೆಲ್ಲಾ ಯಾವ ಕಾಲದಲ್ಲಿ ಬೇಕಾದರೂ ಕೆಲಸಮಾಡಿ, ತಮ್ಮ ಸಂಪಾದನೆಯನ್ನು ಹೆಚ್ಚಿಸಿಕೊಳ್ಳಬಹುದೆಂದೂ ಮಹಾತ್ಮಾ ಗಾಂಧಿಯವರು ಹೇಳಿದ್ದಾರೆ.* ಆದುದರಿಂದ ನಮ್ಮ ದೇಶದಲ್ಲಿ ಈ ಕೈಗಾರಿಕಾಭಿವೃದ್ಧಿಗೆ ಹೆಚ್ಚು ಪ್ರೋತ್ಸಾಹವನ್ನು ಕೊಡಬೇಕು

ಭರತಖಂಡದ ಬಡರೈತರಿಗೆ ಸಹಾಯಮಾಡುತ್ತಿರುವ ವೃತ್ತಿಗಳಲ್ಲಿ ರೇಷ್ಮೆ ಕೈಗಾರಿಕೆಯೊಂದು ಮುಖ್ಯವಾಗಿದೆ ನಮ್ಮ ದೇಶದ ರೇಷ್ಮೆ ಹುಟ್ಟುವಳಿಯು ಸುಮಾರು ಒಂದೂವರೆ ಕೋಟಿ ರೂಪಾಯಿಗಳಾಗುವುದೆಂದೂ, ಸುಮಾರು ೧೦ ಲಕ್ಷ ಜನರು ಇದರಲ್ಲಿ ಕೆಲಸಮಾಡುತ್ತಿದ್ದಾರೆಂದೂ ನಿರ್ಧರಿಸಲಾಗಿದೆ ಹವಾಗುಣವು ಅನುಕೂಲವಾಗಿರುವ ಪ್ರದೇಶಗಳಲ್ಲಿ ಮಾತ್ರ ಇದು ಅಭಿವೃದ್ಧಿಯಾಗುತ್ತಿದೆ ಇದು ಸರಿಯಾದ ರೀತಿಯಲ್ಲಿ ಅಭಿವೃದ್ಧಿಯಾಗುವುದಕ್ಕೆ ಚೈನಾ, ಜಪಾನ್ ರೇಷ್ಮೆ ಪದಾರ್ಥಗಳ ಪೈಪೋಟಿಯು ಬಲವಾದ ಅಡಚಣೆಯಾಗಿದೆ ೧೯೩೧ನೆಯ ಇಸವಿಯಲ್ಲಿ ಈ ಕೈಗಾರಿಕೆಯ ಸ್ಥಿತಿಯು ಬಹಳ ಅಪಾಯದೆಶೆಯಲ್ಲಿತ್ತು ಆಗ ಸುಂಕದ ಸಮಿತಿಯವರು ಪರದೇಶದ ರೇಷ್ಮೆ ಪದಾರ್ಥಗಳಮೇಲೆ ಪೌಂಡು

* "Economics of Khadder", by Greg, pp 18-25

ಒಂದಕ್ಕೆ ೨ ರೂಪಾಯಿ ೬ ಆಣೆ ಸುಂಕವನ್ನು ವಿಧಿಸಬೇಕೆಂದು ತೀರ್ಮಾನಿಸಿದಮೇಲೆ ಇಂಡಿಯಾ ಸರ್ಕಾರದವರು ಈ ದರವನ್ನು ಸ್ವಲ್ಪ ಕಡಿಮೆ ಮಾಡಿದರು ಆದರೆ ಜಪಾನ್, ಚೈನಾ ರೇಷ್ಮೆ ಸಾಮಾನುಗಳ ಪೈಪೋಟಿಯು ಇನ್ನೂ ಇದ್ದೇ ಇದೆ ಸರ್ಕಾರದವರು ಹಿಪ್ಪುನೇರಳೆ ವ್ಯವಸಾಯಕ್ಕೆ ಹೆಚ್ಚು ಪ್ರೋತ್ಸಾಹವನ್ನೂ, ರೇಷ್ಮೆಗೂಡುಗಳ ರೋಗ ರುಜಿನಾದಿ ನಿವಾರಣಾ ಕ್ರಮವನ್ನೂ, ಇನ್ನೂ ಇತರ ವಿಜ್ಞಾನ ರೀತಿಯ ಉತ್ತೇಜನವನ್ನೂ ಕೊಡಬೇಕು

ವ್ಯವಸಾಯವೇ ಪ್ರಾಧಾನ್ಯವಾದ ನಮ್ಮ ದೇಶದಲ್ಲಿ ಪಶು ಪಾಲನೆಯು ಪ್ರತಿಯೊಬ್ಬ ರೈತನೂ ಅನುಸರಿಸಬಹುದಾದ ವೃತ್ತಿಯಾಗಿದೆ ಕರೆಯುವ ಹಸುಗಳನ್ನು ಸರಿಯಾದ ಮತ್ತು ಶುಚಿಯಾದ ಸ್ಥಳದಲ್ಲಿ ಕಟ್ಟುವುದರಿಂದಲೂ, ಅವುಗಳಿಗೆ ಉತ್ತಮ ಆಹಾರವನ್ನು ಒದಗಿಸಿ ಕಾಪಾಡುವುದರಿಂದಲೂ, ಶಾಸ್ತ್ರೀಯವಾಗಿ ಹಾಲು, ಮೊಸರು, ಬೆಣ್ಣೆಗಳನ್ನು ಮಾಡುವುದರಿಂದಲೂ, ಪಶುಪಾಲನಾವೃತ್ತಿಯನ್ನು ಆದಾಯಕರವಾದದ್ದನ್ನಾಗಿ ಮಾಡಬಹುದು ಹಾಲು ಸರಬರಾಜುಮಾಡುವ ಕೇಂದ್ರಗಳನ್ನು ಏರ್ಪಡಿಸುವುದು, ಬೆಣ್ಣೆಯನ್ನು ತಯಾರುಮಾಡುವ ಸಂಸ್ಥೆಗಳನ್ನೇರ್ಪಡಿಸುವುದು, ಇವೇ ಮುಂತಾದ ಕಾರ್ಯಕ್ರಮಗಳನ್ನು ಆಚರಣೆಗೆ ತರುವುದರಿಂದ, ಪಶುಪಾಲನಾವೃತ್ತಿಯು ಉತ್ತಮವಾದದ್ದಾಗಿ, ಇತರ ಕೈಗಾರಿಕೆಗಳಂತೆ ಹೆಚ್ಚು ಸಂಪಾದನೆಗೆ ಅವಕಾಶವಾಗುವುದು

ಕೋಳಿ, ಬಾತು ಇವುಗಳನ್ನು ಚೆನ್ನಾಗಿ ಸಾಕಿ ಇವುಗಳ ಮತ್ತು ಮೊಟ್ಟೆಗಳ ಮಾರಾಟದಿಂದ ಹೆಚ್ಚು ಹಣ ಸಂಪಾದನೆಯನ್ನು ಮಾಡಬಹುದು ಇದು ನಮ್ಮ ರೈತರಿಗೆ ಸರಿಯಾದ ಉಪವೃತ್ತಿಯಾಗುವುದರಲ್ಲಿ ಸಂದೇಹವಿಲ್ಲ ಈಚೀಚೆಗೆ ಇತರ ದೇಶಗಳಲ್ಲೆಲ್ಲಾ ಈ ವೃತ್ತಿಗೆ ಹೆಚ್ಚು ಪ್ರಾಮುಖ್ಯತೆ ಕೊಡಲಾಗುತ್ತಿದೆ ಸುಮಾರು ೩,೦೦೦ ವರ್ಷದಿಂದಲೂ ಚೈನಾ ದೇಶದಲ್ಲಿ ಈ ವೃತ್ತಿಯು ಆಚರಣೆಯಲ್ಲಿದೆ ಅಮೇರಿಕಾ, ಯೂರೋಪ್ ಮತ್ತು ಜಪಾನ್ ದೇಶಗಳಲ್ಲಿ ಮೊಟ್ಟೆಯನ್ನು ಸರಿಯಾದ ರೀತಿಯಲ್ಲಿ ಇಡುವ ವಿಧಾನಗಳಲ್ಲಿಯೂ, ಕೋಳಿಗಳನ್ನು ಸಾಕುವ ವಿಧಾನಗಳಲ್ಲಿಯೂ, ಅನೇಕ ಶೋಧನಾಕಾರ್ಯಗಳನ್ನು ನಡೆಯಿಸಿದ್ದಾರೆ ನಮ್ಮ

ದೇಶದಲ್ಲಿಯೂ ಕೂಡ, ಶ್ರೇಷ್ಠ ಸರ್ಕಾರದ ವ್ಯವಸಾಯ ಶೋಧನಾ ಸಮಿತಿಯವರು ಈ ವಿಚಾರದಲ್ಲಿ ಪರಿಶೋಧನಾಕಾರ್ಯಗಳನ್ನು ನಡೆಯಿಸಿ, ಪ್ರಚಾರಕ್ಕೆ ತರುವ ಪ್ರಯತ್ನ ಮಾಡುತ್ತಿದ್ದಾರೆ ಮೊಟ್ಟೆಗಳನ್ನು ಸರಿಯಾದ ರೀತಿಯಲ್ಲಿ ಮಾರುವುದಕ್ಕೂ, ಅವಶ್ಯಕವಿರುವ ಕಡೆಗೆ ಸರಿಯಾದ ಕ್ರಮದಲ್ಲಿ ಸಾಗಿಸುವುದಕ್ಕೂ, ಸೂಕ್ತ ಸಂಸ್ಥೆಗಳನ್ನು ಸ್ಥಾಪಿಸಿ ಅವುಗಳಿಗೆ ದ್ರವ್ಯಸಹಾಯವನ್ನು ಮಾಡಿದರೆ, ಈ ವೃತ್ತಿಯಿಂದ ರೈತರ ಸಂಪಾದನೆಯಾಗುವುದರಲ್ಲಿ ಸಂದೇಹವಿಲ್ಲ ಈ ವೃತ್ತಿಯು ಈಚೀಚೆಗೆ ಬಹಳ ಮುಖ್ಯವಾಗುತ್ತಿದೆ ಇದನ್ನು ಶಾಸ್ತ್ರೀಯವಾಗಿ ಅನುಸರಿಸಿ, ಹೆಚ್ಚು ಸಂಪಾದನೆ ಮಾಡಬೇಕಾದರ, ಸರ್ಕಾರದ ಸಹಾಯವೂ, ಮಹಾಜನರ ಸಹಕಾರವೂ ಅವಶ್ಯಕವಾಗಿದೆ

ಹಣ್ಣು ಹಂಪಲು, ಕಾಯಿಪಲ್ಯಗಳನ್ನು ಬೆಳೆಸುವುದು ರೈತರಿಗೆ ಬಹಳ ಲಾಭದಾಯಕವಾದ ಉಪವೃತ್ತಿ ನಮ್ಮ ದೇಶದಲ್ಲಿ ಅನೇಕ ತರಹೆಯ ಹವಾಗುಣದ ಅನುಕೂಲವಿದೆ ಯಾವ ಹಣ್ಣನ್ನಾಗಲಿ ಅಥವಾ ಕಾಯಿಪಲ್ಯವನ್ನಾಗಲಿ ಇಲ್ಲಿ ಬೆಳೆಯಬಹುದು ಅತ್ಯಲ್ಪ ವಿಸ್ತಾರವುಳ್ಳ ಜಮೀನುಗಳಲ್ಲಿ ಕೂಡ, ರೈತರು ಒಳ್ಳೆಯ ತರಹದ ಹಣ್ಣು ಕಾಯಿಪಲ್ಯಗಳನ್ನು ಬೆಳೆದು ಸಂಪಾದನೆ ಮಾಡಬಹುದು ಇದಲ್ಲದೆ ಇಂಡಿಯಾ ದೇಶವೂ ಶಾಖಾಹಾರಕ್ಕೆ ಪ್ರಸಿದ್ಧವಾದ ದೇಶ ಪ್ರತಿಯೊಬ್ಬರೂ ತರಕಾರಿಯನ್ನು ಅಪೇಕ್ಷಿಸುತ್ತಾರೆ ಹಣ್ಣು ಕಾಯಿಪಲ್ಯಗಳಿಗೆ ಇಲ್ಲಿ ಹೆಚ್ಚು ಗಿರಾಕಿ ಇದ್ದೇ ಇದೆ ಆದರೆ ನಮ್ಮ ರೈತರು ಉದ್ಯಾನಕೃಷಿಯ ಪ್ರಭಾವವನ್ನು ಇನ್ನೂ ತಿಳಿದಿಲ್ಲ ಅನೇಕ ವಿಧವಾದ ಹಣ್ಣು, ಕಾಯಿಪಲ್ಯಗಳ ಕೃಷಿ ವಿಚಾರದಲ್ಲಿ ಹೆಚ್ಚು ಪರಿಶೋಧನಾ ಕಾರ್ಯಗಳನ್ನು ನಡೆಯಿಸಿ, ನಮ್ಮ ಹಳ್ಳಿಗಳಲ್ಲಿ ಪ್ರಚಾರಮಾಡಬೇಕು ಪ್ರಭುತ್ವದವರು ಇದಕ್ಕೆ ಅನುಕೂಲವಾದ ಸನ್ನಿವೇಶವನ್ನು ಕಲ್ಪಿಸಬೇಕು

ಭರತಖಂಡದ ಹಳ್ಳಿಗಳ ಆರ್ಥಿಕ ಜೀವನವನ್ನು ಉತ್ತಮಪಡಿಸುವುದಕ್ಕೆ ಗ್ರಾಮ ಕೈಗಾರಿಕಾಭಿವೃದ್ಧಿಯೇ ರಾಮಬಾಣವೆಂಬುದನ್ನು ತಿಳಿದು ಮಹಾತ್ಮಾ ಗಾಂಧಿಯವರು ಅಖಿಲ ಭಾರತ ಗ್ರಾಮ ಕೈಗಾರಿಕಾ ಸಂಘವೆಂಬ ಒಂದು ಸಂಸ್ಥೆಯನ್ನು ಸ್ಥಾಪಿಸಿದ್ದಾರೆ ಕ್ಷೀಣವಾಗುತ್ತಿರುವ

ಕೆಲವು ಕೈಕಸಬುಗಳಿಗೆ ಉತ್ತೇಜನಕೊಡುವುದು, ಆಚರಣೆಯಲ್ಲಿರುವ ಕೆಲವು ಹಳ್ಳಿಯ ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸುವುದು, ಇವುಗಳನ್ನು ಸರಿಪಡಿಸುವುದಕ್ಕೆ ಸರಿಯಾದ ಕಾರ್ಯಕ್ರಮವನ್ನು ಅನುಸರಿಸುವುದು — ಇವೇ ಮುಂತಾದುವು ಆ ಸಂಘದ ಮುಖ್ಯೋದ್ದೇಶಗಳು ಕೇಂದ್ರ ಸಂಘವು ದೇಶದ ಅನೇಕ ಭಾಗಗಳಲ್ಲಿ ಅಂಗ ಸಂಸ್ಥೆಗಳನ್ನು ಸ್ಥಾಪಿಸಿ, ರೈತರು ನಿರ್ಮಲವಾದ ಸನ್ನಿವೇಶವನ್ನು ಕಲ್ಪಿಸಿಕೊಂಡು ಶುಚಿಯಾಗಿರುವುದಕ್ಕೂ, ಬೆಳೆದ ಪದಾರ್ಥಗಳಿಂದಲೇ ಅಕ್ಕಿ, ಹಿಟ್ಟು ಮುಂತಾದುವುಗಳನ್ನು ತಾವೇ ಸ್ವಂತ ಉಪಯೋಗಕ್ಕೆ ಮಾಡಿಕೊಳ್ಳುವುದಕ್ಕೂ ಪ್ರಚಾರ ಕಾರ್ಯ ನಡೆಸುತ್ತಾ ಇದೆ ನಮ್ಮ ದೇಶದ ಜನರಿಗೆ ನಿತ್ಯಜೀವನಕ್ಕೂ ಮತ್ತು ಕೈಗಾರಿಕೆಗಳಿಗೂ ಅವಶ್ಯವಾದ ಪದಾರ್ಥಗಳನ್ನು ಪರದೇಶಗಳಿಗೆ ರಫ್ತು ಮಾಡದಂತೆಯೂ, ಆ ಪದಾರ್ಥಗಳನ್ನು ಇಲ್ಲಿಯೇ ಸರಿಯಾದ ಮಾರ್ಗದಲ್ಲಿ ಉಪಯೋಗಿಸಿ, ಹೆಚ್ಚು ಸಂಪಾದನೆಯನ್ನು ಮಾಡುವುದಕ್ಕೆ ಅನುಕೂಲವಾದ ಕಾರ್ಯಕ್ರಮವನ್ನು ಆಚರಿಸುತ್ತಿದೆ ಮೇಲ್ಕಂಡ ಕೆಲಸಗಳನ್ನು ಸಮರ್ಪಕವಾಗಿ ನಡೆಸುವುದಕ್ಕೆ ಅನುಕೂಲವಾಗಿ, ಅಲ್ಲಲ್ಲಿ ಆರ್ಥಿಕ ವಿಚಾರಣೆಯನ್ನು ಸಂಘವು ಮಾಡುತ್ತಿದೆ ನಮ್ಮ ದೇಶದಲ್ಲಿರುವ ಹಳ್ಳಿಗಳ ವ್ಯಾಪಾರೋದ್ಯಮದ ಕಷ್ಟಗಳನ್ನು ಬಿಡಿಸಿ, ರೈತರ ಜೀವನದ ಮಟ್ಟವನ್ನು ಸ್ವಲ್ಪ ಮಟ್ಟಿಗಾದರೂ ಇಂತಹ ಸಂಘಗಳು ಸರಿಯಾದ ಕಾರ್ಯಕ್ರಮದಿಂದ ಉತ್ತಮಪಡಿಸಬಹುದು ಹಳ್ಳಿಗಳ ಪುನರುದ್ಧಾರಕ್ಕೋಸ್ಕರ ಗ್ರಾಮ ನೈರ್ಮಲ್ಯ, ಆರೋಗ್ಯ, ಆಹಾರ, ಕೈಗಾರಿಕೆ, ವಿದ್ಯಾಭ್ಯಾಸ ಇವೇ ಮುಂತಾದ ಮುಖ್ಯ ವಿಷಯಗಳಲ್ಲಿ ಸರಿಯಾದ ಕಾರ್ಯಕ್ರಮವನ್ನು ಆಚರಣೆಯಲ್ಲಿ ತರುವ ಪ್ರಯತ್ನ ಮಾಡುತ್ತಿದ್ದಾರೆ ಎಣ್ಣೆ ತೆಗೆಯುವುದು ಹಾಲಿನಲ್ಲಿ ಬೆಣ್ಣೆ ತೆಗೆಯುವುದು, ಈಚಲು, ತಾಳೆ, ತೆಂಗು, ಮುಂತಾದ ಮರಗಳ ರಸದಿಂದ ಮಧುರವಾದ ಬೆಲ್ಲವನ್ನು ತಯಾರುಮಾಡುವುದು ಮನೆಯಲ್ಲಿ ಕಾಗದ ತಯಾರುಮಾಡುವುದು, ಇವೇ ಮುಂತಾದ ಗ್ರಾಮ ಕೈಗಾರಿಕೆಗಳನ್ನು ಆಚರಣೆಯಲ್ಲಿ ತರುವುದಕ್ಕೆ ಸರ್ವ ಪ್ರಯತ್ನಗಳು ನಡೆಯುತ್ತಿವೆ ಈ ಕೇಂದ್ರ ಸಂಘವು ಸದ್ಯಕ್ಕೆ ವಾರ್ಧಾದಲ್ಲಿ ತನ್ನ ಮುಖ್ಯ ಕಛೇರಿ ಮಾಡಿಕೊಂಡು, ತನ್ನ ಕಾರ್ಯವನ್ನು ವಿಸ್ತರಿಸುತ್ತಿದೆ

ಕೇಂದ್ರ ಸಂಘದ ಕಾರ್ಯಕ್ರಮವನ್ನು ದೇಶದ ನಾನಾ ಭಾಗದಲ್ಲಿ ವ್ಯವಸ್ಥಿತ ರೀತಿಯಲ್ಲಿ ಪ್ರಚಾರಮಾಡುವುದಕ್ಕೋಸ್ಕರ ಗ್ರಾಮ ಸೇವಕರ ಶಿಕ್ಷಣಶಾಲೆಯನ್ನು ಪ್ರಾರಂಭಿಸಲಾಗಿವೆ ಈ ಶಾಲೆಯಲ್ಲಿ ಜೇನು ಸಾಕುವುದು, ಬೆಲ್ಲಮಾಡುವುದು, ಎಣ್ಣೆ ತೆಗೆಯುವುದು, ಭತ್ತ ಕುಟ್ಟು ವುದು, ಹಿಟ್ಟುಮಾಡುವುದು, ನೇಯುವುದು, ನೂಲುವುದು ಇವೇ ಮುಂತಾದ ವಿಷಯಗಳಲ್ಲಿ ಶಿಕ್ಷಣಕೊಟ್ಟು, ತರಪೇತುಮಾಡಿ, ಅನಂತರ ಅವರನ್ನು ಪ್ರಚಾರಕಾರ್ಯ ನಡೆಸುವುದಕ್ಕೆ ಗ್ರಾಮಾಂತರಕ್ಕೆ ಕಳುಹಿ ಸುವ ಏರ್ಪಾಡಾಗಿದೆ ಇಲ್ಲಿ ಚಿಕ್ಕದಾದ ವ್ಯವಸಾಯ ಕ್ಷೇತ್ರದಲ್ಲಿ ಪ್ರಯೋಗಕಾರ್ಯವನ್ನು ನಡೆಸಿ, ಸಾಮಾನ್ಯ ತರಕಾರಿ, ಹಣ್ಣಿನ ಗಿಡ, ಕಬ್ಬು, ಜೋಳ, ಕಡಲೇಕಾಯಿ, ಇವೇ ಮುಂತಾದುವುಗಳನ್ನು ಉತ್ತಮ ರೀತಿಯಲ್ಲಿ ಬೆಳೆಸುವ ವಿಧಾನ, ಗೊಬ್ಬರವನ್ನು ಸರಿಯಾದ ರೀತಿಯಲ್ಲಿ ತಯಾರುಮಾಡುವ ಕ್ರಮ ಇವುಗಳಲ್ಲೆಲ್ಲಾ ಶಿಕ್ಷಣ ಕೊಡುವ ಏರ್ಪಾಡನ್ನೂ ಮಾಡಿದ್ದಾರೆ ಇಂತಹ ಕ್ಷೇತ್ರಗಳಂತೆ, ಹತ್ತಾರು ಕ್ಷೇತ್ರಗಳನ್ನೂ ಸಂಘಗಳನ್ನೂ ಸ್ಥಾಪಿಸಿ, ಇವುಗಳೆಲ್ಲಾ ಒಗ್ಗಟ್ಟಾಗಿ ಸೇರಿ, ಗ್ರಾಮಾಂತರಗಳಲ್ಲಿ ಹೆಚ್ಚು ಪ್ರಚಾರಕಾರ್ಯ ನಡಸಿದರೆ, ದೇಶಾಭ್ಯುದಯವಾಗುವುದರಲ್ಲಿ ಸಂದೇಹವಿಲ್ಲ

ಭರತಖಂಡದ ರೈತರ ಆರ್ಥಿಕಸ್ಥಿತಿಯು ಬಹಳ ಶೋಚನೀಯ ವಾಗಿದೆ ಅವರ ಬಡತನದ ಕಷ್ಟವು ವರ್ಣನಾತೀತವಾಗಿದೆ ಹೀಗಿರು ವಾಗ, ಅವರಿಗೆ ಯಾವುದಾದರೂ ಉಪವೃತ್ತಿ ಇದ್ದೇ ತೀರಬೇಕು ಅವರಿಗೆ ಔದ್ಯೋಗಿಕ ಶಿಕ್ಷಣ ಕೊಟ್ಟು, ಯಾವುದಾದರೂ ಮನೆಕೈಗಾರಿಕೆ ಗಳನ್ನು ಕೈಗೊಳ್ಳುವ ಉತ್ಸಾಹವನ್ನುಂಟುಮಾಡಬೇಕು ಅನೇಕ ಕೈಕೆಲಸಗಳ ಅನುಭವವನ್ನು ಅವರಿಗುಂಟುಮಾಡಬೇಕು ಅವರು ತಮ್ಮ ಜಡತ್ವವನ್ನು ಬಿಟ್ಟು ಚಟುವಟಿಕೆಯುಳ್ಳವರಾಗಿ, ಒಳ್ಳೆಯ ಕಸಬುದಾರ ರಾಗಬೇಕು ಜಪಾನ್ ಸರ್ಕಾರದವರು ಸಣ್ಣ ಕೈಗಾರಿಕಾಭಿವೃದ್ಧಿಯಲ್ಲಿ ಅನುಸರಿಸುತ್ತಿರುವ ಆಸಕ್ತಿಯೂ, ಅವರು ಕೊಡುತ್ತಿರುವ ಉತ್ತೇಜನವೂ ಉತ್ತಮ ಮಾರ್ಗದರ್ಶಕವಾಗಿದೆ *

* "Rural Reconstruction", by Henry Wolff, pp 299–300

ಆಧುನಿಕ ಕಾಲದ ಯಂತ್ರಗಳಿಂದ ತಯಾರಾಗುತ್ತಿರುವ ಸಾಮಾನು ಗಳ ಪೈಪೋಟಿಯಿಂದ ಗ್ರಾಮ ಕೈಗಾರಿಕೆಗಳನ್ನು ರಕ್ಷಿಸಬೇಕಾದರೆ, ಸರ್ವೋತ್ತಮವಾದ ಪರಸ್ಪರ ಸಹಾಯಕ ಸಂಘಗಳನ್ನು ಸ್ಥಾಪಿಸುವುದಲ್ಲದೆ ಔದ್ಯೋಗಿಕ ಶಿಕ್ಷಣದ ಅನುಕೂಲತೆಯನ್ನು ಕಲ್ಪಿಸಬೇಕು ಬಹಳ ದಿನಗಳ ಕಾಲ, ಸರ್ಕಾರದವರು ಈ ಕೈಗಾರಿಕೆಗಳನ್ನು ತಮ್ಮ ಸಲಹೆ ಗಳಿಂದಲೂ, ಬುದ್ಧಿವಾದದಿಂದಲೂ ರಕ್ಷಿಸಿ, ಅಭಿವೃದ್ಧಿಪಡಿಸುತ್ತಿರ ಬೇಕು ಕೆಲವು ಸಂದರ್ಭಗಳಲ್ಲಿ ಪ್ರಭುತ್ವದವರೇ ಮುಖ್ಯವಾದ ಕೆಲವು ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಿ, ಮಾರ್ಗದರ್ಶಕರಾಗಬೇಕು ಅಂತು ಗ್ರಾಮ ಕೈಗಾರಿಕೆಗಳು, ಪರಸ್ಪರ ಸಹಾಯ ತತ್ವದಿಂದಲೇ ಮುಂದಕ್ಕೆ ಬರಬೇಕು ಈ ಕೈಗಾರಿಕೆಗಳಲ್ಲಿ ಕೆಲಸಮಾಡತಕ್ಕವರಿಗೆ ಬಂಡವಾಳವನ್ನು ಸುಲಭ ರೀತಿಯಲ್ಲಿ ಒದಗಿಸುವುದಕ್ಕೂ, ಅವರಿಂದ ತಯಾರಾದ ಪದಾರ್ಥಗಳನ್ನು ಲಾಭ ಬರುವ ರೀತಿಯಲ್ಲಿ ಮಾರುವುದಕ್ಕೂ ಪರಸ್ಪರ ಸಹಾಯಕ ಸಂಘಗಳೇ ಉತ್ತಮ ರೀತಿಯ ಸಾಧನಗಳಾಗಿವೆ ಅವುಗಳ ಸಹಾಯವು ಈ ವಿಚಾರದಲ್ಲಿ ಅಪರಿಮಿತವಾಗಿ ಆವಶ್ಯಕವಾಗಿದೆ *

ಗ್ರಾಮ ಕೈಗಾರಿಕೆಗಳಿಗೆ ಉತ್ತೇಜನಕೊಟ್ಟು ಸರಿಯಾದ ರೀತಿಯಲ್ಲಿ ಅಭಿವೃದ್ಧಿ ಕಾರ್ಯಕ್ರಮವನ್ನು ಅನುಸರಿಸುವುದು, ಈಗ ಮುಖ್ಯ ಸಮಸ್ಯೆಯಾಗಿ ಪರಿಣಮಿಸಿದೆ ಸಾಧ್ಯವಾದ ಮಟ್ಟಿಗೆ ಅಲ್ಲಲ್ಲೇ ಪ್ರದರ್ಶನ ಗಳನ್ನು ಏರ್ಪಡಿಸಿ, ಉತ್ತಮ ಪದಾರ್ಥಗಳಿಗೆ ಪಾರಿತೋಷಕಗಳನ್ನು ಕೊಟ್ಟು, ಅಂತಹ ಕೈಗಾರಿಕೆಗಳಿಗೆ ದ್ರವ್ಯ ಸಹಾಯವನ್ನು ನೀಡುವುದ ರಿಂದ ಸ್ವಲ್ಪಮಟ್ಟಿಗಾದರೂ ಈ ಸಮಸ್ಯೆಯನ್ನು ಬಗೆಹರಿಸಬಹುದು ಜನಗಳಲ್ಲಿ ಹೆಚ್ಚು ತಿಳಿವಳಿಕೆಯನ್ನುಂಟುಮಾಡುವುದಕ್ಕೂ, ಪದಾರ್ಥಗಳ ಮಾರಾಟಕ್ಕೆ ಹೆಚ್ಚು ಅವಕಾಶ ಕಲ್ಪಿಸುವುದಕ್ಕೂ, ಕಸಬುದಾರರಲ್ಲಿ ಹೆಚ್ಚು ಉಮೇದನ್ನುಂಟುಮಾಡುವುದಕ್ಕೂ ಪ್ರದರ್ಶನಗಳಿಂದಾಗುವಷ್ಟು ಸಹಾಯವು ಇನ್ನಾವುದರಿಂದಲೂ ಆಗುವುದಿಲ್ಲ ಜನರು ಪ್ರದರ್ಶನ ಗಳನ್ನು ನೋಡುವುದರಿಂದ, ಕಸಬುದಾರರ ಕುಶಲತೆಯನ್ನು ನೋಡಿ ಸಂತೋಷಪಟ್ಟು, ಅವರಿಂದ ತಯಾರಾದ ಪದಾರ್ಥಗಳನ್ನು ಹೆಚ್ಚಾಗಿ

* "Report of the Royal Commission on Agriculture", 1928

ಕೊಳ್ಳಬಹುದು ಜನಗಳ ಅಭಿಪ್ರಾಯಕ್ಕೂ, ಆಶೆಗೂ ತಕ್ಕಹಾಗೆ ಕಸಬುದಾರರು ಪದಾರ್ಥಗಳನ್ನು ಹೊಸರೀತಿಯಲ್ಲಿ ತಯಾರುಮಾಡಬಹುದು ಇವುಗಳಿಂದ ಪದಾರ್ಥಗಳ ಮಾರಾಟವು ಹೆಚ್ಚುವುದಲ್ಲದೆ, ಕೈಗಾರಿಕೆಗಳ ಅಭಿವೃದ್ಧಿಯೂ ಆಗುವುದು ಹೀಗೆ ಅಲ್ಲಲ್ಲೆ ಪ್ರದರ್ಶನಗಳನ್ನೇರ್ಪಡಿಸುವುದರಿಂದ, ನಿರಕ್ಷರಕುಕ್ಷಿಗಳಾದ ನಮ್ಮ ದೇಶದ ಜನರಲ್ಲಿ ಹೆಚ್ಚು ಜ್ಞಾನಪ್ರಚಾರವಾಗುವುದು ಇವುಗಳಲ್ಲದೆ, ಪದಾರ್ಥಗಳ ಸ್ವರೂಪವೂ, ಸ್ವದೇಶಾಭಿಮಾನವೂ, ಸ್ವದೇಶೀ ಪದಾರ್ಥಗಳಮೇಲೆ ಪ್ರೀತಿಯೂ ಹೆಚ್ಚಾಗಿ, ನಿತ್ಯಜೀವನಕ್ಕೆ ಅವಶ್ಯಕವಾದ ಪದಾರ್ಥಗಳನ್ನು ತಾವೇ ತಯಾರುಮಾಡಿಕೊಳ್ಳುವ ಶಕ್ತಿಯೂ ಉಂಟಾಗುತ್ತದೆ ಆದುದರಿಂದ ಸುವ್ಯವಸ್ಥಿತ ರೀತಿಯಲ್ಲಿ ಪ್ರದರ್ಶನಗಳನ್ನೇರ್ಪಡಿಸುವುದು, ಗ್ರಾಮ ಕೈಗಾರಿಕೋನ್ನತಿಗೆ ಒಂದು ಮುಖ್ಯವಾದ ಸಾಧನವೆಂದೇ ಧಾರಾಳವಾಗಿ ಹೇಳಬಹುದು

ಭರತಖಂಡದ ಇತರ ಭಾಗಗಳಲ್ಲಿ ಇದ್ದಂತೆಯೇ ಮೈಸೂರು ಸಂಸ್ಥಾನದಲ್ಲಿಯೂ, ಗ್ರಾಮ ಕೈಗಾರಿಕಗಳು ಒಂದಾನೊಂದು ಕಾಲದಲ್ಲಿ ಅಭಿವೃದ್ಧಿಸ್ಥಿತಿಯಲ್ಲಿತ್ತು ಹಿಂದೆ ಹೇಳಿರುವ ಕಾರಣಗಳಿಂದ ಕೆಲವು ಉತ್ತಮ ಕೈಗಾರಿಕೆಗಳು ಪೂರ್ತಿ ನಾಶಹೊಂದಿದುವು ಚಿನ್ನದ ದಾರ ಮಾಡುವುದು, ಗಂಜಾಂ, ಚನ್ನಪಟ್ಟಣ ಮುಂತಾದ ಸ್ಥಳಗಳಲ್ಲಿ ತಯಾರು ಮಾಡುತ್ತಿದ್ದ ಕಾಗದದ ಕೆಲಸ, ಚಿತ್ರದುರ್ಗ, ತುಮಕೂರು ಡಿಸ್ಟ್ರಿಕ್ಟುಗಳ ಕೆಲವು ಭಾಗಗಳಲ್ಲಿ ಮಾಡುತ್ತಿದ್ದ ಬಳಿ ಕೈಗಾರಿಕೆ, ಇವುಗಳೆಲ್ಲಾ ಈಗ ಹಾಳಾಗಿಹೋಗಿವೆ ಉಳಿದ ಕೆಲವು ಗ್ರಾಮ ಕೈಗಾರಿಕೆಗಳಲ್ಲಿ ಕೆಲಸ ಮಾಡುತ್ತಿದ್ದ ಜನಗಳೂ ಕೂಡ ಕ್ರಮೇಣ ಕಡಿಮೆಯಾಗುತ್ತಾ ಇದ್ದಾರೆ

| | 1871 | 1931 |
|---|---|---|
| ಹತ್ತಿ ನೂಲುವ ಮತ್ತು ನೇಯುವ ಕೆಲಸದಲ್ಲಿ ಇದ್ದವರ ಸಂಖ್ಯೆ | 69,500 | 35,000 |
| ಉಣ್ಣೆ ನೇಯುವ ಮತ್ತು ನೂಲುವ ಕೆಲಸ | 18,555 | 13,603 |
| ಗಾಣಿಗರು | 6,088 | 4,383 |
| ಹಿತ್ತಾಳೆ, ತಾಮ್ರ ಮುಂತಾದ ಲೋಹದ ಕೆಲಸ* | 24,458 | 11,374 |

* "Census Report, Mysore", 1931, Vol 1, p 285

ಮೈಸೂರು ಸಂಸ್ಥಾನದ ಸೆನ್ಸಸ್ ವರದಿಯ ಪ್ರಕಾರ ಹತ್ತಿ, ರೇಷ್ಮೆ, ಉಣ್ಣೆಯ ನೆಯ್ಗೆ ಕೆಲಸ, ರೇಷ್ಮೆ ಹುಳುಗಳನ್ನು ಸಾಕುವುದು, ಮರಗೆಲಸ, ಎಣ್ಣೆ ತೆಗೆಯುವುದು, ಚಾಪೆ, ಮುಕ್ಕರಿ ಮಾಡುವುದು— ಇವುಗಳಲ್ಲಿ ಸುಮಾರು ೬೦,೦೦೦ ಸಂಸಾರಗಳು ಕೆಲಸಮಾಡುತ್ತಿವೆ ಎಂಬದಾಗಿ ಗೊತ್ತಾಗುತ್ತದೆ ಇವುಗಳಲ್ಲದೆ ನಕ್ಷಿ ಕೆಲಸ, ಹಗ್ಗ, ಬೀಡಿ, ಸುಗಂಧ ಪದಾರ್ಥಗಳನ್ನು ಮಾಡುವುದು, ಬೆತ್ತ, ಬೊಂಬೆ ಮತ್ತು ಚಿತ್ರದ ಕೆಲಸ, ಇವುಗಳೆಲ್ಲವೂ ಸಂಸ್ಥಾನದ ಕೆಲವು ಭಾಗಗಳಲ್ಲಿ ಚೆನ್ನಾಗಿ ನಡೆಯುತ್ತಿವೆ. ಆದರೂ ಗ್ರಾಮ ಕೈಗಾರಿಕೆಗಳಲ್ಲಿ ಕೆಲಸ ಮಾಡುವವರಿಗೆ ಅನೇಕ ವಿಧವಾದ ತೊಂದರೆಗಳು ಇನ್ನೂ ಇದ್ದೇ ಇವೆ ಕೆಲಸಗಾರರಿಗೆ ದುಡ್ಡಿಲ್ಲ, ವ್ಯಾಪಾರ ಸೌಕರ್ಯವಿಲ್ಲ, ಆರ್ಥಿಕ ಸ್ವಾತಂತ್ರ್ಯವಿಲ್ಲ, ಉತ್ತಮ ಉಪಕರಣಗಳಿಲ್ಲ ಇದೆಲ್ಲಕ್ಕಿಂತಲೂ ಕೆಲಸಗಾರರು ತಿಳಿವಳಿಕೆಯಿಲ್ಲದ ನಿರಕ್ಷರ ಕುಕ್ಷಿಗಳು ದಳ್ಳಾಳಿಗಳ ಮತ್ತು ಕೆಲವು ಬಂಡವಾಳಗಾರರ ಕೈಯಲ್ಲಿ ಸಿಕ್ಕಿ ನರಳುತ್ತಿದ್ದಾರೆ ಅವರ ಆರ್ಥಿಕಜೀವನವು ಬಹಳ ಹೀನಸ್ಥಿತಿಯಲ್ಲಿದೆ. ಅವರು ಎಷ್ಟು ದುಡಿದರೂ ಅವರ ಹೊಟ್ಟೆತುಂಬುವಹಾಗಿಲ್ಲ ಇದಲ್ಲದೆ ಕೆಲವು ಸಾಮಾಜಿಕ ವೈಯಕ್ತಿಕ ದುರಭ್ಯಾಸಗಳು ಬೇರೆ—ಇವೇ ಮುಂತಾದ ಕಷ್ಟಗಳಿಂದ ಕಸಬುದಾರರು ಕಷ್ಟದಲ್ಲಿ ಸಿಕ್ಕಿ ನರಳುತ್ತಿದ್ದಾರೆ

ಈಚೀಚೆಗೆ ಮೈಸೂರು ಸರ್ಕಾರದವರು, ಗ್ರಾಮ ಕೈಗಾರಿಕೆಯ ವಿಷಯದಲ್ಲಿ ಹೆಚ್ಚು ಶ್ರದ್ಧೆವಹಿಸಿ, ಅಭಿವೃದ್ಧಿಕಾರ್ಯಗಳನ್ನು ಆಚರಣೆಯಲ್ಲಿ ತರುತ್ತಿದ್ದಾರೆ ಕಸಬುದಾರರಿಗೆ ಬಂಡವಾಳಕ್ಕಾಗಿ ಸಾಲ ಕೊಡುವುದು, ಯಂತ್ರೋಪಕರಣಗಳನ್ನು ಒದಗಿಸುವುದು, ಕೆಲಸಗಾರರಿಗೆ ಅವಶ್ಯಕವಾದ ಪದಾರ್ಥಗಳನ್ನು ಸುಲಭ ಬೆಲೆಗೆ ಕೊಡಿಸುವುದು, ಹೀಗೆ ತಯಾರಾದ ಪದಾರ್ಥಗಳ ಮಾರಾಟಕ್ಕೆ ಅನುಕೂಲವಾದ ಸಹಾಯಕ ಸಂಘಗಳಿಗೆ ಸಹಾಯಮಾಡುವುದು— ಇವೇ ಮುಂತಾದ ಕಾರ್ಯಗಳು ಸ್ತೋತ್ರಾರ್ಹವಾಗಿವೆ. ನೇಯ್ಗೆಯವರ ಸಹಾಯಕ ಸಂಘಕ್ಕೆ ಪ್ರಭುತ್ವದವರು ಸಹಾಯಮಾಡುತ್ತಿದ್ದಾರೆ ಸಂಸ್ಥಾನದ ಕೆಲವು ಭಾಗಗಳಲ್ಲಿ, ಕೆಲವು ಮಾದರಿ ಕೆಲಸಗಳನ್ನು ಪ್ರಾರಂಭಿಸಿ, ಸರ್ಕಾರದಿಂದ ನೇಮಿಸಲ್ಪಟ್ಟ ನಿಪುಣರಿಂದ ಭಾವನಾ ಪ್ರದರ್ಶನಗಳನ್ನು ಏರ್ಪಡಿಸಿ, ಕಸಬುದಾರರಿಗೆ

ಹೆಚ್ಚು ಉತ್ಸಾಹವುಂಟಾಗುವಂತೆ ಮಾಡುತ್ತಿದ್ದಾರೆ ಸಂಸ್ಥಾನದ ಅನೇಕ ಭಾಗಗಳಲ್ಲಿ ಗ್ರಾಮ ಕೈಗಾರಿಕೆಗಳು ಅಭಿವೃದ್ಧಿಹೊಂದುತ್ತಾ ಇವೆ. ಇದಕ್ಕೆಲ್ಲಾ ಪ್ರಭುತ್ವದವರ ಸಹಾಯವೂ, ಪ್ರದರ್ಶನಗಳ ಏರ್ಪಾಡೂ ಮತ್ತು ಉತ್ಸಾಹಜನಕವಾದ ಕಾರ್ಯಕ್ರಮದ ವ್ಯವಸ್ಥೆಯೂ, ಅತ್ಯುತ್ತಮ ಕಾರಣಗಳಾಗಿವೆ

ನಮ್ಮ ದೇಶದಲ್ಲಿ ಗ್ರಾಮ ಕೈಗಾರಿಕೆಗಳು ಅಭಿವೃದ್ಧಿ ಹೊಂದ ಬೇಕಾದರೆ, ನಮ್ಮ ಶಿಕ್ಷಣ ಪದ್ಧತಿಯಲ್ಲಿ ಸರಿಯಾದ ಬದಲಾವಣೆಗಳಾಗಬೇಕು ಹಂಗೇರಿ ದೇಶದ ಪ್ರಾಥಮಿಕ ಪಾಠಶಾಲೆಗಳಲ್ಲಿ ಶೇ ೪೦ಕ್ಕಿಂತ ಹೆಚ್ಚಾದ ಶಾಲೆಗಳಲ್ಲಿ, ಯಾವುದಾದರೂ ಅನುಕೂಲವಾದ ಕೈಕಸಬನ್ನು ಹೇಳಿಕೊಡುತ್ತಿದ್ದಾರೆ ಜರ್ಮನಿ ದೇಶದ ಕೈಗಾರಿಕೆಗಳಲ್ಲಿ ಶೇ ೯೦ರಷ್ಟು ಗ್ರಾಮಕೈಗಾರಿಕೆಗಳಾಗಿವೆ ಅಲ್ಲಿಯ ಒಟ್ಟು ಜನಸಂಖ್ಯೆಯ ಐದನೆಯ ಎರಡು ಭಾಗದಷ್ಟು ಜನರು ಈ ಸಣ್ಣ ಕೈಗಾರಿಕೆಗಳಲ್ಲಿ ಕೆಲಸ ಮಾಡುತ್ತಿದ್ದಾರೆ ಹಾಗೆಯೇ ಜಪಾನ್ ದೇಶದಲ್ಲಿಯೂ ಕೂಡ, ಒಟ್ಟು ಜನಸಂಖ್ಯೆಯ ಅರ್ಧಕ್ಕಿಂತ ಹೆಚ್ಚಾಗಿ, ಈ ಕೈಗಾರಿಕೆಗಳಲ್ಲಿದ್ದಾರೆ * ಇದೇ ರೀತಿಯಲ್ಲಿ ನಮ್ಮ ದೇಶದಲ್ಲಿಯೂ ಕೂಡ, ಹಚ್ಚು ಜನರು ಈ ಸಣ್ಣ ಕೈಗಾರಿಕೆಗಳಲ್ಲಿ ಕೆಲಸ ಮಾಡುವಂತಾಗಬೇಕು ಅದಕ್ಕೆ ಅನುಕೂಲವಾದ ಸನ್ನಿವೇಶಗಳನ್ನೂ, ಸೌಕರ್ಯಗಳನ್ನೂ ಕಲ್ಪಿಸಬೇಕು ಜಪಾನ್ ದೇಶದ ಸರ್ಕಾರದವರು ಅಲ್ಲಿಯ ಪದಾರ್ಥಗಳಿಗೆ ರಕ್ಷಣೆಯನ್ನು ಕೊಟ್ಟಿರುವಂತೆ, ನಮ್ಮ ದೇಶದ ಪದಾರ್ಥಗಳಿಗೂ ರಕ್ಷಣೆಯಾಗಬೇಕು ಗ್ರಾಮ ಕೈಗಾರಿಕೆಗಳಲ್ಲಿ ಕೆಲಸ ಮಾಡುವವರಿಗೆ ಸ್ವತಂತ್ರ ಜೀವನಕ್ಕೆ ಅನುಕೂಲವಾಗುವಷ್ಟು ಶಕ್ತಿಯನ್ನುಂಟುಮಾಡುವುದಕ್ಕೋಸ್ಕರ, ವ್ಯಾಪಾರ ದ್ರವ್ಯ ಸೌಕರ್ಯಗಳೇರ್ಪಡಬೇಕು ಒಟ್ಟಿನಲ್ಲಿ, ಪರಸ್ಪರ ಸಹಾಯಕ ಸಂಘಗಳಿಂದಲೂ, ಔದ್ಯೋಗಿಕ ಶಿಕ್ಷಣದಿಂದಲೂ ನಮ್ಮ ಗ್ರಾಮ ಕೈಗಾರಿಕೆಯು ಉದ್ಧಾರವಾಗಬೇಕು ಔದ್ಯೋಗಿಕ ಶಿಕ್ಷಣದಿಂದ ಪದಾರ್ಥಗಳನ್ನು ಸುಲಭವಾಗಿ ತಯಾರಿಸುವಂತೆ ಮಾಡಿ, ಅವುಗಳನ್ನು

* "Japan, an Economic and Financial Appraisal", by Harold Mauthan, p 132

ಪೈಪೋಟಿಯಿಂದ ರಕ್ಷಿಸಿ, ಪರಸ್ಪರ ಸಹಾಯಕ ಸಂಘಗಳು, ಉತ್ತಮ ರೀತಿಯಲ್ಲಿ ಮಾರಾಟಮಾಡಿ, ಕಸಬುದಾರರಿಗೆ ಹೆಚ್ಚು ಲಾಭವನ್ನು ಒದಗಿಸುವಂತಾಗಬೇಕು

ಹೀಗೆ ನಮ್ಮ ದೇಶದ ರೈತರಿಗೂ, ಗ್ರಾಮ ಕೈಗಾರಿಕೆಗಳಲ್ಲಿ ಕೆಲಸ ಮಾಡತಕ್ಕವರಿಗೂ, ಮೇಲೆ ಚರ್ಚೆನಡೆಸಿದ ರೀತಿಯಲ್ಲಿ ಸೌಕರ್ಯಗಳನ್ನು ಏರ್ಪಡಿಸಬೇಕು ಅವರ ಜೀವನದ ಅಂತಸ್ತು ಉತ್ತಮವಾಗಬೇಕಾದರೆ, ಆಯಾಯಾ ಸನ್ನಿವೇಶಕ್ಕೆ ತಕ್ಕಂತೆ ಅವರು ತಮ್ಮ ವೃತ್ತಿಯನ್ನು ಉತ್ತಮಪಡಿಸಿಕೊಳ್ಳಬೇಕು ಅದಕ್ಕೆ ಅನುಕೂಲವಾದ ವೃತ್ತಿಗಳ ಪಟ್ಟಿಯೊಂದನ್ನು ಇಲ್ಲಿ ನಮೂದಿಸಲಾಗಿದೆ ಅವುಗಳಲ್ಲಿ ಯಾವುದಾದರನ್ನೂ ಸರಿಯೇ, ಅವರು ಅವಲಂಬಿಸಿ, ಸಂಪಾದನಾ ಶಕ್ತಿಯನ್ನು ಹೆಚ್ಚಿಸಿ ಕೊಳ್ಳಬಹುದು —

೧ ವ್ಯವಸಾಯದ ಮುಟ್ಟುಗಳನ್ನು ಮಾಡುವುದು
೨ ಪಶುಪಾಲನೆ
೩ ಹಣ್ಣು ಗಿಡಗಳನ್ನು ಬೆಳೆಸುವುದು
೪ ತರಕಾರಿ ಬೆಳೆಯುವುದು
೫ ಸಕ್ಕರೆ ತಯಾರಿಸುವುದು
೬ ಮೀನು ಹಿಡಿಯುವುದು
೭ ಮರದ ಕೆಲಸ, ಬಂಡಿಗಳನ್ನು ಮಾಡುವುದು
೮ ನೂಲುವುದು, ನೆಯ್ಯುವುದು
೯ ರೇಷ್ಮೆ
೧೦ ಮಡಕೆ
೧೧ ಹಿತ್ತಾಳೆ, ತಾಮ್ರ, ಚಾಕು, ಕತ್ತರಿ ಮಾಡುವುದು.
೧೨ ದೀಪದ ಕಡ್ಡಿ ತಯಾರಿಸುವುದು
೧೩ ಜೋಡು ತಯಾರಿಸುವುದು
೧೪ ಹಗ್ಗ ಮಾಡುವುದು
೧೫ ಹೆಣಿಕೆ, ಕಸೂತಿ ಕೆಲಸ
೧೬ ಕಾಗದ ಮಾಡುವುದು

೧೭ ಆಟದ ಸಾಮಾನು, ಚಿತ್ರದ ಕೆಲಸ
೧೮ ಆಡು, ಕುರಿ, ಜೇನು, ಇವುಗಳನ್ನು ಸಾಕುವುದು
೧೯ ಕೋಳಿ, ಬಾತು, ಇವುಗಳನ್ನು ಸಾಕುವುದು
೨೦ ಬಣ್ಣದ ಕೆಲಸ
೨೧ ಗಂಧದ ಕಡ್ಡಿ, ಸುಗಂಧ ಪದಾರ್ಥಗಳು, ಸಾಬೂನು, ಇವುಗಳನ್ನು ಮಾಡುವುದು

# ೯. ಪರಸ್ಪರ ಸಹಾಯಕ ಸಂಘ

ಅರ್ಥಶಾಸ್ತ್ರವು ಮನುಷ್ಯನ ಜೀವನದ ಸಾಮಾನ್ಯ ವ್ಯಾಪಾರದ ಚಿಂತನೆಯಾಗಿದೆ * ಹಾಗೆಯೇ ಸಹಕಾರತತ್ವವು ಮನುಷ್ಯನ ವ್ಯಾಪಾರದ ವ್ಯವಸ್ಥೆಯನ್ನು ಉತ್ತಮ ರೀತಿಯಲ್ಲಿ ಮಾಡುವ ಸಾಧನ ವಾಗಿದೆ ಎಂದು ಹೇಳಬಹುದು ಎಲ್ಲಿ ಜನಗಳು ಒಟ್ಟಿಗೆ ಸೇರಿ ಪ್ರತಿ ಯೊಬ್ಬರ ಹಿತಕ್ಕಾಗಿ ಸ್ವಾರ್ಥರಹಿತವಾದ ವ್ಯಾಪಾರೋದ್ಯಮಗಳನ್ನು ನಡೆಯಿಸುವರೋ, ಎಲ್ಲಿ ಜನಗಳು ಭೇದಭಾವವಿಲ್ಲದೆ ಪ್ರತಿಯೊಬ್ಬರೂ ಏಕಮನಸ್ಕರಾಗಿ ಒಂದು ಸಂಸಾರದಂತೆ ಲಾಭದಾಯಕವಾದ ಕೆಲಸ ಮಾಡುವರೋ, ಎಲ್ಲಿ ಪ್ರತಿಯೊಬ್ಬರೂ ಎಲ್ಲರ ಉಪಯೋಗಕ್ಕೂ ಎಲ್ಲರೂ ಪ್ರತಿಯೊಬ್ಬನ ಉಪಯೋಗಕ್ಕಾಗಿಯೂ ಕೆಲಸಮಾಡುವರೋ, ಅಲ್ಲಿ ಪರಸ್ಪರ ಸಹಾಯಕ ತತ್ವವಿದೆಯೆಂದೂ ಅಂತಹ ಸಂಸ್ಥೆಗಳಿಗೆ ಪರಸ್ಪರ ಸಹಾಯಕ ಸಂಘಗಳೆಂದೂ ಹೆಸರು †

ಸಹಕಾರತತ್ವವು ಐಚ್ಛಿಕ ಸಂಸ್ಥೆಯ ಆಧಾರದಮೇಲೆ ನಿಂತಿದೆ ಇದು ಬಂಡವಾಳ ಪ್ರಭುತ್ವದಲ್ಲಿರುವ ಕೆಡಕನ್ನು ಹೋಗಲಾಡಿಸುತ್ತದೆ ಇದೇನೂ ಸಮತಾವಾದವಲ್ಲ ಈ ತತ್ವವು ತಾನೇ ತಾನಾಗಿ ಮನುಷ್ಯರ ಆರ್ಥಿಕ ಲಾಭಕ್ಕಾಗಿ ಕೆಲಸಮಾಡುತ್ತದೆ ಇದರಲ್ಲಿ ಕೂಲಿಯಾಗಲಿ ಅಥವಾ ಬಲಾತ್ಕಾರಕ ಪ್ರಶ್ನೆಯೇ ಆಗಲಿ ಇಲ್ಲವೇ ಇಲ್ಲ ಇದು ಪ್ರೈವೇಟ ಯಲ್ಲಿರುವ ಕೆಡಕನ್ನು ನಿವಾರಣೆಮಾಡಿ, ಒಂದೇಸಮನಾದ ಲಾಭ ಅಥವಾ ಹಿತವನ್ನುಂಟುಮಾಡುತ್ತದೆ ಇದರಿಂದ ಜನಸಾಮಾನ್ಯಕ್ಕೆ ಹೆಚ್ಚು ಸೇವೆ ಸಲ್ಲಿಸಿದಂತಾಗಿ ಸಮಾಜದ ಐಕ್ಯತೆಯನ್ನೂ ಅಭಿವೃದ್ಧಿಯನ್ನೂ ಸಾಧಿಸಿದಂತಾಗುತ್ತದೆ

೧೮ಳಲನೆಯ ಇಸವಿಯ ಸುಮಾರಿನಲ್ಲಿ ಯೂರೋಪು ಖಂಡದ ದೇಶ ಗಳಲ್ಲೆಲ್ಲಾ ಒಂದು ವಿಧವಾದ ದುರವಸ್ಥೆ ಪ್ರಾಪ್ತವಾಯಿತು ಇದನ್ನು ಪರಿಹಾರಮಾಡುವುದಕ್ಕೆ ಅನೇಕ ಪ್ರಯತ್ನಗಳು ನಡೆಯುತ್ತಿದ್ದವು

* " Principles of Economic's ", by Prof Marshall, p 1

† " Law and Principles of Co-operation ", by Calvert, p 23

ಜರ್ಮನಿ ದೇಶದಲ್ಲಿ ಇದರಿಂದುಂಟಾದ ಕಷ್ಟವನ್ನು ಪರಿಹಾರಮಾಡು ವುದಕ್ಕೋಸ್ಕರ ಸಹಕಾರ ಚಳವಳಿಯು ಆರಂಭಿಸಲ್ಪಟ್ಟಿತು ಹರ್‌ಷಲ್ಸ್ ಎಂಬ ಮಹನೀಯನು ೧೮೪೯ನೆಯ ಇಸವಿಯಲ್ಲಿ ಕೆಲವು ಜನ ವ್ಯೋಚಿ ಗಳಿಗ ಸಹಾಯಮಾಡುವುದಕ್ಕೆ ಒಂದು ಸಂಘವನ್ನು ಪ್ರಾರಂಭಿಸಿದನು ಅವರ ಕೆಲಸಕ್ಕೆ ಬೇಕಾದ ಪದಾರ್ಥಗಳನ್ನು ಕೊಂಡುಕೊಳ್ಳುವುದಕ್ಕೆ ಹಣ ಒದಗಿಸುವುದಕ್ಕಾಗಿ ಒಂದು ಸಾಲದ ಸಂಘವನ್ನೂ ಸ್ಥಾಪಿಸಿದನು ಇವನು ಸಹಕಾರತತ್ವದ ಮೇಲೂ, ಕೈಗಾರಿಕಾ ಸಂಘಗಳಮೇಲೂ ಕೆಲವು ಪುಸ್ತಕಗಳನ್ನು ಬರೆದು, ಜನಗಳಲ್ಲಿ ಜ್ಞಾನಪ್ರಚಾರ ಮಾಡುವ ಉದ್ದೇಶದಿಂದ ಅವುಗಳನ್ನು ಹಂಚಿದನು (ಹರ್‌ಷಲ್ಸ್‌ನಿಂದ ಪ್ರಾರಂಭಿ ಸಲ್ಪಟ್ಟ ಸಂಘಗಳು ಎರಡು ವಿಧಗಳಾಗಿವೆ ಒಂದು, ಬಂಡವಾಳವನ್ನು ಒದಗಿಸುವುದಕ್ಕೂ, ಇನ್ನೊಂದು, ಮಿತವ್ಯಯವನ್ನೂ, ಸ್ವಪ್ರಯತ್ನವನ್ನೂ ವೃದ್ಧಿಮಾಡುವುದಕ್ಕೂ ಸಹಾಯಮಾಡುತ್ತವೆ ಹೀಗೆ ಷಲ್ಸ್ ಡಿಲಿಟ್ಸ್ ಮಾದರಿಯಲ್ಲಿ ಸ್ಥಾಪಿತವಾದ ಸಂಘಗಳು ಸದಸ್ಯರಿಗೆ ಮಾತ್ರ ಸಾಲವನ್ನು ಕೊಡುವುದು, ಸಂಘದ ಲಾಭದಲ್ಲಿ ಸ್ವಲ್ಪ ಭಾಗವನ್ನು ಆಪದ್ಧನವಾಗಿಟ್ಟು ಕೊಂಡು ಉಳಿದುದನ್ನು ಸದಸ್ಯರಿಗೆ ಹಂಚುವುದು, ಸ್ವಂತ ಜಾಮೀನಿನ ಮೇಲೆ ಸದಸ್ಯರಿಗೆ ಸಾಲವನ್ನು ಕೊಡುವುದು, ಸದಸ್ಯರನ್ನು ಒಟ್ಟು ಗೂಡಿಸಿ, ವ್ಯಾಪಾರೋದ್ಯಮಗಳಿಗ ಅವಶ್ಯಕವಾದ ಶಿಸ್ತನ್ನೂ ಚಾತುರ್ಯ ವನ್ನೂ ವೃದ್ಧಿ ಪಡಿಸುವುದು— ಇವೇ ಮುಂತಾದ ಕೆಲಸಗಳನ್ನು ಸಮರ್ಪಕವಾಗಿ ನಡೆಸುತ್ತಿದ್ದವು ಕೆಲವು ಕಾಲದಲ್ಲಿಯೇ ಈ ಸಂಘಗಳು ದೊಡ್ಡ ದೊಡ್ಡ ವ್ಯಾಪಾರೋದ್ಯಮಗಳನ್ನು ಕೈಗೊಂಡು ನಾನಾವಿಧವಾದ ವೃತ್ತಿಯನ್ನು ಅವಲಂಬಿಸುತ್ತಿರುವವರನ್ನೆಲ್ಲಾ ಸದಸ್ಯರನ್ನಾಗಿ ತೆಗೆದು ಕೊಂಡು ಕೆಲಸಮಾಡಹತ್ತಿದವು ಇದರಿಂದ ಈ ಸಂಘಗಳ ಆಡಳಿತದ ಖರ್ಚು ಹಚ್ಚಾಗಿ ಲಾಭಕ್ಕಾಗಿಯೇ ದುಡಿಯತಕ್ಕ ಜಾಯಿಂಟ್-ಸ್ಟಾಕ್ ಕಂಪನಿಗಳ ತತ್ವವನ್ನು ಅಂಗೀಕರಿಸಿದಂತಾಯಿತು

ಈ ರೀತಿಯಾದ ಸಂಘಗಳು ಒಂದು ಕಡೆ ಕೆಲಸಮಾಡುತ್ತಿರುವಾಗ ಹಳ್ಳಿಯ ಜನಗಳ ಕಷ್ಟಪರಿಹಾರ ಮಾಡುವುದಕ್ಕೆ ಎಲ್ ಡಬ್ಲ್ಯು ರೈಯಿಫಿಸನ್ ಎಂಬ ಮಹನೀಯನು ಇನ್ನೊಂದು ವಿಧವಾದ ಪರಸ್ಪರ

ಸಹಾಯಕ ಸಂಘಗಳನ್ನು ಸ್ಥಾಪಿಸಿದನು ಮೊದಲು ಆಲೂಗಡ್ಡೆಯನ್ನೂ ರೊಟ್ಟಿಯನ್ನೂ ಬಡಜನರಿಗೆ ಹಂಚುವುದಕ್ಕೆ ಕೆಲವು ಸಂಘಗಳನ್ನೂ, ಅನಂತರ ಬಡರೈತರಿಗೆ ಸಾಲಕೊಡುವ ಸಂಘಗಳನ್ನೂ ಪ್ರಾರಂಭಿಸಿದನು ಹಳ್ಳಿಗಳಲ್ಲಿ ಬಡರೈತರಿಗೆ ಸಾಲ ಒದಗಿಸುವ ಕೆಲಸವನ್ನು ಈ ಸಂಘಗಳು ಬಹಳ ಚೆನ್ನಾಗಿ ನಡೆಸುತ್ತಿದ್ದವು ಕೆಲವು ಗೊತ್ತಾದ ಪ್ರದೇಶಗಳಲ್ಲಿ ಸಹಕಾರತತ್ವದ ಮೇಲೆ ಸ್ಥಾಪಿಸಲ್ಪಟ್ಟ ಈ ಸಂಘಗಳು ರೈತರಿಗೆ ಹೆಚ್ಚು ಸಹಾಯಕವಾಗಿದ್ದುವು ಸ್ವಲ್ಪ ಸ್ವಲ್ಪವಾಗಿ ಗಳಿಸಿದ ಸದಸ್ಯತ್ವದ ಹಣವೇ ಈ ಸಂಘಗಳ ಬಂಡವಾಳ ಸಂಘಗಳ ಸಾಲವು ೬ ತಿಂಗಳಿಂದ ೩ ವರ್ಷ ಅವಧಿಯೊಳಗೆ ವಾಪಸುಕೊಡಬೇಕು ಕೆಲವು ನಿರ್ದಿಷ್ಟವಾದ ಲಾಭದಾಯಕ ಕೆಲಸಕ್ಕೇ ಸಾಲವು ಕೊಡಲ್ಪಡುತ್ತಿತ್ತು ಒಟ್ಟಿನಲ್ಲಿ, "ಸದಸ್ಯರ ನೈತಿಕ ಮತ್ತು ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸುವುದು, ಇವುಗಳಿಗೆ ಅನುಕೂಲವಾದ ವ್ಯವಸ್ಥೆಯನ್ನು ಮಾಡುವುದು, ಸದಸ್ಯರ ಲಾಭದಾಯಕವಾದ ಉದ್ಯಮಗಳಿಗೆ ಬಂಡವಾಳವನ್ನು ಒದಗಿಸುವುದು, ವ್ಯರ್ಥವಾಗಿದ್ದ ಬಂಡವಾಳವನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸುವಂತೆ ಮಾಡುವುದು ಮತ್ತು ಸದಸ್ಯರು ಸ್ವಲ್ಪ ಹಣವನ್ನಾದರೂ ಗಳಿಸುವುದಕ್ಕೆ ಒಂದು ಬ್ಯಾಂಕನ್ನು ಏರ್ಪಡಿಸುವುದು— ಇವೇ ಮುಂತಾದವು ಈ ಸಹಕಾರ ಸಂಘಗಳ ಮುಖ್ಯೋದ್ದೇಶವಾಗಿತ್ತು " *

ರೈಯಿಪಿಸನ್ ಸಂಘಗಳು ಯಾವಾಗಲೂ ರೈತರ ನೈತಿಕಾಭಿವೃದ್ಧಿಯನ್ನು ಮುಖ್ಯ ಧ್ಯೇಯವನ್ನಾಗಿ ಇಟ್ಟುಕೊಂಡು ಹಳ್ಳಿಯವರಿಗೆ ಸಹಾಯಮಾಡುತ್ತಿದ್ದವು ಒಂದು ಹಳ್ಳಿಗೆ ಒಂದು ಸಂಘದಂತೆ ಸ್ಥಾಪಿಸಿ, ಅದರಲ್ಲಿ ಬರುತ್ತಿದ್ದ ಲಾಭವನ್ನೆಲ್ಲಾ ಸಂಘದ ಬಂಡವಾಳವನ್ನಾಗಿ ಇಟ್ಟುಕೊಂಡು, ಒಂದು ಗೊತ್ತಾದ ಕಾರ್ಯಕ್ರಮವನ್ನು ಅನುಸರಿಸಿ ಕೆಲಸಮಾಡುತ್ತಿದ್ದವು ಇವುಗಳ ಕಾರ್ಯವಿಸ್ತಾರಕ್ಕೆ ಹೆಚ್ಚು ಅವಕಾಶ ಕೊಡುತ್ತಿರಲಿಲ್ಲ ಸಂಘಗಳು ವಾರಕ್ಕೆ ಒಂದಾವರ್ತಿ ಸಭೆಗಳನ್ನು ಸೇರಿಸಿ, ಸಂಘದ ಆರ್ಥಿಕ ವಿಚಾರ, ರೈತರಿಗೆ ಸಾಲ ಒದಗಿಸುವುದು, ಸಂಘಕ್ಕೆ ಬೇಕಾದ ಇತರ ಅನುಕೂಲತೆ— ಇವೇ ಮುಂತಾದ ವಿಷಯಗಳಲ್ಲಿ

* "Co-operation at Home and Abroad", by C R Fay, p 42

ಚರ್ಚೆನಡೆಯಿಸಿ, ಸರಿಯಾದ ಕಾರ್ಯಕ್ರಮಗಳನ್ನು ಅನುಸರಿಸುತ್ತಿದ್ದುವು. "ಏನೂ ತಿಳಿಯದ ರೈತರು, ಸಂಘದಮೇಲೆ ವಿಶೇಷ ಅಭಿಮಾನವಿಟ್ಟು ತಮ್ಮ ಸದಸ್ಯತ್ವದ ಪುಸ್ತಕಗಳನ್ನು ಹಿಡಿದುಕೊಂಡು, ಸಭೆಯ ಕಾರ್ಯಕಲಾಪಗಳ ವಿಷಯದಲ್ಲಿ ಹೆಚ್ಚು ಶ್ರದ್ಧೆ, ಸಂತೋಷದಿಂದ ಚರ್ಚೆ ನಡೆಸುತ್ತಿರುವುದನ್ನು ನೋಡುವುದಕ್ಕೆ ಅತ್ಯಾನಂದವಾಗುತ್ತಿತ್ತು"*

ರೈಯಿಪಿಸನ್ ಸಂಘಗಳು ಹಳ್ಳಿಗಳಲ್ಲಿ ಉತ್ತಮ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುತ್ತಿದ್ದುವು ಇದರಿಂದ ಸಂಘಗಳ ಸದಸ್ಯತನವು ಶೇ ೮೦೦ರಷ್ಟು ಹೆಚ್ಚಾಯಿತು ಸಾಲದ ಬಡ್ಡಿಯು ಶೇ ೮ರಿಂದ ೩ರವರೆಗೆ ಇಳಿಸಲ್ಪಟ್ಟಿತು ಈಗಲೂ ಜರ್ಮನಿ ದೇಶದ ಒಟ್ಟು ರೈತರ ಸಂಖ್ಯೆಯಲ್ಲಿ ಅರ್ಧಕ್ಕಿಂತ ಹೆಚ್ಚಾಗಿ ಈ ಸಂಘಗಳ ಸದಸ್ಯರಾಗಿದ್ದಾರೆ "ಸಾಹುಕಾರರ ಗುಲಾಮರಾಗಿ ನರಳುತ್ತಿದ್ದ ರೈತರಿಂದ ಭರಿತವಾದ ಒಂದು ಹಳ್ಳಿಯಲ್ಲಿ ರೈಯಿಪಿಸನ್ ಸಂಘವು ಬಹಳ ಸ್ವಲ್ಪಕಾಲದಲ್ಲಿಯೇ ಅಲ್ಲಿಯ ರೈತರನ್ನು ಸಾಲದ ಕಷ್ಟದಿಂದ ಬಿಡುಗಡೆಮಾಡಿತು, ಅವರ ಆರ್ಥಿಕಸ್ಥಿತಿಯನ್ನು ಉತ್ತಮಪಡಿಸಿತು ಅವರಿಗೆ ವ್ಯವಸಾಯಕ್ಕೆ ಅನುಕೂಲವಾದ ಯಂತ್ರೋಪಕರಣ, ಬಂಡವಾಳ ಮುಂತಾದುವನ್ನು ಒದಗಿಸಿತು ಇದರಿಂದ ರೈತರಿಗೆ ಹೆಚ್ಚು ಸಂಪಾದನೆಯಾಯಿತು ಅವರು ತಮ್ಮ ಗ್ರಾಮವನ್ನು ನಿರ್ಮಲವಾಗಿ ಇಟ್ಟುಕೊಳ್ಳುವಂತೆಯೂ ಸಹಾಯಮಾಡಿತು ಈ ಕಾರ್ಯಕ್ರಮದಿಂದ ರೈತರ ಜಮೀನಿನ ಬೆಲೆಯೂ ಹೆಚ್ಚಿ, ಅವರ ಪದಾರ್ಥಗಳ ಬೆಲೆಯೂ ಹೆಚ್ಚಿದ್ದಲ್ಲದೆ, ಅವರ ಜೀವನವೂ ಉತ್ತಮಗೊಂಡಿತು"†

ಜರ್ಮನಿ ದೇಶದ ಕಾರ್ಯಕ್ರಮದಂತೆಯೇ ಇಟಲಿ, ಫ್ರಾನ್ಸ್ ದೇಶಗಳು ತಮ್ಮ ರೈತರ ಕಷ್ಟಗಳನ್ನು ಬಗೆಹರಿಸುವುದಕ್ಕೋಸ್ಕರ ಸಹಕಾರ ಸಂಘಗಳನ್ನು ಸ್ಥಾಪಿಸಿದುವು ಆಸ್ಟ್ರಿಯ, ಸ್ವಿಟ್ಜರ್ಲೆಂಡ್ ಮತ್ತು ಫ್ರಾನ್ಸ್ ದೇಶಗಳಲ್ಲಿ ಸಾವಿರಾರು ಸಂಘಗಳು ಅಲ್ಲಿಯ ರೈತರ ಕಾರ್ಯಕ್ರಮಗಳಲ್ಲಿ ಬದಲಾವಣೆಗಳನ್ನುಂಟುಮಾಡಿ, ಅವರ ಜೀವನವನ್ನು

---

* "Co operation", by H Wolff, p 27

† From a writing of F W Raiffeisen, p 71, quoted from "Co operation at Home and Abroad", by C R Fay, p 49

ಉತ್ತಮಪಡಿಸಿವೆ ಇಂತಹ ಸಂಘಗಳ ಅತ್ಯುತ್ತಮವಾದ ಮತ್ತು ಆಶ್ಚರ್ಯಕರವಾದ ಅಭಿವೃದ್ಧಿಕೆಲಸಗಳನ್ನು ಡೆನ್ಮಾರ್ಕ್ ಮತ್ತು ಐರ್ಲೆಂಡ್ ದೇಶದ ಗ್ರಾಮಗಳಲ್ಲಿ ನಾವು ನೋಡಬಹುದು ಎಲ್ಲೆಲ್ಲಿ ಪರಸ್ಪರ ಸಹಾಯಕ ಸಂಘಗಳು ಉತ್ತಮ ರೀತಿಯಲ್ಲಿ ಕೆಲಸಮಾಡುತ್ತಿವೆಯೋ, ಅಲ್ಲೆಲ್ಲಾ ಗ್ರಾಮಾಭಿವೃದ್ಧಿಕಾರ್ಯಗಳು ಸಮರ್ಪಕವಾಗಿ ನಡೆಯುತ್ತಿವೆ, ಮತ್ತು ರೈತರ ಜೀವನವೂ ಉತ್ತಮಗೊಂಡಿದೆ "ರೈನ್ ನದೀ ತೀರದಲ್ಲಿರುವ ಹಳ್ಳಿಗಳಿಗೆ ಹೋಗಿ ನೋಡಿ! ರೈತರ ಮನೆಗಳು ಎಷ್ಟು ಶುಚಿಯಾಗಿವೆ ಅವರ ವ್ಯವಸಾಯಕ್ರಮವು ಎಷ್ಟು ಅಭಿವೃದ್ಧಿಯಾಗಿದೆ ರೈತರು ಉತ್ತಮ ಯಂತ್ರೋಪಕರಣ, ಗೊಬ್ಬರ, ದನಕರು— ಇವೇ ಮುಂತಾದುವನ್ನು ಸುಲಭ ಬೆಲೆಗೆ ಕೊಂಡುಕೊಳ್ಳುತ್ತಿದ್ದಾರೆ ಹಣ್ಣು, ಹಂಪಲು, ತರಕಾರಿಗಳನ್ನು ಬೆಳೆದು ಹೆಚ್ಚಿನ ಬೆಲೆಗೆ ಮಾರಿ ಸಂಪಾದನೆ ಮಾಡುತ್ತಿದ್ದಾರೆ ಅನೇಕ ಹಳ್ಳಿಗಳಲ್ಲಿ ವಿಧವಿಧವಾದ ಉಪವೃತ್ತಿಯನ್ನು ರೈತರು ಕೈಗೊಳ್ಳುತ್ತಿದ್ದಾರೆ ವ್ಯಾಪಾರೋದ್ಯಮಗಳನ್ನು ಚೆನ್ನಾಗಿ ನಡೆಯಿಸಿ, ರೈತರೇ ಬಂಡವಾಳಗಾರರಾಗುತ್ತಿದ್ದಾರೆ" ಎಂಬದಾಗಿ ಸಹಕಾರ ಸಂಘಗಳ ವಿಚಾರವಾಗಿ ಒಬ್ಬ ಪಂಡಿತರು ಬರೆದಿದ್ದಾರೆ *

ಪಾಶ್ಚಾತ್ಯ ದೇಶಗಳಲ್ಲಿ ಹೀಗೆ ಅನೇಕ ತರಹೆಯ ಸಂಘಗಳು ಬಹು ಚೆನ್ನಾಗಿ ಕೆಲಸಮಾಡುತ್ತಿವೆ ಇಟಲಿ, ಡೆನ್ಮಾರ್ಕ್ ದೇಶಗಳಲ್ಲಿ ಸಾಲ ಕೊಡುವ ಸಂಘಗಳಿಗಿಂತ ಇತರ ವಿಧವಾದ ಸಂಘಗಳು ಅಭಿವೃದ್ಧಿ ಕಾರ್ಯಗಳನ್ನು ಸಮರ್ಪಕವಾಗಿ ನಡೆಸುತ್ತಿವೆ ಜಪಾನ್ ದೇಶದಲ್ಲಿ ಶೇ ೭೧ಕ್ಕಿಂತ ಹೆಚ್ಚಾದ ಸಂಘಗಳು ರೈತರಿಂದ ತಯಾರಾದ ಪದಾರ್ಥಗಳ ಮಾರಾಟ ವಿಷಯದಲ್ಲಿ ಹೆಚ್ಚು ಆಸಕ್ತಿ ವಹಿಸಿವೆ ರೈತರು ಬೆಳೆಯುವ ಗೋಧಿ, ಅಕ್ಕಿ, ಬಾರ್ಲಿ, ತರಕಾರಿ, ಹಣ್ಣು — ಇವುಗಳನ್ನೆಲ್ಲಾ ಈ ಸಂಘಗಳು ಶೇಖರಿಸಿ ಹೆಚ್ಚು ಲಾಭ ಬರುವ ರೀತಿಯಲ್ಲಿ ಅವುಗಳನ್ನೆಲ್ಲಾ ಮಾರಾಟಮಾಡಿ ಬಂದ ಲಾಭವನ್ನು ರೈತರಿಗೆ ಹಂಚುತ್ತಿವೆ ಹಾಗೆಯೇ ಡೆನ್ಮಾರ್ಕ್ ದೇಶದಲ್ಲಿ ತಯಾರಾಗುವ ಬೆಣ್ಣೆ, ಕೆನೆ, ಮಾಂಸ, ಇವೇ ಮುಂತಾದ ಪದಾರ್ಥಗಳನ್ನು ಒಟ್ಟುಗೂಡಿಸಿ, ಜರ್ಮನಿ ಮುಂತಾದ

* "Henry Wolff's People's Bank", p 9

ಇತರ ದೇಶಗಳಿಗೆ ಮಾರಾಟಮಾಡಿ ಹೆಚ್ಚು ಲಾಭ ಸಂಪಾದಿಸುವ ಸಹಾಯಕ ಸಂಘಗಳ ಸಂಖ್ಯೆಯೇ ಬಹಳ ಹೆಚ್ಚಾಗಿವೆ ಇಂಗ್ಲೆಂಡ್ ದೇಶದಲ್ಲಿಯೂ ಕೂಡ ರೈತರ ಪದಾರ್ಥಗಳ ಮಾರಾಟಕ್ಕೆ ಹೆಚ್ಚು ಅನುಕೂಲ ಕಲ್ಪಿಸುವ ಉದ್ದೇಶದಿಂದ 'ಅಗ್ರಿಕಲ್ಚರಲ್ ಮಾರ್ಕೆಟಿಂಗ್ ಆಕ್ಟ್' ಎಂಬ ಕಾನೂನನ್ನು ಆಚರಣೆಗೆ ತರಲಾಗಿದೆ ಇದರ ಪ್ರಕಾರ ವ್ಯವಸಾಯದಿಂದ ಉತ್ಪತ್ತಿಯಾದ ಪದಾರ್ಥಗಳ ವ್ಯಾಪಾರವನ್ನು ಪರಸ್ಪರ ಸಹಾಯಕ ಸಂಘಗಳೇ ನಡಸಬೇಕೆಂದು ವಿಧಿಸಿದಂತಾಯ್ತು ಹೀಗೆ ಇತರ ದೇಶಗಳಲ್ಲಿ ಪರಸ್ಪರ ಸಹಾಯಕ ಸಂಘಗಳು ರೈತರಿಗೆ ಸಹಾಯಮಾಡಿ, ಅವರ ಸಂಪಾದನೆಯನ್ನು ಸಾಧ್ಯವಾದಷ್ಟು ಮಟ್ಟಿಗೆ ಹೆಚ್ಚಿಸುತ್ತಾ ಇವೆ

ಭರತಖಂಡದಲ್ಲಿ ಸಹಕಾರ ಚಳವಳಿಯು ಪ್ರಾರಂಭಕ್ಕೆ ಪ್ರಥಮ ಪ್ರಯತ್ನವು ೧೮೮೩ನೆಯ ಇಸವಿಯಲ್ಲಿ ಮಾಡಲಾಯಿತು ಆದರೆ ಅದು ಸಾರ್ಥಕವಾಗಲಿಲ್ಲ ಬೊಂಬಾಯಿ ಪ್ರಾಂತೀಯ ಸರಕಾರವು ರೈತರ ಪ್ರಯೋಜನಕ್ಕಾಗಿ ಒಂದು ವ್ಯವಸಾಯ ಬ್ಯಾಂಕನ್ನು ಸ್ಥಾಪಿಸಲು ಪ್ರಯತ್ನ ಮಾಡಿತು ಆದರೆ ಸಾರ್ವಭೌಮ ಕೇಂದ್ರ ಸರ್ಕಾರವು ಅಪ್ಪಣೆ ಕೊಡದೆ ಹೋದುದರಿಂದ, ಪ್ರಯತ್ನವು ಸಫಲವಾಗಲಿಲ್ಲ ಕೆಲವು ಕಾಲದಮೇಲೆ ಮದರಾಸು ಸರ್ಕಾರದ ಕೆಲವು ಅಧಿಕಾರಿಗಳು ಸಹಕಾರತತ್ವವನ್ನೇ ಅನುಸರಿಸಿ, ನಿಧಿಗಳೆಂಬ ಕೆಲವು ಸಂಸ್ಥೆಗಳನ್ನು ಸ್ಥಾಪಿಸಿದರು ಇವುಗಳು ಚೆನ್ನಾಗಿ ಕೆಲಸಮಾಡುತ್ತಿದ್ದುವು ಇವುಗಳ ಉದಾಹರಣೆಯನ್ನು ನೋಡಿ, ಇಂಡಿಯಾ ಸರ್ಕಾರದವರಿಗೆ ಸಹಕಾರ ಸಂಘಗಳು ಮುಂದೆ ನಮ್ಮ ದೇಶದಲ್ಲಿ ಚೆನ್ನಾಗಿ ಕೆಲಸ ಮಾಡಬಹುದೆಂಬ ಭಾವನೆಯಾಯಿತು ಸಹಕಾರತತ್ವದ ಮೇಲೆ ನಮ್ಮ ರೈತರಿಗೆ ಸಾಲವನ್ನು ಒದಗಿಸಿದರೆ, ಅವರಿಗೆ ಹೆಚ್ಚು ಪ್ರಯೋಜನವಾಗಬಹುದೆಂದೂ, ಸರ್ಕಾರದವರಿಗೆ ಭಾಸ ವಾಯಿತು ಅನಂತರ ಸಹಕಾರ ಸಂಘಗಳ ಸ್ಥಾಪನೆಗೂ ಮತ್ತು ಅವುಗಳ ಕಾರ್ಯಕ್ರಮಕ್ಕೂ ಅನುಕೂಲವಾದ ಒಂದು ಶಾಸನವು ತಯಾರಾಯಿತು ೧೯೦೪ನೆಯ ಇಸವಿಯಲ್ಲಿ ಸಾಲ ಕೊಡತಕ್ಕ ಸಹಕಾರ ಸಂಘಗಳನ್ನು ಸ್ಥಾಪಿಸಿ, ಕೆಲಸಮಾಡುವುದಕ್ಕೆ ಅನುಕೂಲವಾದ ಕಾನೂನು ಮಂಜೂ ರಾಯಿತು ಈ ಶಾಸನದಿಂದ ಒಂದೇ ವಿಧವಾದ ಸಂಘಗಳನ್ನು

ಸ್ಥಾಪಿಸುವುದಕ್ಕೆ ಅವಕಾಶವಿದ್ದುದರಿಂದ, ಇದರಲ್ಲಿ ಅಷ್ಟು ಪ್ರಯೋಜನ ಕಂಡುಬರಲಿಲ್ಲ ಆದುದರಿಂದ ಈ ಶಾಸನವನ್ನು ತಿದ್ದುಪಡಿಮಾಡಿ, ಎಲ್ಲಾ ವಿಧವಾದ ಪರಸ್ಪರ ಸಹಾಯಕ ಸಂಘಗಳನ್ನು ಸ್ಥಾಪಿಸುವುದಕ್ಕೆ ಅವಕಾಶ ವನ್ನೀಯುವಂತಹ ಮತ್ತೊಂದು ಶಾಸನವು ೧೯೧೨ನೆಯ ಇಸವಿಯಲ್ಲಿ ಆಚರಣೆಗೆ ತರಲಾಯಿತು ಇದರಿಂದ ದೇಶದಲ್ಲೆಲ್ಲಾ ಅನೇಕ ಬಗೆಯ ಸಹಕಾರ ಸಂಘಗಳನ್ನು ಸ್ಥಾಪಿಸಿ, ಸಹಕಾರ ಚಳವಳಿಯನ್ನು ವಿಸ್ತರಿಸು ವುದಕ್ಕೆ ಅವಕಾಶ ಕಲ್ಪಿಸಿದಂತಾಯಿತು

ಭರತಖಂಡದಲ್ಲಿ ಸಹಕಾರ ಚಳವಳಿಯು ಇತರ ದೇಶಗಳಲ್ಲಿ ಆದಂತೆ ಜನರ ಒತ್ತಾಯದಿಂದಲಾಗಲಿ ಅಥವಾ ಪ್ರಜಾಪ್ರಮುಖರಿಂದಲಾಗಲಿ ಪ್ರಾರಂಭಿಸಲ್ಪಡಲಿಲ್ಲ ಸರ್ಕಾರದವರು ಆಗಾಗ್ಗೆ ಅನುಕೂಲವಾದ ಕಾನೂನುಗಳನ್ನು ಮಂಜೂರುಮಾಡಿ, ಸಂಘಗಳನ್ನು ಸ್ಥಾಪಿಸುವುದಕ್ಕೆ ಅವಕಾಶ ಕಲ್ಪಿಸಿದ್ದಾರೆ ಸಂಘಗಳ ಕಾರ್ಯಕ್ರಮವನ್ನು ಅನುಸರಿಸಿ ಕೆಲಸಮಾಡುವಂತೆ ಖಾಸಗಿ ಜನಗಳಿಗೆ ತಿಳಿಸಿ ಮೇಲ್ವಿಚಾರಣೆಯನ್ನೂ, ಶೋಧನೆಯನ್ನೂ ಸರ್ಕಾರದವರೇ ವಹಿಸಿದ್ದಾರೆ ಸರ್ಕಾರದವರ ಅಭಿಮಾನಪೂರ್ವಕವಾದ ಪ್ರಯತ್ನದಿಂದಲೇ ಸಹಕಾರತತ್ವವು ದೇಶ ದಲ್ಲೆಲ್ಲಾ ಹರಡುತ್ತಿರುವುದು ನಮ್ಮ ದೇಶದ ರೈತರ ಆರ್ಥಿಕಸ್ಥಿತಿ ಯನ್ನು ಉತ್ತಮಪಡಿಸುವುದಕ್ಕೆ ಬೇಕಾದ ಸಹಾಯವೂ ಅವಕಾಶವೂ ಈ ತತ್ವದಲ್ಲಿ ಇದ್ದೇ ಇದೆ ಸಾಲದ ಹೊರೆಯನ್ನು ಕಡಿಮೆಮಾಡು ವುದಕ್ಕೂ ಮಿತವ್ಯಯ, ಸ್ವಾವಲಂಬನೆ, ಸಂಘಶಕ್ತಿ — ಇವುಗಳನ್ನು ವೃದ್ಧಿಮಾಡಿ, ಸರ್ವತೋಮುಖವಾದ ಅಭಿವೃದ್ಧಿಗೆ ಸಹಕಾರತತ್ವದಲ್ಲಿ ಹೆಚ್ಚು ಅವಕಾಶ ಇದೆ

ಕಳೆದ ಮೂವತ್ತು ವರುಷ ಕಾಲಕ್ಕಿಂತ ಹೆಚ್ಚಾಗಿ ನಮ್ಮ ದೇಶದಲ್ಲಿ ಸಹಕಾರ ಚಳವಳಿಯು ಆಚರಣೆಯಲ್ಲಿದೆ ಸಂಘಗಳ ಸಂಖ್ಯೆಯೂ ಹೆಚ್ಚುತ್ತಿರಬಹುದು, ಸದಸ್ಯರ ಸಂಖ್ಯೆಯೂ ಹೆಚ್ಚುತ್ತಿರಬಹುದು ಆದರೆ ಸಂಘಗಳ ಅಭಿವೃದ್ಧಿಯು ಒಂದೇ ಮುಖವಾಗಿದೆ ಸದ್ಯದಲ್ಲಿ ನಮ್ಮ ದೇಶದ ರೈತರಿಗೆ ಹೆಚ್ಚು ಸಹಾಯವು ಬೇಕಾಗಿರುವುದು ಸಾಕಾದಷ್ಟು ಸಂಘಗಳು ನಮ್ಮ ಹಳ್ಳಿಗಳಲ್ಲಿ ಇಲ್ಲ ಬಂಗಾಳಾ ದೇಶದಲ್ಲಿ ಒಂದು ನೂರು

ಹಳ್ಳಿಗಳಿಗೆ ೨೩ ಸಹಾಯಕ ಸಂಘಗಳಂತೆಯೂ, ಮದ್ರಾಸಿನಲ್ಲಿ ೨೨ ಸಂಘಗಳಂತೆಯೂ, ಪಂಜಾಬಿನಲ್ಲಿ ೪೮ ಸಂಘಗಳಂತೆಯೂ, ಸಂಯುಕ್ತ ಪ್ರಾಂತದಲ್ಲಿ ೫ ಸಂಘಗಳಂತೆಯೂ ಇವೆ. ಬೊಂಬಾಯಿ ಮತ್ತು ಮೈಸೂರು ಪ್ರಾಂತಗಳಲ್ಲಿ ೧೦ ಜನ ಸಾಗುವಳಿದಾರರಲ್ಲಿ ಇನ್ನೂ ೯ ಜನರು ಸಹಕಾರ ಸಂಘಗಳ ಸಂಪರ್ಕವಿಲ್ಲದೆ ಇದ್ದಾರೆಂದು ಹೇಳಲಾಗಿದೆ ಪರಸ್ಪರ ಸಹಾಯಕ ಸಂಘಗಳಲ್ಲಿ ಭಾಗವಹಿಸುತ್ತಿರುವ ಕುಟುಂಬಗಳ ಸಂಖ್ಯೆಯನ್ನು ನಾವು ನೋಡಿದರೂ ಕೂಡ, ಸಹಕಾರ ತತ್ವವು ಇನ್ನೂ ವಿಸ್ತರಿಸಿಲ್ಲವೆಂದೇ ಹೇಳಬಹುದು —

| ನಂ | ಪ್ರಾಂತಗಳ ಹೆಸರು | ಎಲ್ಲಾ ವಿಧವಾದ ಸಂಘಗಳಲ್ಲಿ ಭಾಗವಹಿಸುತ್ತಿರುವ ಕುಟುಂಬದ ಸಂಖ್ಯೆ ಶೇ ದರ | ಲೇವಾದೇವಿ ಸಂಘಗಳಲ್ಲಿ ಮಾತ್ರ ಭಾಗವಹಿಸುತ್ತಿರುವ ಕುಟುಂಬದ ಸಂಖ್ಯೆ |
|---|---|---|---|
| 1 | ಅಸ್ಸಾಂ | 2 9 | 2 9 |
| 2 | ಬಂಗಾಳಾ | 4 4 | 3 8 |
| 3 | ಬಿಹಾರ, ಒರಿಸ್ಸ | 3 2 | 3 1 |
| 4 | ಬೊಂಬಾಯಿ | 10 0 | 8 7 |
| 5 | ಬರ್ಮ | 3 9 | 3 9 |
| 6 | ಮದರಾಸು | 9 3 | 7 9 |
| 7 | ಪಂಜಾಬು * | 10 9 | 10 2 |
| 8 | ಮೈಸೂರು | 10 0 | 10 0 |

ಇಂಡಿಯಾ ದೇಶದ ಹಳ್ಳಿಯ ಸಾಲದ ಸಂಘಗಳು ರೈಯಿಪಿಸನ್ ಸಂಘದ ಮಾದರಿಯಲ್ಲಿವೆ ಸದಸ್ಯರ ಚಂದಾ ಹಣದಿಂದ ಸಂಘದ ಬಂಡವಾಳವನ್ನು ಸೇರಿಸಿ, ಸಂಬಳವಿಲ್ಲದ ನೌಕರರಿಂದ ಕೆಲಸಮಾಡಿಸಿ, ಗೊತ್ತಾದ ಕಾಲಗಳಲ್ಲಿ ಸಭೆಗಳನ್ನು ಕೂಡಿಸಿ, ಸಂಘದ ಮೇಲ್ವಿಚಾರಣೆಗೆ ಒಂದು ಕಾರ್ಯಕಾರೀ ಸಮಿತಿಯನ್ನು ರಚಿಸಿ, ಸಂಘಗಳು ಕೆಲಸಮಾಡುತ್ತಿವೆ ಆದರೆ ರೈಯಿಪಿಸನ್ ಸಂಘಗಳು ಐಶ್ವರ್ಯವಂತರಾದ ಹೆಚ್ಚು ಸದಸ್ಯರನ್ನು ಸೇರಿಸಿ, ಬಡರೈತರಿಗೆ ಲಾಭದಾಯಕವಾದ ಉದ್ಯಮಗಳಿಗೆ ಸಾಲ ಕೊಡುತ್ತಿದ್ದರು ನಮ್ಮ ಸಂಘಗಳು ಎಲ್ಲಾ ಕೆಲಸಕ್ಕೂ ಯಾವ ಆತಂಕವೂ ಇಲ್ಲದೆ ಸಾಲವನ್ನು ನೀಡುತ್ತಿವೆ ಸದಸ್ಯರಲ್ಲಿ ಐಶ್ವರ್ಯವಂತ,

* "Royal Commission on Agriculture", 1928, p 446

ಬಡವ ಎಂಬ ಭೇದಭಾವನೆಯು ಇಲ್ಲಿ ಇಲ್ಲ ಅನೇಕವೇಳೆ ಅಚ್ಚು ಮೆಚ್ಚಿಕೆ, ಆಢ್ಯತೆ, ಇವುಗಳಿಂದ ನಮ್ಮ ಸಂಘಗಳ ಸಾಲಗಳು ಸರಿಯಾಗಿ ವಸೂಲಾಗುವುದೇ ಇಲ್ಲ ಕೆಲವು ಸಂದರ್ಭಗಳಲ್ಲಿ ರೈತರು ಹೆಚ್ಚಿನ ಬಡ್ಡಿಯ ಸಾಲವನ್ನು ಸಾಹುಕಾರರಲ್ಲಿ ಮಾಡಿ, ಸಂಘದ ಸಾಲವನ್ನು ತೀರಿಸುತ್ತಿದ್ದಾರೆ ಇವೇ ಮುಂತಾದ ಕೊರತೆಗಳನ್ನು ನಿವಾರಣೆಮಾಡು ವುದಕ್ಕೋಸ್ಕರ ಅನೇಕ ಪ್ರಾಂತಗಳಲ್ಲಿ ಸರ್ಕಾರದವರು ಬೇರೆ ಒಂದು ಶಾಖೆಯನ್ನೇರ್ಪಡಿಸಿ, ಸಹಕಾರತತ್ವ ಪ್ರಚಾರ ಮಾಡುತ್ತಿದ್ದಾರೆ ಸಂಘಗಳ ಲೆಕ್ಕ ತನಿಖೆ, ಮೇಲ್ವಿಚಾರಣೆ, ಪ್ರಚಾರ— ಇವೇ ಮುಂತಾದ ಅಭಿವೃದ್ಧಿಕಾರ್ಯಗಳನ್ನು ಸಮರ್ಪಕವಾಗಿ ನಡೆಸುವುದಕ್ಕೆ ಬೇರೆ ಅಧಿಕಾರಿ ಗಳನ್ನು ಸರ್ಕಾರದವರು ನೇಮಿಸಿದ್ದಾರೆ

ಇಷ್ಟಾದರೂ, ನಮ್ಮ ಪರಸ್ಪರ ಸಹಾಯಕ ಸಂಘಗಳು ಇನ್ನೂ ಉತ್ತಮಗೊಂಡಿಲ್ಲ ಅನೇಕ ಸಂಘಗಳ ಆರ್ಥಿಕಸ್ಥಿತಿಯು ಚೆನ್ನಾಗಿಲ್ಲ ಅವುಗಳ ಬಂಡವಾಳವು ರೈತರ ಮಿತವ್ಯಯದಿಂದ ಶೇಖರಿಸಲ್ಪಡುತ್ತಾ ಇಲ್ಲ ಹಲವು ಕಡೆಗಳಲ್ಲಿ ಸಾಲದ ಸಂಘಗಳ ವಿಚಾರವೂ ರೈತರಿಗೆ ತಿಳಿದಿಲ್ಲ ಕೆಲವು ಗ್ರಾಮಗಳಲ್ಲಿ ಸಹಕಾರ ಸಂಘಗಳನ್ನು ಅಧಿಕಾರಿ ಸಂಸ್ಥೆ ಎಂದು ರೈತರು ತಿಳಿದುಕೊಂಡಿದ್ದಾರೆ ಅನೇಕ ಸಂಘಗಳ ಕಾರ್ಯಕ್ರಮಗಳು ಅವ್ಯವಸ್ಥಿತವಾಗಿವೆ ಶ್ರದ್ಧೆಯಿಂದಲೂ, ಜಾಣತನದಿಂದಲೂ ಕೆಲಸ ನಡೆಸುವ ಜನಗಳು ಕಡಿಮೆ ಒಟ್ಟಿನಲ್ಲಿ ಸಂಘಗಳಮೇಲೆ ನಮ್ಮ ಜನರಿಗೆ ಮಮತೆ, ಉತ್ಸಾಹ, ಶ್ರದ್ಧೆ—ಇವು ಇನ್ನೂ ಚೆನ್ನಾಗಿ ಹುಟ್ಟಿಲ್ಲ ಗ್ರಾಮದ ಆರ್ಥಿಕಸ್ಥಿತಿಗೂ, ಅಲ್ಲಿರುವ ಸಹಾಯಕ ಸಂಘಕ್ಕೂ ಏನೂ ಸಂಬಂಧ ವಿಲ್ಲವೆಂದೇ ಹೇಳಬಹುದು ಹೀಗಾಗಿ ಚಳವಳಿಯು ಇನ್ನೂ ಹೆಚ್ಚು ವಿಸ್ತರಿಸುವುದಕ್ಕೆ ಅವಕಾಶವಿಲ್ಲವಾಗಿದೆ

ಸಹಕಾರ ಸಂಘಗಳನ್ನು ಅಭಿವೃದ್ಧಿಪಡಿಸಿ, ಅವುಗಳ ಸ್ಥಿತಿಯನ್ನು ಉತ್ತಮಗೊಳಿಸುವುದಕ್ಕೆ ಮುಖ್ಯವಾಗಿ ಎರಡು ಕಾರ್ಯಗಳು ನಡೆಯ ಬೇಕು ಮೊದಲನೆಯದಾಗಿ, ಚಳುವಳಿಯು "ನಮ್ಮ ಅಭಿವೃದ್ಧಿಗೆ ಪ್ರಾರಂಭಿಸಲ್ಪಟ್ಟಿದೆ ಇದರಿಂದ ಆದಷ್ಟು ಪ್ರಯೋಜನವನ್ನು ನಾವು ಹೊಂದಲೇಬೇಕು" ಎಂಬ ಮನೋಭಾವನೆಯು ಪ್ರತಿಯೊಬ್ಬ ರೈತನಿಗೂ

ಉಂಟಾಗಬೇಕು ಎರಡನೆಯದಾಗಿ, ಈಗ ಸ್ಥಾಪಿಸಲ್ಪಟ್ಟಿರುವ ಸಂಘಗಳಲ್ಲಿರತಕ್ಕ ಕುಂದುಕೊರತೆಗಳು ತಕ್ಷಣ ಪರಿಹರಿಸಲ್ಪಡಬೇಕು ಇದಕ್ಕೆ ಅನುಕೂಲವಾದ ಕಡೆಗಳಲ್ಲೆಲ್ಲಾ ಮಾದರಿ ಸಂಘಗಳನ್ನು ಸ್ಥಾಪಿಸಬೇಕು ಇಂತಹ ಸಂಘಗಳು ರೈತರ ವ್ಯವಸಾಯಕ್ರಮವನ್ನು ಉತ್ತಮಪಡಿಸುವುದಕ್ಕೂ, ಅವರ ಪದಾರ್ಥಗಳ ವ್ಯಾಪಾರಕ್ರಮವನ್ನು ಸರಿಪಡಿಸುವುದಕ್ಕೂ, ಅವರ ಜೀವನವನ್ನು ನೆಮ್ಮದಿವಡಿಸುವುದಕ್ಕೂ, ಹೆಚ್ಚು ಸಹಾಯವಾಡಿ, ಇತರ ಸಂಘಗಳಿಗೆ ಮಾರ್ಗದರ್ಶಿಗಳಾಗಬೇಕು

ನಮ್ಮ ಗ್ರಾಮಗಳಲ್ಲಿ ರೈತರ ಜೀವನವು ಸಮರ್ಪಕವಾದ ಸ್ಥಿತಿಯಲ್ಲಿ ಇಲ್ಲವೇ ಇಲ್ಲ ರೈತರು ಅಜ್ಞಾನಾಂಧಕಾರದಲ್ಲಿ ಮುಳುಗಿ, ತಮ್ಮ ನೆರೆಹೊರೆಯುವರ ಸಂಗಡ ಕಲೆತು, ಸಾರ್ವಜನಿಕ ಹಿತದಿಂದ ಕೆಲಸಮಾಡಿ ತಾವೂ ಲಾಭ ಹೊಂದಿ, ಇತರರಿಗೂ ಒಳ್ಳೆಯದಾಗುವಂತೆ ಕೆಲಸಮಾಡುವುದಿಲ್ಲ ಅವರಿಗೆ ಅತ್ಯವಶ್ಯಕವಾದ ಕೆರೆಯನ್ನು ಸರಿಪಡಿಸುವುದಕ್ಕಾಗಲಿ, ಗ್ರಾಮದ ರಸ್ತೆಯನ್ನು ಮಾಡುವುದಕ್ಕಾಗಲಿ, ಸಾರ್ವಜನಿಕ ದೇವಸ್ಥಾನ, ಬಾವಿ, ತೋಪು ಮುಂತಾದುವನ್ನು ಸರಿಪಡಿಸುವುದಕ್ಕಾಗಲಿ ಅಥವಾ ತಮಗೆ ಹೆಚ್ಚು ಲಾಭ ಬರುವ ರೀತಿಯಲ್ಲಿ ತಮ್ಮ ಪದಾರ್ಥಗಳನ್ನು ಒಟ್ಟುಗೂಡಿಸಿ ವ್ಯಾಪಾರಮಾಡುವುದಕ್ಕಾಗಲಿ, ಅವರು ಮತ್ತೊಬ್ಬರ ಸಂಗಡ ಸಹಕರಿಸುತ್ತಾ ಇಲ್ಲ ಅವರಲ್ಲಿ ಸ್ವಾರ್ಥತೆ ಹೆಚ್ಚುತ್ತಾ ಇದೆ ಸರ್ಕಾರದವರೇ ತಮ್ಮ ಸ್ಥಿತಿಯನ್ನು ಉತ್ತಮಪಡಿಸಬೇಕೆಂಬ ಭಾವನೆ ಬಲವಾಗುತ್ತಾ ಇದೆ ಈ ವಿಧವಾದ ಪರಿಸ್ಥಿತಿಯಲ್ಲಿ ಅವರ ಜೀವನವು ಸರ್ವತೋಮುಖವಾಗಿ ಉತ್ತಮವಾಗಬೇಕಾದರೆ, ಅವರೆಲ್ಲರೂ ಅನೇಕ ವಿಧವಾದ ಸಹಕಾರ ಸಂಘಗಳಲ್ಲಿ ಸೇರಿ ಕೆಲಸಮಾಡಬೇಕು ಸಹಕಾರ ತತ್ವವನ್ನು ಪ್ರತಿಯೊಬ್ಬ ರೈತರೂ ಆಚರಿಸಬೇಕು

ಭರತಖಂಡದಲ್ಲಿ ಸಣ್ಣ ಸಣ್ಣ ಬಂಡವಾಳಗಾರರೇ ಬಹಳ ಹೆಚ್ಚು ಇತರ ದೇಶಗಳಲ್ಲಿ ಆಚರಣೆಯಲ್ಲಿರುವ ವ್ಯವಸಾಯಾಭಿವೃದ್ಧಿ ಕಾರ್ಯಗಳು, ಆಧುನಿಕ ಅಭಿವೃದ್ಧಿಮಾರ್ಗಗಳು ಯಾವುವೂ ನಮ್ಮ ರೈತರಿಗೆ ತಿಳಿಯುತ್ತಾ ಇಲ್ಲ ನಮ್ಮ ದೇಶದಲ್ಲಿಯೇ ಇರತಕ್ಕ ಸರ್ಕಾರಿ ಪರೀಕ್ಷಾಕ್ಷೇತ್ರಗಳ ಕಾರ್ಯಕಲಾಪಗಳೂ ಕೂಡ, ಒಂದೇ ರೀತಿಯಲ್ಲಿ ಇಲ್ಲ ಆದುದರಿಂದ

ಈ ರೀತಿಯಾದ ಕಾರ್ಯಕ್ರಮಗಳನ್ನು ನಮ್ಮ ಸಹಕಾರ ಸಂಘಗಳು ಕೈಗೊಳ್ಳಬೇಕು (ಜರ್ಮನಿ, ಆಸ್ಟ್ರಿಯ, ಡೆನ್ಮಾರ್ಕ್ ದೇಶಗಳಲ್ಲಿ ರೈತರಿಗೆ ಮುಖ್ಯವಾದ ಗೊಬ್ಬರ, ಬೀಜ, ಯಂತ್ರೋಪಕರಣಗಳನ್ನು ಸಕಾಲದಲ್ಲಿ ಒದಗಿಸುವುದಕ್ಕೆ ಸಹಾಯಕ ಸಂಘಗಳು ಬಹಳ ಚೆನ್ನಾಗಿ ಕೆಲಸ ಮಾಡುತ್ತಿವೆ ಹೀಗೆ ಒಟ್ಟಿಗೆ ಕಲೆತು ಕೆಲಸಮಾಡುವ ಸಂಘಗಳು, ನಮ್ಮ ದೇಶದಲ್ಲಿ ಹೆಚ್ಚಬೇಕು ) "ಅನೇಕ ವಿಧವಾದ ವ್ಯವಸಾಯಾಭಿವೃದ್ಧಿಗೆ ಸಂಬಂಧಪಟ್ಟ ಸಂಘಗಳೂ, ಬೀಜ ಮತ್ತು ಯಂತ್ರೋಪಕರಣಗಳನ್ನು ಒದಗಿಸುವ ಸಂಘಗಳೂ, ಸಾಲಕೊಡುವ ಸಂಘಗಳ ಜೊತೆಯಲ್ಲಿ ಕಲೆತು ಕೆಲಸಮಾಡುವುದು ಬಹಳ ಉತ್ತಮವಾಗಿ ಕಾಣಬರುತ್ತದೆ "* ಎಂಬದಾಗಿ ಮಾಕ್ಲಗನ್ ಸಮಿತಿಯವರು ಸೂಚಿಸಿದ್ದಾರೆ

ಇಟಲಿ ದೇಶದಲ್ಲಿ ಅತ್ಯುತ್ತಮವಾಗಿ ಕೆಲಸಮಾಡುತ್ತಿರುವ ಕೃಷಿಕ್ಷೇತ್ರ ಸಂಘಗಳು, ನಮ್ಮ ದೇಶದ ಸನ್ನಿವೇಶಕ್ಕೆ ತಕ್ಕುದಾಗಿವೆ ಇಟಲಿ ಸರ್ಕಾರದವರು ಜಮೀನುಗಳನ್ನು ಸಾಗುವಳಿಗೆ ಕೊಡುವುದಕ್ಕೂ, ಸಾಗುವಳಿಗೆ ಅನುಕೂಲವಾದ ಯಂತ್ರಸಾಮಗ್ರಿಗಳನ್ನು ಉಚಿತ ರೀತಿಯಲ್ಲಿ ಒದಗಿಸುವುದಕ್ಕೂ ಅನುಕೂಲವಾದ ಸಹಾಯಕ ಸಂಘಗಳನ್ನು ಉತ್ತಮ ರೀತಿಯಲ್ಲಿ ಏರ್ಪಡಿಸಿದ್ದಾರೆ ಅದೇ ರೀತಿಯಲ್ಲಿ ನಮ್ಮ ದೇಶದಲ್ಲಿ ಅಂತಹ ಸಂಘಗಳು ಸ್ಥಾಪಿಸಲ್ಪಡಬೇಕು ನಮ್ಮ ರೈತರ ಪದಾರ್ಥಗಳ ವ್ಯಾಪಾರೋದ್ಯಮಗಳು ಬಹಳ ಹೀನಸ್ಥಿತಿಯಲ್ಲಿವೆ ಪದಾರ್ಥಗಳ ಬೆಲೆಯು ಒಂದೇಸಮನಾಗಿರುವುದಿಲ್ಲ ಸುಗ್ಗಿಯ ಕಾಲದಲ್ಲಿ ಧಾನ್ಯಗಳ ಬೆಲೆಯು ಇಳಿದುಹೋಗಿರುತ್ತದೆ ನಮ್ಮ ರೈತರು ಅನೇಕ ಕಾರಣಗಳಿಂದ, ಅದೇ ಕಾಲದಲ್ಲಿ ತಮ್ಮ ಧಾನ್ಯಗಳನ್ನು ಮಾರಬೇಕಾಗಿರುತ್ತದೆ ಸ್ವಲ್ಪ ಕಾಲ ಕಾಯುವುದಕ್ಕೂ ಅವರಿಗೆ ಅವಕಾಶವಿಲ್ಲ ಆ ಸ್ಥಿತಿಯಲ್ಲಿರುವಾಗ ಸಹಾಯಕ ಸಂಘಗಳು ಅವರ ಸಹಾಯಕ್ಕೆ ಬಂದರೆ, ಅವರ ಸಂಪಾದನೆಯು ಹೆಚ್ಚುವುದಲ್ಲದೆ, ಕಷ್ಟವೂ ಪರಿಹಾರವಾಗುವುದು ಆದುದರಿಂದ ನಮ್ಮ ದೇಶದಲ್ಲಿ ಮಾರಾಟದ ಸಂಘಗಳು ಹೆಚ್ಚಬೇಕು ಬೊಂಬಾಯಿನ ಗಿರಣಿ ಸಂಘಗಳು, ಬಂಗಾಳದ ಸಣಬು ಮತ್ತು ಭತ್ತದ ಸಂಘಗಳು

* "Report of the Maclagan Committee", p 72

ಮತ್ತು ಪಂಜಾಬು ದೇಶದ ಗೋಧಿ ಸಂಘಗಳು ಚೆನ್ನಾಗಿ ಕೆಲಸಮಾಡಿದರೆ, ಅನೇಕ ರೈತರಿಗೆ ಸಹಾಯವಾಗುವುದು ಅದೇ ರೀತಿಯ ಸಂಘಗಳು ಎಲ್ಲಾ ಪ್ರಾಂತಗಳಲ್ಲಿಯೂ ಸ್ಥಾಪಿಸಲ್ಪಡಬೇಕು ಐರ್ಲೆಂಡ್ ದೇಶದ ವ್ಯವಸಾಯಕ್ರಮದಲ್ಲಿ ಅಲ್ಲಿಯ ವ್ಯವಸಾಯ ವ್ಯವಸ್ಥಾ ಸಹಾಯಕ ಸಂಘಗಳು ಹೇಗೆ ಸಂಪೂರ್ಣ ಬದಲಾವಣೆಯನ್ನುಂಟುಮಾಡಿದೆ ಎಂಬುದನ್ನು ನಮ್ಮ ದೇಶದ ಸಹಕಾರತತ್ವಜ್ಞರು ಜ್ಞಾಪಕದಲ್ಲಿಟ್ಟು, ಅಂತಹ ಸಂಘಗಳನ್ನು ನಮ್ಮ ದೇಶದಲ್ಲಿಯೂ ಸ್ಥಾಪಿಸಿ, ಉತ್ತಮ ರೀತಿಯಲ್ಲಿ ಕೆಲಸಮಾಡುವಂತೆ ಏರ್ಪಡಿಸಬೇಕು

ವ್ಯವಸಾಯದ ಶಾಖೆಗಳಾದ ಪಶುಪಾಲನೆ, ಕ್ಷೀರಶಾಲೆ ಮತ್ತು ಯಂತ್ರೋಪಕರಣಗಳನ್ನು ತಯಾರುಮಾಡುವ ಉದ್ಯಮಗಳಲ್ಲಿಯೂ ಕೂಡ ಸಹಕಾರತತ್ವವನ್ನು ಹೆಚ್ಚು ಆಚರಣೆಯಲ್ಲಿ ತರಬೇಕು ಫ್ರಾನ್ಸ್ ದೇಶದಲ್ಲಿರುವ ಅಗ್ರಿಕಲ್‌ಚರಲ್ ಸಿಂಡಿಕೇಟನಂತಹ ಒಂದು ಕೇಂದ್ರ ಸಂಸ್ಥೆಯು ನಮ್ಮ ದೇಶದಲ್ಲಿದ್ದರೆ, ಬಡರೈತರಿಗೆ ಹೆಚ್ಚು ಪ್ರಯೋಜನವಾಗುವುದರಲ್ಲಿ ಸಂದೇಹವಿಲ್ಲ ಬರ್ಮ ಮತ್ತು ಬಂಗಾಳಾ ದೇಶಗಳಲ್ಲಿ ಈ ತರಹಯ ಸಣ್ಣ ಸಣ್ಣ ಒಂದೆರಡು ಸಂಘಗಳು ಕೆಲಸಮಾಡುತ್ತಿವೆ ಇದು ಸಾಲದು ದೇಶದ ಎಲ್ಲಾ ಭಾಗದಲ್ಲಿಯೂ ಇಂತಹ ಸಂಘಗಳು ಬಹಳ ಚುರುಕಿನಿಂದ ಕೆಲಸಮಾಡಬೇಕು

ಒಳ್ಳೆಯ ಸಹಕಾರ ಮಳಿಗೆಗಳ ಅಭಾವವು ನಮ್ಮ ದೇಶದಲ್ಲಿ ವಿಪರೀತವಾಗಿದೆ ಪದಾರ್ಥಗಳನ್ನು ಆದಷ್ಟು ಕಡಿಮೆ ಬೆಲೆಗೆ ಒದಗಿಸತಕ್ಕ ಒಳ್ಳೆಯ ಕೋ-ಆಪರೇಟಿವ್ ಸ್ಟೋರುಗಳ ಆವಶ್ಯಕತೆಯು ನಮ್ಮವರಿಗೆ ಚೆನ್ನಾಗಿ ತಿಳಿದಿಲ್ಲವೆಂದೇ ಹೇಳಬಹುದು ಹೆಚ್ಚು ಜನಸಂಖ್ಯೆಯನ್ನು ವ್ಯಾಪಾರೋದ್ಯಮಗಳಲ್ಲಿ ತಯಾರುಮಾಡುವುದಕ್ಕೂ, ಸಂಘದ ಸದಸ್ಯರಿಗ ಹೆಚ್ಚು ಲಾಭವನ್ನು ಒದಗಿಸುವುದಕ್ಕೂ, ಪದಾರ್ಥಗಳನ್ನು ಸುಲಭ ದರದಲ್ಲಿ ಮಾರುವುದಕ್ಕೂ, ಸ್ಟೋರುಗಳು ಹೆಚ್ಚು ಸಹಾಯಮಾಡುತ್ತವೆ ನಮ್ಮ ದೇಶದಲ್ಲಿ ಇಂತಹ ಸಂಸ್ಥೆಗಳು ಬಹಳ ಕಡಿಮೆ ಇರತಕ್ಕ ಕೆಲವೂ ಕೂಡ ಸರಿಯಾಗಿ ಕೆಲಸಮಾಡುತ್ತಿಲ್ಲ ಅನೇಕ ಸ್ಟೋರುಗಳ ಕಾರ್ಯನಿರ್ವಾಹವು ಬಹಳ ಕೆಟ್ಟುಹೋಗಿದೆ “ ಸಹಕಾರತತ್ವವನ್ನೇ

ಅವುಗಳು ಆಚರಿಸುತ್ತಿಲ್ಲ, ಸದಸ್ಯರು ಅಪ್ರಮಾಣಿಕರಾಗಿದ್ದಾರೆ ಸಾಲದ ವಿಷಯದಲ್ಲಿಯೂ ಕೂಡ, ಸಾಮಾನ್ಯ ಸಹಕಾರ ಸಂಘಗಳಲ್ಲಿರಬಹುದಾದ ಎಲ್ಲಾ ನ್ಯೂನಾತಿರಿಕ್ತಗಳೂ ಇಲ್ಲಿ ಇದ್ದೇ ಇವೆ "* ಎಂಬದಾಗಿ ಬಂಗಾಳಾ ದೇಶದ ಸಹಕಾರ ಶಾಖೆಯ ಅಧಿಕಾರಿಗಳು ಬರೆದಿದ್ದಾರೆ ಇದೇ ಪರಿಸ್ಥಿತಿಯು ಎಲ್ಲಾ ಪ್ರಾಂತಗಳಲ್ಲಿಯೂ ಇದ್ದೇ ಇದೆ ತಿರುವಲ್ಲಿಕ್ಕೇಣಿಯ ಅರ್ಬನ್ ಕೋ-ಆಪರೇಟಿವ್ ಸ್ಟೋರ್ಸ್ ಮತ್ತು ಖಾಲ್ಸಾ ಕಾಲೇಜಿನ ಕೋ-ಆಪರೇಟಿವ್ ಸ್ಟೋರ್ಸನಂತಹ ಸಹಕಾರ ಸಂಸ್ಥೆಗಳು ನಮ್ಮ ದೇಶದ ಎಲ್ಲಾ ಭಾಗಗಳಲ್ಲಿಯೂ ಹೆಚ್ಚಬೇಕು ಇವುಗಳ ಸ್ಥಾಪನೆಯಿಂದ ಸಹಕಾರತತ್ವವು ವಿಸ್ತಾರವಾಗುವುದಲ್ಲದೆ, ನಮ್ಮ ರೈತರಿಗೆ ಹೆಚ್ಚು ಅನುಕೂಲವನ್ನುಂಟುಮಾಡಿದಂತಾಗುತ್ತದೆ

ಸಣ್ಣ ಕೈಗಾರಿಕೆಗಳಿಗೆ ತೌರುಮನೆಯೆಂದು ಪ್ರಸಿದ್ಧವಾದ ದೇಶವು ನಮ್ಮದು ಈ ಕೈಗಾರಿಕೆಗಳಲ್ಲಿ ಕೆಲಸ ಮಾಡುತ್ತಿರುವವರನೇಕರಿಗೆ ಬಂಡವಾಳವಿಲ್ಲ ಬಡತನದಿಂದ ನರಳುತ್ತಿದ್ದಾರೆ ಅನೇಕರು ಸಾಲದ ಹೊರೆಯನ್ನು ಧರಿಸಲಾರದೆ ಕಷ್ಟಪಡುತ್ತಿದ್ದಾರೆ ಈ ಅನಾನುಕೂಲಗಳಿಂದ ಹಲವರು ಕೈಗಾರಿಕೆಯನ್ನೇ ಬಿಟ್ಟುಬಿಡುತ್ತಿದ್ದಾರೆ ಇನ್ನೂ ಕೆಲವು ಕಡೆಗಳಲ್ಲಿ ಈ ಕೈಗಾರಿಕೆಗಳಿಗೆ ಅವಶ್ಯಕವಾದ ಸಾಮಗ್ರಿಗಳು ಸುಲಭದಲ್ಲಿ ಸಿಕ್ಕುತ್ತಾ ಇಲ್ಲ ಇಷ್ಟು ಕಷ್ಟದಿಂದ ತಯಾರಾಗುತ್ತಿರುವ ಪದಾರ್ಥಗಳಿಗೆ ಸರಿಯಾದ ವ್ಯಾಪಾರ ಸೌಕರ್ಯವು ಮೊದಲೇ ಇಲ್ಲ ಹೀಗಿರುವಾಗ ಸುವ್ಯವಸ್ಥಿತವಾದ ಸಹಕಾರ ಸಂಘಗಳು ಕಸಬುದಾರರಿಗೆ ಸಹಾಯ ಒದಗಿಸಿದರೆ ಅವರ ಜೀವನವು ಉತ್ತಮವಾಗುವುದಲ್ಲದೆ, ದೇಶವು ಅಭಿವೃದ್ಧಿಯಾಗುವುದು ಬಂಗಾಳಾ ದೇಶದ ಹೋಂ ಇಂಡಸ್ಟ್ರೀಸ್ ಸಂಘವೂ ಪಂಜಾಬಿನ ಕೇಂದ್ರ ನೇಯ್ಗೆ ಸಹಾಯ ಮಳಿಗೆಯೂ ಉತ್ತಮ ಮಾರ್ಗದರ್ಶಕ ಸಂಸ್ಥೆಗಳಾಗಿವೆ ಅವುಗಳ ಉದಾಹರಣೆಯನ್ನು ಅನುಸರಿಸಿ, ಎಲ್ಲೆಲ್ಲಿ ಸಣ್ಣ ಸಣ್ಣ ಕೈಗಾರಿಕೆಗಳು ಕೆಲಸಮಾಡುತ್ತಿವೆಯೋ ಅಲ್ಲೆಲ್ಲಾ ಕಸಬುದಾರರಿಗೆ ಅನುಕೂಲವಾಗುವಂತೆ ಉತ್ತಮ ಸಹಕಾರ ಸಂಘಗಳು ಸ್ಥಾಪಿಸಲ್ಪಡಬೇಕು

---

* "Report of the Registrar of Co operative Department, Bengal", p 30.

ಈಗಿನ ಪರಿಸ್ಥಿತಿಯ ವಿಮರ್ಶೆಯಿಂದಲೂ, ಸಹಕಾರ ಸಂಘಗಳ ಕಾರ್ಯಕ್ರಮದ ಅನುಭವದಿಂದಲೂ ಮತ್ತು ಅನೇಕ ಕಡೆಗಳಲ್ಲಿ ನಡೆಸುತ್ತಿರುವ ಸಹಕಾರ ಸಂಸ್ಥೆಗಳ ಉದಾಹರಣೆಯಿಂದಲೂ ನಮಗೆ ಒಂದು ಅಂಶವು ಚೆನ್ನಾಗಿ ಮುಂದಟ್ಟಾಗುವುದು ಅದೇನೆಂದರೆ, ಸಾಲ ಕೊಡುವ ಸಂಘಗಳಿಂದಲೇ ರೈತರ ಪುರೋಭಿವೃದ್ಧಿಯಾಗಲಿ ಅಥವಾ ಸುಧಾರಣೆಯಾಗಲಿ ಸರಿಯಾಗಿ ಆಗುವುದಿಲ್ಲ ರೈತರ ಜೀವನವು ಸರ್ವತೋಮುಖವಾಗಿ ಅಭಿವೃದ್ಧಿ ಯಾಗಬೇಕಾದರೆ, ಸಾಲ ಕೊಡುವ ಸಹಕಾರ ಸಂಸ್ಥೆಗಳ ಜೊತೆಗೆ ಸುವ್ಯವಸ್ಥಿತ ಬ್ಯಾಂಕುಗಳೂ, ಒಳ್ಳೆಯ ಅಡೆಮಾನದ ಸಂಘಗಳೂ, ವ್ಯಾಪಾರ ಸಂಸ್ಥೆಗಳೂ ಸ್ಥಾಪಿಸಲ್ಪಟ್ಟು ಒಂದು ವ್ಯವಸ್ಥಿತ ರೀತಿಯಲ್ಲಿ ಕೆಲಸಮಾಡಬೇಕು ಅಮೇರಿಕಾ ದೇಶದಲ್ಲಿಯೂ, ಯೂರೋಪ್ ಖಂಡದ ಕೆಲವು ಮುಖ್ಯ ದೇಶಗಳಲ್ಲಿಯೂ ಸರ್ಕಾರದವರು ಎಲ್ಲಾ ವಿಧವಾದ ಸಹಕಾರ ಸಂಘ ಸ್ಥಾಪನೆಗೆ ಸಹಾಯಮಾಡಿ, ಅವುಗಳು ಚುರುಕಿನಿಂದ ಕೆಲಸಮಾಡುವಂತೆ ಪ್ರೋತ್ಸಾಹ ಕೊಡುತ್ತಿದ್ದಾರೆ ನಮ್ಮ ಪ್ರಾಂತೀಯ ಸರ್ಕಾರಗಳು ಅದೇ ತತ್ವವನ್ನು ಅನುಸರಿಸಿ, ರೈತರ ಆರ್ಥಿಕೋನ್ನತಿಗೆ ಸಹಕಾರ ಸಂಸ್ಥೆಗಳು ಹೆಚ್ಚು ಸಹಾಯಮಾಡುವಂತೆ ಏರ್ಪಡಿಸಬೇಕು

ರೈತರ ಸಾಲದ ಹೊರೆಯನ್ನು ಕಡಿಮೆಮಾಡುವುದಕ್ಕೆ ಅಡಮಾನದ ಸಹಕಾರ ಸಂಘಗಳು ಅತ್ಯವಶ್ಯಕವಾಗಿವೆ ೧೯೨೦ನೆಯ ಇಸವಿಯಲ್ಲಿ ಪಂಜಾಬು ದೇಶದಲ್ಲಿ ಮೊದಲನೆಯ ಅಡಮಾನದ ಸಂಸ್ಥೆಯು ಸ್ಥಾಪಿತವಾಯಿತು ಅನಂತರ ಮದ್ರಾಸಾಧಿಪತ್ಯದಲ್ಲಿ ೧೯೨೫ನೆಯ ಇಸವಿಯಲ್ಲಿ ಪರೀಕ್ಷಾರ್ಥವಾಗಿ ಕೆಲವು ಕಡೆಗಳಲ್ಲಿ ಮಾತ್ರ ಈ ಸಂಘಗಳು ಸ್ಥಾಪಿಸಲ್ಪಟ್ಟವು ಕೇಂದ್ರ ಸರ್ಕಾರದ ಸಹಾಯದಿಂದ ಮದ್ರಾಸಾಧಿಪತ್ಯದಲ್ಲಿ ಈ ಸಂಸ್ಥೆಗಳು ನಡೆಸಿರುವ ಕೆಲಸಗಳು ಶ್ಲಾಘನೀಯವಾಗಿವೆ ಇವುಗಳ ಚುರುಕಾದ ಕಾರ್ಯಕ್ರಮದಿಂದ ಕೆಲವುಕಡೆಗಳಲ್ಲಿ ಕೊಂಚಮಟ್ಟಿಗಾದರೂ ರೈತರ ಸಾಲದ ಕಷ್ಟವು ಪರಿಹಾರವಾಗುತ್ತಿದೆ ಅಡಮಾನದ ಸಹಕಾರ ಸಂಸ್ಥೆಗಳು ಹೆಚ್ಚಿದಹಾಗೆಲ್ಲಾ, ರೈತರನ್ನು ಕಿತ್ತುತಿನ್ನುತ್ತಿರುವ ಬಡ್ಡಿಯ ದರವೂ, ಅವರ ಹೆಚ್ಚಿನ ಸಾಲದ ಭಾರವೂ, ಕಡಿಮೆಯಾಗುವುದರಲ್ಲಿ

ಸಂದೇಹವಿಲ್ಲ ನಮ್ಮ ರೈತರ ಅಪಾರ ಸಾಲದ ಕಷ್ಟವು ಪರಿಹಾರ ವಾಗಬೇಕಾದರೆ, ಅವರ ಜಮೀನು ಆಬಾದಾಗಿ ಹೆಚ್ಚು ವರಮಾನ ಬರಬೇಕಾದರೆ, ಅಡಮಾನದ ಬ್ಯಾಂಕುಗಳ ಕಾರ್ಯಕ್ರಮವು ವಿಸ್ತರಿಸಲ್ಪಟ್ಟು ದೇಶದ ಎಲ್ಲಾ ಭಾಗಗಳಲ್ಲಿಯೂ ಉತ್ತಮ ಕೆಲಸ ನೆರವೇರಿಸುವಂತಾಗಬೇಕು ನಮ್ಮ ದೇಶದಲ್ಲಿ ಈಗ ೩೮ ಅಡಮಾನದ ಬ್ಯಾಂಕುಗಳು ೩೨ ಲಕ್ಷ ರೂಪಾಯಿನ ಬಂಡವಾಳದಿಂದ ಕೆಲಸಮಾಡುತ್ತಿವೆ ಎಂಬದಾಗಿ ಗೊತ್ತಾಗಿದೆ ಸಾವಿರಾರು ಕೋಟಿ ರೂಪಾಯಿಗಳ ಸಾಲವೆಲ್ಲಿ? ಈ ಅಲ್ಪ ಬಂಡವಾಳವೆಲ್ಲಿ? ಸಾವಿರಾರು ಅಡಮಾನದ ಬ್ಯಾಂಕುಗಳಾದರೂ ಹೆಚ್ಚು ಬಂಡವಾಳವನ್ನು ಶೇಖರಿಸಿ, ಮುತುವರ್ಜಿಯಿಂದ ಕೆಲಸಮಾಡಿ, ರೈತರಿಗೆ ಸಹಾಯಮಾಡಬೇಕು

ನಮ್ಮ ಗ್ರಾಮಜೀವನದಲ್ಲಿ ಸಮರ್ಪಕವಾದ ಬದಲಾವಣೆಯುಂಟಾಗಿ ಹೆಚ್ಚು ಅಭಿವೃದ್ಧಿಯಾಗಬೇಕಾದರೆ, ಪರಸ್ಪರ ಸಹಾಯಕ ಸಂಘಗಳ ಸಹಾಯವು ಅತ್ಯವಶ್ಯಕವೆಂಬುದರಲ್ಲಿ ಸಂದೇಹವಿಲ್ಲ ಇಟಲಿ, ಡೆನ್ಮಾರ್ಕ್, ಐರ್ಲೆಂಡ್ ದೇಶಗಳಲ್ಲಿ ಸಾಲದ ಸಂಘಗಳಿಗಿಂತ ಇತರ ವಿಧವಾದ ಸಹಕಾರ ಸಂಘಗಳ ಸಂಖ್ಯೆಯೇ ಹೆಚ್ಚಾಗಿವೆ ಅದೇ ರೀತಿಯಲ್ಲಿ ನಮ್ಮ ದೇಶದಲ್ಲಿಯೂ ಸೇಲ್ ಸೊಸೈಟಿಗಳು, ಸ್ಟೋರುಗಳು, ಅಡಮಾನದ ಸಂಘಗಳು, ಇನ್ನೂ ಇತರ ಸಹಕಾರ ಸಂಘಗಳು ಹೆಚ್ಚು ಹೆಚ್ಚು ಮುತುವರ್ಜಿಯಿಂದ ಕಲಸಮಾಡಿದರೆ ದೇಶಾಭಿವೃದ್ಧಿಯಾಗುವುದರಲ್ಲಿ ಸಂದೇಹವಿಲ್ಲ ಗ್ರಾಮದ ಜಮೀನು ತಾಕುಗಳಿಗೆ ಸಂಬಂಧಪಟ್ಟ ಸಹಕಾರ ಸಂಘಗಳ ಅಭಾವವು ಇಲ್ಲಿಯ ಇನ್ನೊಂದು ಕೊರತೆಯಾಗಿದೆ ನಮ್ಮ ರೈತರ ಜಮೀನು ತಾಕುಗಳು ಅತಿ ಚಿಕ್ಕದಾಗುತ್ತಾ ಬಂದು, ಗ್ರಾಮದ ಅನೇಕ ಕಡೆಗಳಲ್ಲಿ ಚದುರಿ ಹೋಗುತ್ತಾ ಬಂದು ವ್ಯವಸಾಯಾಭಿವೃದ್ಧಿಗ ಎಷ್ಟು ತೊಂದರೆಯಾಗುತ್ತಾ ಇದೆ, ಎಂಬುದನ್ನು ಹಿಂದೆಯೇ ಚರ್ಚಿಸಲಾಗಿದೆ ಈ ವಿಧವಾದ ಕಷ್ಟ ಪರಿಹಾರಕ್ಕಾಗಿ ತಾಕುಗಳನ್ನು ಒಟ್ಟುಗೂಡಿಸುವ ಸಹಕಾರ ಸಂಘಗಳು ಅತ್ಯವಶ್ಯಕವಾಗಿವೆ ಪಂಜಾಬು ದೇಶದ ತಾಕು ಸಂಯೋಜನಾ ಸಹಕಾರ ಸಂಘಗಳ ಮಾದರಿಯನ್ನನುಸರಿಸಿ, ಎಲ್ಲಾ ಪ್ರಾಂತಗಳಲ್ಲಿಯೂ ಅಂತಹ ಸಂಘಗಳು ಬಹಳ ಚುರುಕಿನಿಂದ ಕೆಲಸಮಾಡುವಂತಾಗಬೇಕು

ಕೆಲವು ಪಾಶ್ಚಾತ್ಯ ದೇಶಗಳಲ್ಲಿ ವೈದ್ಯಸಹಾಯವನ್ನು ಒದಗಿಸುವ ಉದ್ದೇಶದಿಂದ ಪರಸ್ಪರ ಸಹಾಯಕ ಸಂಘಗಳನ್ನು ಸ್ಥಾಪಿಸಿದ್ದಾರೆ ಯೂರೋಪ್ ಖಂಡದ ಯುಗೋಸ್ಲೇವಿಯಾ ದೇಶದ ಹಳ್ಳಿಗಳಲ್ಲಿ ೧೨,೦೦೦ ಮಂದಿಗೆ ಒಬ್ಬ ವೈದ್ಯನಂತೆ ಕೂಡ ಇರಲಿಲ್ಲ ಇದಕ್ಕಾಗಿ ೧೯೨೧ನೆಯ ಇಸವಿಯಲ್ಲಿ 'ಹೆಲ್ತ್ ಸೊಸೈಟಿ'ಗಳೆಂಬ ಪರಸ್ಪರ ಸಹಾಯಕ ಸಂಘಗಳು ಸ್ಥಾಪಿಸಲ್ಪಟ್ಟವು ಈ ಸಂಸ್ಥೆಗಳು 'ಹೆಲ್ತ್ ಫಂಡ್' ಎಂಬ ಬಂಡವಾಳವನ್ನು ಶೇಖರಿಸಿ, ಆಸ್ಪತ್ರೆಗಳನ್ನು ಸ್ಥಾಪಿಸಿ, ಅಲ್ಲಲ್ಲೇ ವೈದ್ಯರನ್ನು ನೇಮಕಮಾಡಿ, ಗ್ರಾಮಗಳಲ್ಲಿ ರೈತರಿಗೆ ಸಹಾಯಮಾಡುವಂತೆ ಏರ್ಪಡಿಸಿದ್ದಾರೆ ೧೯೩೪ನೆಯ ಇಸವಿಯ ಹೊತ್ತಿಗೆ ಅನೇಕ ಆಸ್ಪತ್ರೆಗಳಲ್ಲಿ ವೈದ್ಯರು ಬಹು ಶ್ರದ್ಧೆಯಿಂದಲೂ ಶಿಸ್ತಿನಿಂದಲೂ ಕೆಲಸಮಾಡಿ, ವೈದ್ಯಸಹಾಯವನ್ನು ಒದಗಿಸುತ್ತಿದ್ದರು * ಅದೇ ರೀತಿಯಲ್ಲಿ ಜಪಾನ್ ದೇಶದಲ್ಲಿಯೂ ಕೂಡ ೪೩ ಆಸ್ಪತ್ರೆಗಳಲ್ಲಿ ೧೩೮ ಜನ ವೈದ್ಯರು ಬಹು ಶ್ರದ್ಧೆಯಿಂದ ೩,೬೬,೮೦೨ ಬಡಸಂಸಾರಗಳಿಗೆ ವೈದ್ಯಸಹಾಯವನ್ನು ಬಹಳ ಸ್ವಲ್ಪ ಕಾಲದಲ್ಲಿ ಮಾಡಿವೆ † ನಮ್ಮ ದೇಶದಲ್ಲಿರುವ ಗ್ರಾಮಗಳಲ್ಲಿ ವೈದ್ಯಸಹಾಯವು ಕಡಿಮೆ ಮೇಲ್ಕಂಡ ವೈದ್ಯ ಸಂಘಗಳು ಇಲ್ಲಿ ಇಲ್ಲವೆಂದೇ ಹೇಳಬಹುದು ಇಂತಹ ಸಂಘಗಳು ಇಲ್ಲಿಯೂ ಸ್ಥಾಪಿಸಲ್ಪಟ್ಟರೆ ಬಡಜನರಿಗೆ ಹೆಚ್ಚು ಸಹಾಯವಾಗುವುದಲ್ಲದೆ, ಅನೇಕ ವಿಧವಾದ ವ್ಯಾಧಿಗಳಿಂದ ನರಳುತ್ತಿರುವ ಹಳ್ಳಿಯ ಜನಗಳ ಸಂಖ್ಯೆಯು ಕಡಿಮೆಯಾಗುವುದರಲ್ಲಿ ಸಂದೇಹವಿಲ್ಲ

ನಮ್ಮ ರೈತರ ನಿತ್ಯಜೀವನದಲ್ಲಿರುವ ಹಲವು ದೋಷಗಳನ್ನು ನಿವಾರಣೆಮಾಡಿ, ಅವರ ಸ್ಥಿತಿಯನ್ನು ಉತ್ತಮಪಡಿಸುವುದಕ್ಕೆ ಕೆಲವು ಸಂಘಗಳು ಸ್ಥಾಪಿಸಲ್ಪಡುತ್ತಿವೆ ಈ ಸಂಘಗಳಿಗೆ 'ಬೆಟರ್ ಲಿವಿಂಗ್ ಸೊಸೈಟಿ'ಗಳೆಂದು ಹೆಸರು ಇವುಗಳು ಪಂಜಾಬು ದೇಶದಲ್ಲಿ ಚೆನ್ನಾಗಿ ಕೆಲಸಮಾಡುತ್ತಿವೆ ಈ ಸಂಸ್ಥೆಗಳು ರೈತರ ದುಂದುವೆಚ್ಚವನ್ನು ಕಡಿಮೆ ಮಾಡಿಸಿ, ರೈತರ ವರಮಾನವನ್ನು ಕಡಿಮೆಮಾಡುತ್ತಿರುವ ಪದ್ಧತಿಗಳನ್ನು

* "International Labour Review", July 1935, Health Co operative Societies in Yugoslavia

† "Indian Co operative Review", Vol 1, No 4, p 566

ಬದಲಾಯಿಸಿ, ಸಂಘದ ಸದಸ್ಯರ ಮಕ್ಕಳಿಗೆ ಉಚಿತ ವಿದ್ಯಾಭ್ಯಾಸವನ್ನು ಏರ್ಪಡಿಸಿ, ರೈತರು ತಮ್ಮ ಮನೆಗಳನ್ನೂ, ಗ್ರಾಮವನ್ನೂ ಚೊಕ್ಕಟವಾಗಿ ಇಟ್ಟುಕೊಳ್ಳುವಂತೆ ಮಾಡುತ್ತಿವೆ ಈ ಸಂಘಗಳು ತಮ್ಮಲ್ಲಿಯೇ ಕೆಲವು ಉಪನಿಬಂಧನೆಗಳನ್ನು ಮಾಡಿಕೊಂಡು, ಅವುಗಳನ್ನು ಮೊದಲು ಸದಸ್ಯರ ಮೇಲೆ ಪ್ರಯೋಗಿಸಿ ಗ್ರಾಮದ ಆರೋಗ್ಯವನ್ನೂ ಜೀವನವನ್ನೂ ಉತ್ತಮ ಪಡಿಸಲು ಪ್ರಯತ್ನಿಸುತ್ತಿವೆ ಸಮಾಜಸೇವೆಯೇ ಇವುಗಳ ಮುಖ್ಯ ಧ್ಯೇಯವೆಂದು ಹೇಳಬಹುದು ೧೯೩೧ನೆಯ ಇಸವಿಯಲ್ಲಿ ಪಂಜಾಬು ದೇಶದಲ್ಲಿ ೩೫೯ ಇಂತಹ ಸಂಘಗಳಿದ್ದುವೆಂದೂ, ಗ್ರಾಮಗಳಲ್ಲಿ ರೈತರ ದುಂದುವೆಚ್ಚವು ಸುಮಾರು ಶೇ ೫೦ರಿಂದ ೭೫ರವರೆಗೆ ಕಡಿಮೆಮಾಡಲು ಈ ಸಂಘಗಳು ಸಹಾಯಮಾಡಿವೆ ಎಂದೂ ಡಾರ್ಲಿಂಗ್‌ರವರು ಹೇಳಿದ್ದಾರೆ * ಇಂಡಿಯಾ ದೇಶದಂತಹ ವಿಸ್ತಾರವಾದ ದೇಶದಲ್ಲಿ ಅಧಿಕಾರಿಗಳೇ ಪ್ರಚಾರಕಾರ್ಯ ನಡೆಸುವುದು ಕಷ್ಟ ಆಯಾ ಸ್ಥಳಕ್ಕೆ ಅನುಕೂಲವಾಗುವಂತೆ ಅಲ್ಲಿಯ ವಿದ್ಯಮಾನಗಳಿಗೆ ತಕ್ಕಂತೆ ಈ ವಿಧವಾದ ಸಾವಿರಾರು ಸಂಘಗಳು ದೇಶದ ಅನೇಕ ಭಾಗಗಳಲ್ಲಿ ಹೆಚ್ಚು ಪ್ರಚಾರ ಕಾರ್ಯ ನಡೆಸಿದರೆ, ರೈತರ ಜೀವನವು ಉತ್ತಮಗೊಳ್ಳುವುದರಲ್ಲಿ ಸಂದೇಹವಿಲ್ಲ

ನಮ್ಮ ರೈತರಿಗೆ ವ್ಯಾಜ್ಯ ವ್ಯವಹಾರಗಳನ್ನು ನಡೆಸುವುದರಲ್ಲಿ ಬಹಳ ಆಶೆ ಇದು ಅವರಲ್ಲಿ ರಕ್ತಗತವಾಗಿಹೋಗಿದೆ ಯಾವ ಗ್ರಾಮದಲ್ಲಿ ನೋಡಿ ದರೂ ಭಾಗ ವಿಭಾಗಗಳು, ದ್ವೇಷಾಸೂಯೆಗಳು ತುಂಬಿವೆ ಒಂದು ಸಣ್ಣ ವಿಷಯಕ್ಕಾದರೂ ಸರಿಯೆ ಜಗಳಗಳನ್ನು ಮಾಡಿ, ಕೋರ್ಟು ಕಛೇರಿಗಳಿಗೆ ಅಲೆದು, ದುಡ್ಡು ಖರ್ಚುಮಾಡಿ ಹಾಳಾಗುತ್ತಿದ್ದಾರೆ ಈ ವಿಧವಾದ ವ್ಯಾಜ್ಯಕೂಪದಲ್ಲಿ ಮುಳುಗಿ ಕಷ್ಟಪಡುತ್ತಿರುವ ರೈತರಿಗೆ ಸಹಾಯ ಮಾಡುವುದಕ್ಕೋಸ್ಕರ ಮು॥ ಸ್ಟ್ರಿಕ್‌ಲೆಂಡ್ ಮತ್ತು ಮು॥ ಡಾರ್ಲಿಂಗ್‌ರವರು ಕೆಲವು ಪರಸ್ಪರ ಸಹಾಯಕ ಸಂಘಗಳನ್ನು ಸ್ಥಾಪಿಸಿ, ಅವುಗಳ ಮೂಲಕ ವ್ಯಾಜ್ಯ ತೀರ್ಮಾನಮಾಡಿ, ಜನಗಳಲ್ಲಿ ಒಳ್ಳೆಯ ಬುದ್ಧಿಯನ್ನು ಹುಟ್ಟಿಸು ವುದಕ್ಕೆ ಸಹಾಯಮಾಡಿದ್ದಾರೆ ೧೯೩೧ನೆಯ ಇಸವಿಯಲ್ಲಿ ೮,೦೦೦

* "Punjab Peasant in Prosperity and Debt", by Mr M L Darling, pp 252–254

ಸದಸ್ಯರಿಂದ ಕೂಡಿದ ೫೪ ಸಂಘಗಳು ಸುಮಾರು ೨,೫೦೦ ವ್ಯಾಜ್ಯಗಳನ್ನು ಪಂಜಾಬು ದೇಶದಲ್ಲಿ ತೀರಿಸಿವೆ ಎಂಬದಾಗಿ ಗೊತ್ತಾಗಿದೆ ಇದೇ ರೀತಿಯಲ್ಲಿ ಇತರ ಪ್ರಾಂತಗಳೂ ಕೂಡ ಇಂತಹ ಸಂಘಗಳ ಮೂಲಕ ಹೆಚ್ಚು ಶ್ರದ್ಧೆವಹಿಸಿ ಕೆಲಸಮಾಡಿದರೆ, ರೈತರ ಬಾಳು ಉತ್ತಮವಾಗುತ್ತದೆ

ಮೈಸೂರು ಸಂಸ್ಥಾನದಲ್ಲಿ ಭರತಖಂಡದ ಇತರ ಪ್ರಾಂತಗಳಲ್ಲಿರುವಂತೆಯೇ ಸಾಲದ ಸಂಘಗಳ ಸಂಖ್ಯೆಯೇ ಹೆಚ್ಚು ಸಂಸ್ಥಾನದ ಒಟ್ಟು ಜನಸಂಖ್ಯೆಯ ಶೇ ೧೧ ಜನರು ಸಹಕಾರ ಚಳವಳಿಯಲ್ಲಿ ಭಾಗಿಗಳಾಗಿದ್ದಾರೆ ಈ ಕೆಳಗಿನ ತಃಖ್ತೆಯು ಸಹಕಾರ ಸಂಘಗಳ ಅಭಿವೃದ್ಧಿಯನ್ನು ತೋರಿಸುತ್ತದೆ —

| ವರ್ಷ | ಸಂಘದ ಸಂಖ್ಯೆ | ಸದಸ್ಯರ ಸಂಖ್ಯೆ | ಒಟ್ಟು ಬಂಡವಾಳ ರೂಪಾಯಿ | ಶೇಖರವಾದ ಹಣ ರೂಪಾಯಿ |
|---|---|---|---|---|
| 1905–06 | 5 | 326 | 14,243 | |
| 1910–11 | 111 | 9,043 | 3,71,194 | 9,549 |
| 1915–16 | 800 | 64,857 | 44,21,688 | 1,59,626 |
| 1920–21 | 1,500 | 92,121 | 78,00,100 | 5,79,435 |
| 1925–26 | 1,603 | 95,292 | 98,65,731 | 15,74,852 |
| 1930–31 | 2,213 | 1,37,615 | 1,89,32,429 | 22,78,352 |
| 1935–36 | 1,998 | 1,44,898 | 2,31,05,200 | 29,73,615 |

ಮೈಸೂರು ಸರ್ಕಾರದ ಉದಾರಾಶ್ರಯದಲ್ಲಿ ಸಹಕಾರತತ್ವವು ವಿಸ್ತಾರವಾಗುತ್ತಿದೆ ಸಂಘಗಳು ಹುಟ್ಟಿ ೩೦ ವರ್ಷದ ಮೇಲಾದರೂ ನಮ್ಮ ರೈತರ ಬಹು ಭಾಗವು, ಅವುಗಳ ಪ್ರಯೋಜನವನ್ನು ಅನುಭವಿಸುತ್ತಾ ಇಲ್ಲ ಜನಗಳಲ್ಲಿ ಸಾಮಾನ್ಯವಾಗಿ, ಸಂಘಗಳ ಕಂತನ್ನು ಸಕಾಲದಲ್ಲಿ ಪಾವತಿ ಮಾಡುವ ಅಭ್ಯಾಸವು ಇನ್ನು ಬಳಕೆಯಲ್ಲಿ ಇಲ್ಲ ಪರಸ್ಪರ ಸಹಾಯಕ ಶಾಖೆಯ ವಾರ್ಷಿಕ ವರದಿಯನ್ನು ನಾವು ವಿಚಾರ ಮಾಡಿದರೆ, ಪರಿಸ್ಥಿತಿಯೆಲ್ಲಾ ಚೆನ್ನಾಗಿ ತಿಳಿಯುವುದು ನಮ್ಮ ರೈತರ ದುಂದುವೆಚ್ಚದ ಅಭ್ಯಾಸವು ಇನ್ನು ಕಡಿಮೆಯಾಗಿಯೇ ಇಲ್ಲ

೧೯೩೧–೩೨ನೆಯ ಇಸವಿಯಲ್ಲಿ ಇಲ್ಲಿಯ ರೈತರ ಒಟ್ಟು ಸಾಲದ ಶೇ ೫೧ರಷ್ಟು ಉತ್ತರಕ್ರಿಯೆ, ಮದುವೆ ಮುಂತಾದ ಲಾಭದಾಯಕ ವಲ್ಲದ ಕೆಲಸಗಳಿಗೆ ವಿನಯೋಗವಾಗಿದೆ ಎಂದು ಗೊತ್ತಾಗುವುದು

ಸಂಸ್ಥಾನದ ರೈತರ ಸಂಪಾದನಾಶಕ್ತಿಯನ್ನು ಉತ್ತಮಪಡಿಸು ವುದಕ್ಕೆ ಶ್ರೀಮನ್ಮಹಾರಾಜಾ ಸರ್ಕಾರದವರು ಅನೇಕ ಪ್ರಯತ್ನಗಳನ್ನು ನಡೆಸುತ್ತಿದ್ದಾರೆ ಅವುಗಳಲ್ಲಿ ಮುಖ್ಯವಾದುವು ವ್ಯವಸಾಯಕ್ರಮ ವನ್ನು ಉತ್ತಮಪಡಿಸುವುದಕ್ಕೆ ಸಹಾಯಕ ಸಂಘಗಳ ಮೂಲಕ ಅನುಕೂಲಗಳನ್ನು ಕಲ್ಪಿಸುವುದು, ಸಣ್ಣ ಸಣ್ಣ ಕೈಗಾರಿಕೆಗಳಿಗೆ ಸಹಾಯಕ ಸಂಘಗಳು ಪದಾರ್ಥಗಳನ್ನು ಒದಗಿಸುವುದಲ್ಲದೆ, ತಯಾರದ ಸಾಮಾನು ಗಳಿಗೆ ಸರಿಯಾದ ಮಾರಾಟಮಾಡಿಸುವುದು ರೈತರಿಗೆ ಅನುಕೂಲ ವಾಗುವಂತೆ, ಜಮಾನು ಬೆಳೆಯಮೇಲೆ ಸಾಲ ಕೊಡುವ ಮತ್ತು ಧಾನ್ಯ ಮಾರಾಟದ ಸಂಘಗಳನ್ನು ಸ್ಥಾಪಿಸಬೇಕೆಂದು ಯೋಚಿಸಲಾಗಿದೆ ಹಾಗೆಯೇ ಮಲೆನಾಡು ರೈತರಿಗೆ ಅನುಕೂಲವಾಗುವಂತೆ ಒಂದು ಅಡಿಕೆ ವ್ಯಾಪಾರದ ಸಹಕಾರ ಕೇಂದ್ರ ಸಂಸ್ಥೆಯನ್ನು ಸ್ಥಾಪಿಸಬೇಕೆಂದು ಪ್ರಯತ್ನಗಳು ನಡೆಯುತ್ತಿವೆ

ಮನೆ ಕಟ್ಟುವುದಕ್ಕೆ ಸಹಾಯಮಾಡುವ ಸಹಕಾರ ಸಂಘಗಳು, ಮೊದಲು ಮೈಸೂರು ದೇಶದಲ್ಲಿ ಪ್ರಾರಂಭಿಸಲ್ಪಟ್ಟವು ಈ ವಿಧವಾದ ಸಂಘಗಳು ೨೫ಕ್ಕಿಂತ ಮೇಲ್ಪಟ್ಟು, ಸಂಸ್ಥಾನದಲ್ಲೆಲ್ಲಾ ಚೆನ್ನಾಗಿ ಕೆಲಸ ಮಾಡುತ್ತಿವೆ ಈ ಸಂಘಗಳಿಗೆ ಹೆಚ್ಚು ಬಂಡವಾಳವನ್ನು ಒದಗಿಸು ವುದಕ್ಕಾಗಿ, ಎಪೆಕ್ಸ್ ಬ್ಯಾಂಕಿನಿಂದ ಕಡಿಮೆ ದರದ ಬಡ್ಡಿಯಮೇಲೆ ಸಾಲ ಕೊಡುವಂತೆ ಏರ್ಪಡಿಸಲಾಗಿದೆ ಬೆಂಗಳೂರು ಪಟ್ಟಣದಲ್ಲಿರುವ ಹೌಸಿಂಗ್ ಸಂಘವು ಮಾದರಿ ಕೆಲಸಗಳನ್ನು ನಡೆಸುತ್ತಾ ಇದೆ ಈ ಸಂಸ್ಥೆಯು ಅನುಕೂಲವಾದ ಮನೆಗಳನ್ನು ಸುಲಭದಲ್ಲಿ ಕಟ್ಟುವುದಕ್ಕೂ ಚರಂಡಿ, ದೀಪ ಮತ್ತು ನೀರಿನ ಸೌಕರ್ಯಗಳನ್ನು ಕಲ್ಪಿಸುವುದಕ್ಕೂ ಹೆಚ್ಚು ಶ್ರದ್ಧೆವಹಿಸಿ ಸಹಾಯಮಾಡುತ್ತಿದೆ ಹಾಗೆಯೇ ಮೈಸೂರು ಲಲಿತಾದ್ರಿ ಪುರ ಸಹಾಯಕ ಸಂಘವೂ, ಗ್ರಾಮ ಪುನರುಜ್ಜೀವನ ಕಾರ್ಯದಲ್ಲಿ ಉತ್ತಮ ಮಾರ್ಗದರ್ಶಕ ಸಂಸ್ಥೆಯಾಗಿದೆ

ಸಂಸ್ಥಾನದ ಸಹಕಾರತತ್ವದ ಕಳೆದ ಮೂವತ್ತು ವರುಷ ಅವಧಿಯಲ್ಲಿ, ಪ್ರಭುತ್ವದವರು ಎರಡುಸಲ, ಸಹಕಾರತತ್ವ ವಿಮರ್ಶನಾ ಸಮಿತಿಗಳನ್ನು ಏರ್ಪಡಿಸಿದ್ದರು ಈ ಸಮಿತಿಗಳ ಸೂಚನೆಯನ್ನು ಅನುಸರಿಸಿ, ಸರ್ಕಾರದವರು ಸಹಕಾರತತ್ವ ವಿಸ್ತಾರಕ್ಕೆ ಅನುಕೂಲವಾದ ಕಾರ್ಯಕ್ರಮಗಳನ್ನು ಆಚರಿಸುತ್ತಿದ್ದಾರೆ ಅಧಿಕಾರಿಗಳೂ, ಅನಧಿಕಾರಿಗಳೂ, ಆದರ್ಶ ರೀತಿಯಲ್ಲಿ ದೇಶದ ಹಿತದೃಷ್ಟಿಯಿಂದ ಸಹಕಾರಾಭಿವೃದ್ಧಿಗೆ ದುಡಿಯುತ್ತಿದ್ದಾರೆ ಎಷ್ಟೇ ಆರ್ಥಿಕ ಮುಗ್ಗಟ್ಟಿದ್ದರೂ ಕೂಡ ಸಹಕಾರತತ್ವ ವಿಸ್ತಾರಕ್ಕೆ, ಸರ್ಕಾರದವರು ಹೆಚ್ಚು ಬೆಂಬಲವೀಯಬೇಕೆಂಬುದಾಗಿ ಆಳುವ ಮಹಾಸ್ವಾಮಿಯವರೂ, ಅವರ ಸಚಿವಶ್ರೇಷ್ಠರೂ ಅನೇಕವೇಳೆ ಅಪ್ಪಣೆ ಕೊಟ್ಟಿದ್ದಾರೆ ಒಟ್ಟಿನಲ್ಲಿ ಮೈಸೂರು ಸಂಸ್ಥಾನದ ಸಹಕಾರ ಸಂಘಗಳು, ಸರ್ಕಾರದ ಉದಾರಾಶ್ರಯದಲ್ಲಿ ಸಾರ್ವಜನಿಕ ಉತ್ತೇಜನದಿಂದ ಇನ್ನೂ ಹೆಚ್ಚಿನ ಅಭಿವೃದ್ಧಿ ಕಾರ್ಯಗಳನ್ನು ನಡೆಸಿ ಇಡೀ ಭಾರತಕ್ಕೆ ಮಾದರಿ ಸಂಸ್ಥೆಗಳಾಗುವುದರಲ್ಲಿ ಸಂದೇಹವಿಲ್ಲ

ಭರತಖಂಡದಲ್ಲಿ ಕಳೆದ ನಾಲ್ಕು ವರುಷಗಳಿಂದ ಸಹಕಾರ ಚಳವಳಿಗೆ ಕಷ್ಟವು ಪ್ರಾಪ್ತವಾಗುತ್ತಾ ಇದೆ ಇದಕ್ಕೆ ಅನೇಕ ಕಾರಣಗಳಿವೆ ರೈತರ ಸಾಲವು ಹೆಚ್ಚುತ್ತಿರುವುದು, ಧಾನ್ಯಗಳ ಬೆಲೆಯು ಇಳಿಯುತ್ತಿರುವುದು, ಮುಖ್ಯವಾದುವುಗಳೆಂದು ಹೇಳಬಹುದು ಈ ಕಷ್ಟಪರಿಹಾರಗಳಿಗೋಸ್ಕರ ನಿವಾರಕ ಮತ್ತು ನಿರ್ಮಾಣಕವೆಂಬ ಎರಡು ಬಗೆಯ ಉಪಾಯಗಳನ್ನು ಆಚರಿಸಬೇಕು ನಿವಾರಕೋಪಾಯಗಳಿಂದ, ರೈತರ ದುಂದುವೆಚ್ಚವನ್ನೂ ಲಾಭದಾಯಕವಲ್ಲದ ಉದ್ಯಮಗಳಿಗೆ ವ್ಯರ್ಥವಾಗಿ ವೆಚ್ಚಮಾಡುವ ಅಭ್ಯಾಸವನ್ನೂ ಮತ್ತು ಸಾಲಮಾಡುವ ಅಭ್ಯಾಸವನ್ನೂ ಸಾಧ್ಯವಾದ ಮಟ್ಟಿಗೆ ಕಡಿಮೆಮಾಡುವಂತೆ ಮಾಡಬಹುದು. ನಿರ್ಮಾಣಕೋಪಾಯಗಳಿಂದ ವ್ಯವಸಾಯಕ್ರಮಕ್ಕೂ, ಸಣ್ಣ ಕೈಗಾರಿಕೆಗಳಿಗೂ, ಪದಾರ್ಥಗಳ ಮಾರಾಟಕ್ಕೂ ಸಹಕಾರ ಸಂಘಗಳಿಂದ ಹೆಚ್ಚು ಪ್ರಯೋಜನವಾಗುವಂತೆ ಮಾಡಬಹುದು ಅಂತೂ ನಮ್ಮ ರೈತರ ಆರ್ಥಿಕ ಪುನರುಜ್ಜೀವನವಾಗಬೇಕಾದರೆ ಸಹಕಾರ ಸಂಘಗಳ ಸಹಾಯವು ಅಪರಿಮಿತವಾಗಿ ಆಗಬೇಕು. ಆದುದರಿಂದ ದೇಶದ ಆರ್ಥಿಕೋನ್ನತಿಯು ಸಹಕಾರತತ್ವದ ವಿಸ್ತಾರವನ್ನೂ,

ಸಹಕಾರ ಸಂಘಗಳ ಏಳಿಗೆಯನ್ನೂ, ಮುಖ್ಯವಾಗಿ ಆಶ್ರಯಿಸಿದೆ ಎಂದು ಧಾರಾಳವಾಗಿ ಹೇಳಬಹುದು

ನಮ್ಮ ದೇಶದಲ್ಲಿರುವ ಕೆಲವು ಸಹಕಾರ ವಿದ್ಯಾಲಯಗಳು ಉಪನ್ಯಾಸದಿಂದಲೂ, ಸಹಕಾರ ತರಗತಿಗಳನ್ನು ಏರ್ಪಡಿಸುವುದರಿಂದಲೂ, ಪತ್ರಿಕಾ ಪ್ರಚಾರ ಮತ್ತು ಪುಸ್ತಕಗಳನ್ನು ಹಂಚುವುದರಿಂದಲೂ, ಸಹಕಾರ ಪ್ರಚಾರಕಾರ್ಯ ನಡೆಸುತ್ತಾ ಇವೆ ಆದರೆ ಇವುಗಳ ಕಾರ್ಯಕ್ರಮವು ಒಂದೇ ರೀತಿಯಾಗಿಲ್ಲ ಅವಿದ್ಯಾವಂತರೂ ಅಜ್ಞಾನಿಗಳೂ ಹೆಚ್ಚಾಗಿರುವ ನಮ್ಮ ದೇಶದಲ್ಲಿ ಇಂತಹ ಪ್ರಚಾರಕಾರ್ಯವು ಒಂದು ಶಿಸ್ತಿನಿಂದಲೂ, ಒಂದು ವಿಧವಾದ ಶ್ರದ್ಧೆಯಿಂದಲೂ ಒಂದೇ ರೀತಿಯಾಗಿ ನಡೆಸಲ್ಪಡಬೇಕು ನಮ್ಮ ಸಹಕಾರಿಗಳು ಭೇದಭಾವನೆಯನ್ನೆಲ್ಲಾ ಬಿಟ್ಟು ಸ್ವಾವಲಂಬನೆ ಮತ್ತು ಸ್ವಯಂ ಭರವಸೆಯಿಂದ ವಿಸ್ತಾರ ಪ್ರಚಾರಕಾರ್ಯ ನಡೆಯಿಸಿದರೆ, ಗ್ರಾಮ ಪುನರುಜ್ಜೀವನಕ್ಕೆ ಹೆಚ್ಚು ಸಹಾಯವಾಗುವುದಲ್ಲದೆ, ಸಹಕಾರತತ್ವವನ್ನು ಜನಗಳಿಗೆ ಚೆನ್ನಾಗಿ ತಿಳಿಸಿದಂತಾಗುತ್ತೆ

''ಪರಸ್ಪರ ಸಹಾಯಕ ಸಂಘಗಳು ಗ್ರಾಮಜೀವನಕ್ಕೆ ಸಂಬಂಧಪಟ್ಟ ಎಲ್ಲಾ ಉದ್ಯಮಗಳಲ್ಲಿಯೂ ನೆರವಾಗುತ್ತಿವೆ'' ಎಂಬ ತತ್ವವನ್ನು ಅನೇಕದೇಶಗಳ ಉದಾಹರಣೆಯಿಂದ ನಾವು ನಿರ್ಧರಿಸಬಹುದು ಇತರ ದೇಶಗಳಂತೆ ಇಲ್ಲಿ ಸಹಕಾರತತ್ವವು ವಿಸ್ತಾರವಾಗಿಲ್ಲ ಇದಕ್ಕೆ ರೈತರ ಅವಿದ್ಯೆಯೂ ಬಡತನವೂ ಮುಖ್ಯ ಕಾರಣಗಳಾಗಿವೆ ನಿಸ್ಪೃಹತೆಯಿಂದ ಕೆಲಸಮಾಡುವವರು ಹೆಚ್ಚಾಗಿಲ್ಲದೆ, ಸ್ವಾರ್ಥಕ್ಕಾಗಿಯೇ ಸಂಘಗಳನ್ನು ಉಪಯೋಗಿಸಿಕೊಳ್ಳುತ್ತಿರುವುದು ನಮ್ಮಲ್ಲಿ ಹೆಚ್ಚುತ್ತಿದೆ ಇದೆಲ್ಲಾ ತಪ್ಪಬೇಕಾದರೆ ವಿದ್ಯಾಪ್ರಚಾರವೂ, ಸಹಕಾರತತ್ವ ವಿಸ್ತಾರವೂ ಚೆನ್ನಾಗಿ ನಡೆಯಬೇಕು ಡೆನ್ಮಾರ್ಕ್ ದೇಶದ ಹಳ್ಳಿಗಳಲ್ಲಿರುವ ಹತ್ತಾರು ಸಹಕಾರ ಸಂಘಗಳಿಂದ ಅಲ್ಲಿಯ ಪ್ರತಿಯೊಬ್ಬ ರೈತನೂ ಸಹಾಯ ಹೊಂದುತ್ತಿರುವಂತೆ, ಇಲ್ಲಿಯೂ ಎಲ್ಲಾ ವಿಧ ಸಹಕಾರ ಸಂಘಗಳ ಸ್ಥಾಪನೆಯಿಂದ ನಮ್ಮ ರೈತರು ಸಹಾಯಹೊಂದುವಂತೆ ಏರ್ಪಡಿಸಬೇಕು ''ಪರಸ್ಪರ ಸಹಾಯಕ ಸಂಘಗಳಿಂದ ರೈತರ ಉದ್ಧಾರವಾಗದಿದ್ದರೆ, ಅವರ ಉದ್ಧಾರದ

ಆಶೆಯನ್ನೇ ನಾವು ತೊರೆದುಬಿಡಬಹುದು"* ಎಂಬ ಲಿಂಲಿತ್ಗೊ ಸಮಿತಿಯವರ ಅಮೃತವಾಕ್ಯವನ್ನು ನಾವು ಮನನಮಾಡಬೇಕು ಪ್ರಯೋಜನವಾದ ಸೇವೆಯೇ ಮುಖ್ಯ ಧ್ಯೇಯವಾಗುಳ್ಳ ಉತ್ತಮ ಸಹಕಾರಿಯು ಸಾವಿರಾರು ಬಡಜನರ ಕೃತಜ್ಞತೆಗೆ ಪಾತ್ರನಾಗುವುದಲ್ಲದೆ ತನ್ನ ಅಂತಃಕರಣಪೂರ್ವಕವಾಗಿ ಮಾಡಿದ ಕೆಲಸಕ್ಕಾಗಿ ಪರಮಾತ್ಮನ ಅನುಗ್ರಹಕ್ಕೂ ಪಾತ್ರನಾಗುವನೆಂಬುದನ್ನು ನಾವು ಯಾವಾಗಲೂ ಜ್ಞಾಪಕದಲ್ಲಿಡಬೇಕು

---

* "Royal Commission Report on Agriculture", p 450

# ೧೦. ಗ್ರಾಮ ಪಂಚಾಯಿತಿಗಳು

ಪೂರ್ವದಿಂದಲೂ ಭರತಖಂಡದಲ್ಲಿ ರೈತರು ತಮ್ಮ ಅಭಿವೃದ್ಧಿ ಕಾರ್ಯಗಳನ್ನು ತಾವೇ ನಡೆಸಿಕೊಳ್ಳುತ್ತಿದ್ದರು ಹಳ್ಳಿಯ ವ್ಯವಹಾರಗಳನ್ನು ತೀರ್ಮಾನಿಸುವುದಕ್ಕೂ ಮತ್ತು ಪ್ರಯೋಜನವಾದ ಕಾರ್ಯಕ್ರಮಗಳನ್ನು ಕೈಗೊಳ್ಳುವುದಕ್ಕೂ ಒಂದು ಬಗೆಯ ಸಂಸ್ಥೆಗಳಿದ್ದವು. ಭರತಖಂಡದ ಹಳ್ಳಿಗಳೇ ಬಹು ಕಾಲದಿಂದ ಸಮಾಜದ ಅಡಿಪಾಯಗಳಾಗಿವೆ ಆದರೆ ಕೆಲವು ಹಿಂದು ಮತ್ತು ಬೌದ್ಧ ಮಹಾರಾಜರುಗಳು ಬಹು ದೂರ ಪ್ರದೇಶದಲ್ಲಿದ್ದ ಹಳ್ಳಿಗಳನ್ನು ಸ್ವತಃ ತಾವೇ ಆಳುವುದಕ್ಕೆ ಆಗದೆ ಪ್ರಯಾಣದ ಅಸೌಕರ್ಯ, ರಸ್ತೆಗಳ ಅಭಾವ, ಇವುಗಳಿಂದ ಕಷ್ಟಪಡುತ್ತಿದ್ದರು ಹಳ್ಳಿಗಳಲ್ಲಿ ಪ್ರತಿನಿಧಿ ಸಭೆಗಳಿದ್ದುದರಿಂದ, ಇವುಗಳು ತಮ್ಮ ಜವಾಬ್ದಾರಿಯಮೇಲೆ ಹಳ್ಳಿಯ ಆಡಳಿತ ಕೆಲಸಗಳನ್ನು ನಡೆಸುತ್ತಿದ್ದುವು ಈ ಸಮಿತಿಗಳನ್ನು ಪಂಚಾಯಿತಿಗಳೆಂದು ಕರೆಯುತ್ತಿದ್ದರು ಈ ಪಂಚಾಯಿತಿಗಳು ಹಳ್ಳಿಯ ಉದ್ಯೋಗಸ್ಥರನ್ನು ಹತೋಟಿಯಲ್ಲಿಟ್ಟುಕೊಂಡು, ಹಳ್ಳಿಯ ವ್ಯವಹಾರಗಳನ್ನೂ ಇತರ ವಿಷಯಗಳನ್ನೂ ಹಿಂದಿನ ಸಂಪ್ರದಾಯಕ್ಕೆ ಅನುಸಾರವಾಗಿ ತೀರ್ಮಾನಿಸುತ್ತಿದ್ದವು

ಗ್ರಾಮ ಪಂಚಾಯಿತಿಗಳು ನಮ್ಮ ಹಳ್ಳಿಗಳ ಅಭಿವೃದ್ಧಿಗೂ, ಸಂಸ್ಕೃತಿಯ ರಕ್ಷಣೆಗೂ ಬಹಳ ಸಹಾಯಮಾಡುತ್ತಿದ್ದುವು ಆಗಿನ ಹಳ್ಳಿಗಳಿಗೆ ಬಾಹ್ಯಪ್ರಪಂಚದ ಸಂಪರ್ಕವೇ ಇರುತ್ತಿರಲಿಲ್ಲ ಆದರೆ ರೈತಾಭಿವೃದ್ಧಿ ಮತ್ತು ಹಳ್ಳಿಗಳ ಆಡಳಿತ ಕೆಲಸಗಳೆಲ್ಲಾ ಹಳ್ಳಿಯವರ ಕೈಯಲ್ಲೇ ಇದ್ದುವು ಈಗ್ಗೆ ಸುಮಾರು ಒಂದು ನೂರು ವರ್ಷಗಳ ಹಿಂದೆ ಇಂಡಿಯಾ ದೇಶದಲ್ಲಿದ್ದ ಗ್ರಾಮ ಪಂಚಾಯಿತಿಗಳ ವಿಷಯವಾಗಿ, ಒಬ್ಬ ಪ್ರಸಿದ್ಧ ಆಂಗ್ಲ ಆಡಳಿತಗಾರರು ಈ ರೀತಿ ಬರೆದಿದ್ದಾರೆ "ಹಳ್ಳಿಯಲ್ಲಿರುವ ಪ್ರತಿಯೊಂದು ಪಂಚಾಯಿತಿಯೂ ಪೂರ್ಣಸ್ವಾತಂತ್ರ್ಯವುಳ್ಳ ಒಂದೊಂದು ಪ್ರಜಾಪ್ರಭುತ್ವ ಸಂಸ್ಥೆಯಾಗಿತ್ತು. ಅನೇಕ ಚಕ್ರಾಧಿಪತ್ಯಗಳು ಒಂದಾದ ಮೇಲೊಂದು ಉರುಳಿಹೋದರೂ ಈ ಸಂಸ್ಥೆಗಳು ಮಾತ್ರ ನಾಶವಾಗಲಿಲ್ಲ

ಇವುಗಳ ಪ್ರಭಾವದಿಂದಲೇ ಭಾರತ ಸಂಸ್ಕೃತಿಯು ಸಾವಿರಾರು ಘೋರ ಕದನಗಳ ಅವಾಂತರದಿಂದ ತಪ್ಪಿಸಿಕೊಂಡು ಇನ್ನೂ ಉಳಿದಿರುವುದು "*

ಆಂಗ್ಲ ಆಡಳಿತಗಾರರ ಪ್ರಭಾವವು ನಮ್ಮ ದೇಶದಲ್ಲಿ ಹೆಚ್ಚು ವಿಸ್ತರಿಸಿದಮೇಲೆ, ನಮ್ಮ ಗ್ರಾಮಗಳಲ್ಲಿ ಬದಲಾವಣೆಗಳುಂಟಾದವು ಆಡಳಿತಗಾರರ ಉತ್ಸಾಹದ ಫಲವಾಗಿ ಅಧಿಕಾರವೆಲ್ಲಾ ಕೇಂದ್ರೀಕೃತವಾಗಿ ಸರ್ಕಾರದ ಅಧಿಕಾರಿಗಳು ಸಾಮಾನ್ಯ ಕೆಲಸಕ್ಕೂ ಕೂಡ ನಮ್ಮ ದೇಶದ ಮೂಲೆ ಮೂಲೆಗೂ, ಹಳ್ಳಿ ಹಳ್ಳಿಗೂ ಸಂಚಾರಮಾಡುತ್ತಿದ್ದರು ಅನೇಕ ದರ್ಜೆಯ ನ್ಯಾಯಸ್ಥಾನಗಳ ಸ್ಥಾಪನೆಯಿಂದಲೂ, ಡಿಸ್ಟ್ರಿಕ್ಟ್, ಸಬ್-ಡಿಸ್ಟ್ರಿಕ್ಟ್ ಬೋರ್ಡುಗಳ ನಿರ್ಮಾಣದಿಂದಲೂ ಗ್ರಾಮ ಪಂಚಾಯಿತಿಗಳ ಪ್ರತಿಭೆಯು ಕಡಿಮೆಯಾಗುತ್ತಾ ಬಂದಿತು ಕ್ಲ್ಪಪ್ತ ವರಮಾನ ಮತ್ತು ಕೆಲವು ಸ್ವತಂತ್ರಾಧಿಕಾರವುಳ್ಳ ಡಿಸ್ಟ್ರಿಕ್ಟ್ ಬೋರ್ಡುಗಳೇ ಸ್ಥಳೀಯ ಕೆಲಸಗಳನ್ನು ನಡೆಸುವುದಕ್ಕೆ ಪ್ರಾರಂಭಿಸಿದುವು ಹಳ್ಳಿಯ ಸಂಸ್ಥೆಗಳ ಆಡಳಿತವು ಕ್ರಮೇಣ ಮಲಿನವಾಗುತ್ತ ಬಂತು ಆದರೆ ಸ್ವಲ್ಪಕಾಲದಲ್ಲಿಯೇ ಒಂದೊಂದು ಡಿಸ್ಟ್ರಿಕ್ಟ್ ಬೋರ್ಡು ಸಂಸ್ಥೆಯು ಒಂದೊಂದು ರೀತಿಯಾಗಿ ಆಡಳಿತ ನಡೆಸಿದುವು ಅವುಗಳ ಕೆಲಸದಲ್ಲಿ ಒಂದೇ ರೀತಿಯಾದ ಕ್ರಮವಾಗಲಿ, ವ್ಯವಸ್ಥೆಯಾಗಲಿ ಇರಲಿಲ್ಲ ಒಟ್ಟಿನಲ್ಲಿ ಅನೇಕ ಬೋರ್ಡುಗಳ ಕೆಲಸವು ತೃಪ್ತಿಕರವಾಗಿರಲಿಲ್ಲ ಅದಕ್ಕೆ ವ್ಯವಸ್ಥಿತವಾದ ಕಾನೂನೂ ಕೂಡ ಇರಲಿಲ್ಲ ಆದುದರಿಂದ ಅಸ್ಸಾಂ ದೇಶದಲ್ಲಿ ಡಿಸ್ಟ್ರಿಕ್ಟ್ ಬೋರ್ಡುಗಳು ವಜಾಮಾಡಲ್ಪಟ್ಟವು ಬಂಗಾಳಾ ದೇಶದಲ್ಲಿ ಕೆಲವು ನಿಯಮಿತ ಕೆಲಸಕ್ಕೆ ಸಬ್-ಡಿಸ್ಟ್ರಿಕ್ಟ್ ಬೋರ್ಡುಗಳು ಸ್ಥಾಪಿಸಲ್ಪಟ್ಟವು ಅಂತೂ ಪ್ರತಿಯೊಂದು ಪ್ರಾಂತದಲ್ಲಿಯೂ, ಈ ಸ್ಥಳೀಯ ಸಂಸ್ಥೆಗಳ ಕಾರ್ಯಕ್ರಮವು ಅಷ್ಟು ಸಮರ್ಪಕವಾಗಿರಲಿಲ್ಲವೆಂದೇ ಹೇಳಬಹುದಾಗಿತ್ತು

ದೇಶದ ನಾನಾ ಭಾಗಗಳಲ್ಲಿ ಸ್ಥಾಪಿತವಾದ ಉತ್ತಮ ಸ್ಥಳೀಯ ಸಂಸ್ಥೆಗಳು ಕೆಲಸಮಾಡುತ್ತಿದ್ದರೂ ಕೂಡ, ಗ್ರಾಮ ಪಂಚಾಯಿತಿಗಳು ಇನ್ನೂ ಅನೇಕ ಕಡೆಗಳಲ್ಲಿ ಗ್ರಾಮಾಡಳಿತಕಾರ್ಯವನ್ನು ನಡೆಸುತ್ತಿದ್ದುವು.

---

* "Sir Charles Metcalf's Minute", 1830

ಈ ಪಂಚಾಯಿತಿಗಳಿಂದ ಗ್ರಾಮಗಳಿಗೆ ಹೆಚ್ಚು ಪ್ರಯೋಜನವಾಗುವುದೆಂದು ತಿಳಿದು, ಎಲ್ಲಾ ಪ್ರಾಂತೀಯ ಸರ್ಕಾರಗಳು ಸೂಕ್ತವಾದ ಕಾನೂನನ್ನು ಮಂಜೂರುಮಾಡಿ, ಪಂಚಾಯಿತಿಗಳ ಸ್ಥಾನಭದ್ರತೆಪಡಿಸಲಿಕ್ಕೆ ಪ್ರಯತ್ನ ಮಾಡಿದುವು ಮದ್ರಾಸಾಧಿಪತ್ಯದಲ್ಲಿ ೧೮೮೯ನೆಯ ಇಸವಿಯಲ್ಲಿ ಗ್ರಾಮ ಪಂಚಾಯಿತಿಗಳಿಗೆ ಸ್ಥಳೀಯ ನ್ಯಾಯ ತೀರ್ಮಾನದ ಅಧಿಕಾರ ಕೊಡಲ್ಪಟ್ಟಿತು ಬೊಂಬಾಯಾಧಿಪತ್ಯದಲ್ಲಿ ೧೮೭೭ನೆಯ ಇಸವಿಯಲ್ಲಿ ಮಂಜೂರಾದ ಆಕ್ಟ್ ಪ್ರಕಾರ, ಗ್ರಾಮದ ಮುಖ್ಯಸ್ಥನಿಗೆ ಸಣ್ಣ ಸಣ್ಣ ಮೊಕದ್ದಮೆಗಳನ್ನು ತೀರ್ಮಾನಮಾಡುವ ಅಧಿಕಾರ ಕೊಡಲ್ಪಟ್ಟಿತು ಅದೇ ರೀತಿಯಲ್ಲಿ ೧೮೯೨ನೆಯ ಇಸವಿಯಲ್ಲಿ ಸಂಯುಕ್ತ ಪ್ರಾಂತದಲ್ಲಿ ಮಂಜೂರಾದ ಕಾನೂನಿನ ಪ್ರಕಾರ ಗ್ರಾಮದ ಪೋಲೀಸ್ ಅಧಿಕಾರವು ಗ್ರಾಮ ಪಂಚಾಯಿತಿಗಳಿಗೇ ವರ್ಗಾಯಿಸಲ್ಪಟ್ಟಿತು ಹೀಗೆ ಅನೇಕ ಪ್ರಾಂತಗಳಲ್ಲಿ ಗ್ರಾಮ ಪಂಚಾಯಿತಿಗಳ ಸ್ಥಾನಭದ್ರತೆಗೆ ಅನುಕೂಲವಾದ ವಿವಿಧ ಉಪಾಯಗಳು ಆಚರಿಸಲ್ಪಟ್ಟವು

ಇಷ್ಟಾದರೂ ಕೂಡ ಗ್ರಾಮ ಸಂಸ್ಥೆಗಳನ್ನು ವ್ಯವಸ್ಥೆಪಡಿಸುವುದಕ್ಕೆ ಇನ್ನೂ ಅನೇಕ ತೊಂದರೆಗಳಿದ್ದುವು ಕೇಂದ್ರೀಕೃತವಾದ ಅಧಿಕಾರ ಒಂದು ಕಡೆ, ಹಣದ ಅಭಾವ ಇನ್ನೊಂದು ಕಡೆ ಈ ರೀತಿಯಾದ ಕಷ್ಟಗಳಿಂದ ಚಿರಕಾಲಿಕವಾದ ಒಳ್ಳೆಯ ಕೆಲಸಗಳನ್ನು ಕೈಗೊಳ್ಳುವುದಕ್ಕೆ ಈ ಸಂಸ್ಥೆಗಳಿಗೆ ಆಗುತ್ತಿರಲಿಲ್ಲ ಹಳ್ಳಿಗಳಲ್ಲಿ ಉಂಟಾಗುತ್ತಿದ್ದ ಅಕೃತ್ಯಗಳನ್ನು ತಪ್ಪಿಸಲಿಕ್ಕೂ, ಅಲ್ಲಿಯ ದೀಪ, ನೀರು, ವೈದ್ಯ ಮತ್ತು ವಾರಶಾಲೆ — ಇವೇ ಮುಂತಾದ ಸೌಕರ್ಯಗಳನ್ನು ಒದಗಿಸುವುದಕ್ಕೂ ಈ ಗ್ರಾಮ ಸಂಸ್ಥೆಗಳಿಗೆ ಕಾನೂನು ಬದ್ಧವಾದ ಅಧಿಕಾರಗಳಿರಲಿಲ್ಲ ಆದುದರಿಂದ ರೈತರು ಈ ಸಂಸ್ಥೆಗಳ ದುರವಸ್ಥೆಯನ್ನು ಸರ್ಕಾರದ ಗಮನಕ್ಕೆ ತರಲಾರಂಭಿಸಿದರು ಇವುಗಳನ್ನೆಲ್ಲಾ ವಿಮರ್ಶೆಮಾಡಿ ಸರಿಯಾದ ಸಲಹೆಯನ್ನು ಕೊಡುವುದಕ್ಕೆ ೧೯೦೭ನೆಯ ಇಸವಿಯಲ್ಲಿ ಒಂದು ಸಮಿತಿಯನ್ನು ಕೇಂದ್ರ ಸರ್ಕಾರದವರು ನೇಮಿಸಿದರು. ಇದೇ ಪ್ರಸಿದ್ಧವಾದ 'ಡೀಸೆಂಟ್ರಲೈಜೇಷನ್' ಕಮಿಷನ್ ಈ ಸಮಿತಿಯವರು ಸ್ಥಳೀಯ ಸಂಸ್ಥೆಗಳಿಗೆ ಅಧಿಕಾರಕೊಡುವ ವಿಚಾರವನ್ನು ಚೆನ್ನಾಗಿ ವಿಮರ್ಶೆಮಾಡಿ, "ಸ್ಥಳೀಯ ವಿದ್ಯಮಾನಗಳಿಗೆ

ಅನುಗುಣವಾಗಿ ಸ್ಥಳೀಯ ಆಡಳಿತ ವಿಚಾರಕ್ಕಾಗಿಯೂ, ಹೆಚ್ಚು ಜನರು ಭಾಗವಹಿಸುವಂತೆ ಮಾಡುವುದಕ್ಕಾಗಿಯೂ, ಗ್ರಾಮ ಪಂಚಾಯಿತಿಗಳು ಅಭಿವೃದ್ಧಿಹೊಂದಬೇಕೆಂದೂ, ಅನೇಕ ಹೊಸ ಪಂಚಾಯಿತಿಗಳು ಸ್ಥಾಪಿಸಲ್ಪಡಬೇಕೆಂದೂ'' ಹೇಳಿದ್ದಾರೆ ಹಿಂದೆ ಇದ್ದ 'ವಿಲೇಜು ಯೂನಿಯನ್ನು'ಗಳೂ, 'ಸ್ಯಾನಿಟೇಷನ್' ಮತ್ತು ಇತರ ವಿಧವಾದ ಕಮಿಟಿಗಳೆಲ್ಲವೂ ಗ್ರಾಮ ಪಂಚಾಯಿತಿಗಳಲ್ಲಿಯೇ ಮಗ್ನವಾಗಬೇಕೆಂದೂ ಸಲಹೆ ಇತ್ತಿದ್ದಾರೆ

ಡೀಸೆಂಟ್ರಲೈಜೇಷನ್ ಸಮಿತಿಯವರ ಶಿಫಾರಿಸಿನ ಪ್ರಕಾರ ಅನೇಕ ಪ್ರಾಂತೀಯ ಸರ್ಕಾರಗಳು ಗ್ರಾಮ ಪಂಚಾಯಿತಿಗಳನ್ನು ಶಾಸ್ತ್ರಸಮ್ಮತವಾದ ಸಂಸ್ಥೆಗಳನ್ನಾಗಿ ಮಾಡುವುದಕ್ಕೆ ಪ್ರಯತ್ನಪಟ್ಟವು ಮಧ್ಯಪ್ರಾಂತ ಮತ್ತು ಸಂಯುಕ್ತ ಪ್ರಾಂತದ 'ವಿಲೇಜು ಪಂಚಾಯಿತಿ ಆಕ್ಟ್', ಬೊಂಬಾಯಾಧಿಪತ್ಯದ 'ಪಂಚಾಯಿತಿ ಆಕ್ಟ್', ಮದ್ರಾಸಾಧಿಪತ್ಯದ 'ಲೋಕಲ್ ಬೋರ್ಡ್ಸ್ ಆಕ್ಟ್' ಮತ್ತು ಮಧ್ಯಪ್ರಾಂತದ 'ಗ್ರಾಮ ಸ್ಯಾನಿಟೇಷನ್ ಮತ್ತು ಪಬ್ಲಿಕ್ ಮ್ಯಾನೇಜುಮೆಂಟ್ ಆಕ್ಟ್'— ಇವುಗಳೆಲ್ಲಾ ೧೯೨೦ರ ಒಳಗೆ ಒಂದೊಂದಾಗಿ ಮಂಜೂರಾದುವು ೧೯೨೧ನೆಯ ಇಸವಿಯಲ್ಲಿ ಪಂಜಾಬು ಪ್ರಾಂತದ ವಿಲೇಜು ಪಂಚಾಯಿತಿ ಆಕ್ಟೂ ಅನಂತರ ಬಿಹಾರ್ ಮತ್ತು ಒರಿಸ್ಸಾ ಪ್ರಾಂತದ 'ವಿಲೇಜು ಅಡ್ಮಿನಿಸ್ಟ್ರೇಷನ್ ಆಕ್ಟೂ' ಆಚರಣೆಯಲ್ಲಿ ಬಂದುವು. ಹೀಗೆ ಹಿಂದಿನ ವಿಷಯ ವಿಮರ್ಶೆಯಿಂದ ಹೊಸ ಕಾನೂನುಗಳನ್ನು ಮಾಡಿ ಗ್ರಾಮಗಳ ಆಡಳಿತಕ್ಕೆ ಗ್ರಾಮ ಪಂಚಾಯಿತಿಗಳೇ ಸರಿಯಾದ ಸಂಸ್ಥೆಗಳೆಂದು ಎಲ್ಲಾ ಪ್ರಾಂತೀಯ ಸರ್ಕಾರಗಳೂ ನಿರ್ಧರಿಸಿದುವು.

ಗ್ರಾಮ ಪಂಚಾಯಿತಿಗಳನ್ನು ಚುನಾಯಿಸುವ ಪದ್ಧತಿಯು ಒಂದೊಂದು ಪ್ರಾಂತದಲ್ಲಿ ಒಂದೊಂದು ರೀತಿಯಾಗಿದೆ ಕೆಲವು ಭಾಗಗಳಲ್ಲಿ ಒಂದು ಗ್ರಾಮಕ್ಕೆ ಒಂದು ಪಂಚಾಯಿತಿಯಂತೆಯೂ, ಇನ್ನು ಕೆಲವು ಭಾಗಗಳಲ್ಲಿ ಒಂದು ಗ್ರಾಮಗಳ ಗುಂಪಿಗೆ ಒಂದು ಪಂಚಾಯಿತಿಯಂತೆಯೂ ಇವೆ. ಸಾಮಾನ್ಯವಾಗಿ ಪ್ರತಿಯೊಂದು ಪಂಚಾಯಿತಿಯೂ ಐದು ಅಥವಾ ಐದಕ್ಕಿಂತ ಹೆಚ್ಚಾದ, ಚುನಾಯಿತ ಅಥವಾ ಸರ್ಕಾರದಿಂದ ನೇಮಿಸಿದ

ಗ್ರಾಮಸ್ಥರನ್ನೊಳಗೊಂಡ ಒಂದು ಸಮಿತಿ ಎಂಬದಾಗಿ ಹೇಳಬಹುದು ಕೆಲವು ಸಂದರ್ಭಗಳಲ್ಲಿ ಪಂಚಾಯಿತಿಗಳು ಕೆಲವು ಚುನಾಯಿಸಲ್ಪಟ್ಟ ಸದಸ್ಯರನ್ನೂ, ಕೆಲವು ನಿಯಮಿಸಲ್ಪಟ್ಟ ಸದಸ್ಯರನ್ನೂ ಹೊಂದಿವೆ

ಗ್ರಾಮ ಪಂಚಾಯಿತಿಗಳ ಅಧಿಕಾರವನ್ನು ಎರಡು ಬಗೆಯಾಗಿ ವಿಂಗಡಿಸಬಹುದು ಕೆಲವು ಆಡಳಿತಕ್ಕೆ ಸಂಬಂಧಪಟ್ಟವು, ಇನ್ನು ಕೆಲವು ನ್ಯಾಯ ತೀರ್ಮಾನಕ್ಕೆ ಸಂಬಂಧಪಟ್ಟವು ಈ ಅಧಿಕಾರಗಳನ್ನು ಉಪಯೋಗಿಸುವುದರಲ್ಲಿಯೂ ಕೂಡ ಒಂದೊಂದು ಪ್ರಾಂತದಲ್ಲಿ ಒಂದೊಂದು ರೀತಿಯಾಗಿದೆ ಕೆಲವು ಪ್ರಾಂತಗಳಲ್ಲಿ ಗ್ರಾಮ ಪಂಚಾಯಿತಿಗಳು ಸ್ಥಳೀಯ ವ್ಯವಹಾರ ತೀರ್ಮಾನಮಾಡುವ ಸಂಸ್ಥೆಗಳೆಂಬದಾಗಿ ಭಾವಿಸಿ, ಅವುಗಳ ನ್ಯಾಯ ತೀರ್ಮಾನದ ಅಧಿಕಾರಕ್ಕೆ ಹೆಚ್ಚು ಪ್ರಾಶಸ್ತ್ಯ ಕೊಡಲ್ಪಟ್ಟಿದೆ ಇನ್ನು ಕೆಲವು ಪ್ರಾಂತಗಳಲ್ಲಿ ಸ್ಥಳೀಯ ಆಡಳಿತವನ್ನು ಕ್ರಮಪಡಿಸುವುದಕ್ಕೆ ಗ್ರಾಮ ಪಂಚಾಯಿತಿಗಳೇ ಸರಿಯಾದ ಸಂಸ್ಥೆಗಳೆಂದು ಬಗೆದು, ಅವುಗಳ ಆಡಳಿತ ಅಧಿಕಾರಕ್ಕೆ ಹೆಚ್ಚು ಪ್ರಾಶಸ್ತ್ಯ ಬಂದಿದೆ ಇವು ಹೇಗಾದರೂ ಇರಲಿ, ಪಂಚಾಯಿತಿಗಳು ತಮ್ಮ ಅಧಿಕಾರವನ್ನು ದುರುಪಯೋಗಪಡಿಸದಹಾಗೆ ಭದ್ರತೆಯ ಸಾಧನಗಳು ಎಲ್ಲಾ ಪ್ರಾಂತಗಳಲ್ಲಿಯೂ ಏರ್ಪಟ್ಟಿವೆ ಒಟ್ಟಿನಲ್ಲಿ ಪಂಚಾಯಿತಿಗಳು ಸಮರ್ಪಕವಾದ ಪ್ರಯೋಜನ ಕಾರ್ಯಗಳನ್ನು ನಡೆಸುವುದಕ್ಕೆ ಅನುಕೂಲವಾದ ಅಧಿಕಾರವನ್ನು ಕಲ್ಪಿಸುವ ಕಾನೂನುಗಳು ಪ್ರತಿಯೊಂದು ಪ್ರಾಂತದಲ್ಲಿಯೂ ಆಚರಣೆಯಲ್ಲಿವೆ

ಮೈಸೂರು ಸಂಸ್ಥಾನದ ಸ್ಥಳೀಯ ಸಂಸ್ಥೆಗಳ ಚರಿತ್ರೆಯು ಮನೋರಂಜಕವಾಗಿದೆ ಮೈಸೂರು ಮತ್ತು ಬೆಂಗಳೂರು ನಗರಗಳ ಸ್ಥಳೀಯ ವಿಷಯವಾದ ಆಡಳಿತವನ್ನು ವ್ಯವಸ್ಥೆಪಡಿಸುವ ಪ್ರಥಮ ಪ್ರಯತ್ನವು ೧೮೬೨ನೆಯ ಇಸವಿಯಲ್ಲಿ ಪ್ರಾರಂಭವಾಯಿತು. ಅನಂತರ ಇದೇ ಕ್ರಮವನ್ನು ಎಲ್ಲಾ ಡಿಸ್ಟ್ರಿಕ್ಟುಗಳ ಮುಖ್ಯ ಪಟ್ಟಣಗಳಿಗೆ ವಿಸ್ತರಿಸಲಾಯಿತು ೧೯೦೨ನೆಯ ಇಸವಿಯಲ್ಲಿ ಲೋಕಲ್ ಬೋರ್ಡ್ಸ್ ಆಕ್ಟೂ, ೧೯೦೬ನೆಯ ಇಸವಿಯಲ್ಲಿ ಮುನಿಸಿಪಲ್ ರೆಗ್ಯುಲೇಷನ್ ಕಾನೂನೂ ಮಂಜೂರಾದವು ಇದೇ ಕಾಲದಲ್ಲಿ ಕೆಲವು ವಿಲೇಜು ಯೂನಿಯನ್‌ಗಳನ್ನೂ, ಇಂಪ್ರೂವ್‌ಮೆಂಟ್

ಕಮಿಟಿಗಳನ್ನೂ ಸ್ಥಾಪಿಸಲಾಯಿತು. ಹೀಗೆಯೇ ಕೆಲವು ಫಾರೆಸ್ಟ್ ಕಮಿಟಿಗಳೂ, ಟ್ಯಾಂಕ್ ಪಂಚಾಯಿತಿಗಳೂ ಪ್ರಾರಂಭಿಸಲ್ಪಟ್ಟವು ೧೯೧೭ನೆಯ ಇಸವಿಯ ವೇಳೆಗೆ ಸಂಸ್ಥಾನಾಮಳೆ ೮,೫೦೦ ವಿಲೇಜು ಇಂಪ್ರೂವ್ಮೆಂಟ್ ಕಮಿಟಿಗಳು ಕೆಲಸಮಾಡುತ್ತಿದ್ದುವು ಅನಂತರ ಡಿಸ್ಟ್ರಿಕ್ಟು ಮತ್ತು ತಾಲ್ಲೂಕು ಬೋರ್ಡುಗಳ ಆಡಳಿತಕ್ಕೆ ಒಳಪಟ್ಟ ಹಾಗೆ ಕೆಲವು ಪಂಚಾಯಿತಿಗಳು ಸ್ಥಾಪಿಸಲ್ಪಟ್ಟವು ೧೯೨೩ನೆಯ ಇಸವಿಯಲ್ಲಿ ಲೋಕಲ್ ಬೋರ್ಡುಗಳ ಮೇಲ್ವಿಚಾರಣೆಯಲ್ಲಿ ಸುಮಾರು ೮೩೩ ಪಂಚಾಯಿತಿಗಳು ಕೆಲಸಮಾಡುತ್ತಿದ್ದವು

೧೯೧೧ನೆಯ ಇಸವಿಯ ಕೆರೆಗಳ ಪಂಚಾಯಿತಿ ರೆಗ್ಯುಲೇಷನ್, ೧೯೧೩ನೆಯ ಇಸವಿಯ ವಿಲೇಜು ಕೋರ್ಟ್ ರೆಗ್ಯುಲೇಷನ್, ೧೯೧೪ನೆಯ ಇಸವಿಯ ವಿಲೇಜು ಇಂಪ್ರೂವ್ಮೆಂಟ್ ಸ್ಕೀಮು, ಇವುಗಳ ಪ್ರಕಾರ ಸ್ಥಾಪಿಸಲ್ಪಟ್ಟ ಸಂಸ್ಥೆಗಳೆಲ್ಲಾ ಸ್ವಲ್ಪ ಕಾಲದಲ್ಲಿಯೇ ಕ್ಷೀಣವಾದುವು ಇವುಗಳು ಸಮರ್ಪಕವಾಗಿ ಕೆಲಸಮಾಡುತ್ತಿರಲಿಲ್ಲ ಇವುಗಳನ್ನೆಲ್ಲಾ ಒಟ್ಟುಗೂಡಿಸಿ ಸ್ಥಳೀಯ ವಿದ್ಯಮಾನಗಳನ್ನು ವಿಮರ್ಶೆಮಾಡಿ, ಮೈಸೂರು ಸರ್ಕಾರದವರು ಸ್ಥಳೀಯ ಆಡಳಿತಕ್ಕೆ ಸಹಾಯಮಾಡುವ ಉದ್ದೇಶದಿಂದ 'ವಿಲೇಜು ಪಂಚಾಯಿತಿ ರೆಗ್ಯುಲೇಷನ್' ಎಂಬ ಶಾಸನವನ್ನು ೧೯೨೬ನೆಯ ಇಸವಿಯಲ್ಲಿ ಮಂಜೂರುಮಾಡಿದ್ದಾರೆ ಇದರಿಂದ ಗ್ರಾಮ ಪಂಚಾಯಿತಿಗಳಿಗೆ ಒಂದು ಸ್ವತಂತ್ರ ಸ್ಥಾನವನ್ನು ಕಲ್ಪಿಸಿಕೊಟ್ಟಂತಾಗಿದೆ ೧೯೦೯ನೆಯ ಇಸವಿಯ ಡೀಸೆಂಟ್ರಲೈಜೇಷನ್ ಸಮಿತಿಯವರ ಸೂಚನೆಯನ್ನೂ, ಸ್ಥಳೀಯ ವಿಚಾರಗಳಲ್ಲಿ ಅದ್ವಿತೀಯ ಪಂಡಿತರಾದ ಶ್ರೀಮಾನ್ ಗೋಪಾಲಕೃಷ್ಣ ಗೋಖಲೆಯವರ ಅಭಿಪ್ರಾಯವನ್ನೂ ಅನುಸರಿಸಿ, ಅತ್ಯುತ್ತಮ ರೀತಿಯಲ್ಲಿ ಮೈಸೂರು ಸರ್ಕಾರದವರು ಗ್ರಾಮ ಪಂಚಾಯಿತಿಗಳ ಶಾಸನವನ್ನು ಆಚರಣೆಯಲ್ಲಿ ತಂದಿದ್ದಾರೆ

ಸ್ಥಳೀಯ ಸಂಸ್ಥೆಗಳಿಗೆ ಭದ್ರವಾದ ಸ್ಥಾನವನ್ನು ಕಲ್ಪಿಸಬೇಕಾದರೆ ಅವು ಹಳ್ಳಿಗಳಲ್ಲಿ ಪ್ರಾರಂಭವಾಗಿ ಹಳ್ಳಿಯ ಜನರು ಹೆಚ್ಚು ಭಾಗ ತೆಗೆದುಕೊಳ್ಳಬೇಕು. ಇಂತಹ ಸಂಸ್ಥೆಗಳಲ್ಲಿ ಒಬ್ಬರನ್ನೊಬ್ಬರು ಚೆನ್ನಾಗಿ ತಿಳಿದಿರುವ ಸದಸ್ಯರು ತಮಗೆ ಅವಶ್ಯಕವಾದ ನೀರು, ದೀಪ, ದಾರಿ—

ಇವೇ ಮುಂತಾದ ಸಮಸ್ಯೆಗಳನ್ನು ಸಮರ್ಪಕವಾದ ರೀತಿಯಲ್ಲಿ ಬಗೆಹರಿಸ ಬಹುದು ಇದುವರೆಗೆ ಈ ಸಂಸ್ಥೆಗಳು ಉತ್ತಮರೀತಿಯಲ್ಲಿ ಕೆಲಸಮಾಡದೆ ಇದ್ದುದಕ್ಕೆ ಅವುಗಳಿಗೆ ಸರಿಯಾದ ಅಡಿಪಾಯವಿಲ್ಲದಿದ್ದುದೇ ಕಾರಣವೆಂದು ಡೀಸೆಂಟ್ರಲೈಜೇಷನ್ ಸಮಿತಿಯವರು ಅಭಿಪ್ರಾಯಪಟ್ಟಿದ್ದಾರೆ ಅದೇ ರೀತಿಯಲ್ಲಿ ಶ್ರೀ ಗೋಪಾಲಕೃಷ್ಣ ಗೋಖಲೆಯವರೂ ಕೂಡ ಸ್ಥಳೀಯ ಸಂಸ್ಥೆಗಳಿಗೆ ಹಳ್ಳಿಗಳೇ ಸರಿಯಾದ ಸ್ಥಾನಗಳೆಂದೂ, ಅವು ಅಲ್ಲಿಯೇ ಪ್ರಾರಂಭವಾಗುವುದರಿಂದ ಅದರ ಸದಸ್ಯರು ಒಬ್ಬರನ್ನೊಬ್ಬರು ಚೆನ್ನಾಗಿ ತಿಳಿದವರಾಗಿ ಅವರ ಆಡಳಿತವು ನಿರ್ದಿಷ್ಟವಾದ ಒಂದು ಸ್ಥಳಕ್ಕೆ ಸಂಬಂಧ ಪಟ್ಟಹಾಗೆ ಇರುವುದೆಂದೂ ಹೇಳಿದ್ದಾರೆ

ಮೇಲ್ಕಂಡ ಸಲಹೆಗಳಿಗೆ ಅನುಸಾರವಾಗಿ ಹಳ್ಳಿಯ ಜೀರ್ಣೋದ್ಧಾರವು ಹಳ್ಳಿಯವರ ಆಡಳಿತದಲ್ಲಿಯೇ ಇರಬೇಕೆಂಬ ಉಚ್ಚ ಧ್ಯೇಯವನ್ನಿಟ್ಟು, ಮೈಸೂರು ಸರ್ಕಾರದವರು ಗ್ರಾಮ ಪಂಚಾಯಿತಿಗಳಿಗೆ ಹೆಚ್ಚು ಉತ್ತೇಜನ ಕೊಡುವುದಕ್ಕಾಗಿ ಶಾಸನ ಮಾಡಿದ್ದಾರೆ ಇದರಿಂದ ಹಳ್ಳಿಯ ಅಭಿವೃದ್ಧಿಯಲ್ಲಿ ರೈತರು ಹೆಚ್ಚು ಉತ್ಸಾಹವನ್ನೂ ಆಸಕ್ತಿಯನ್ನೂ ವಹಿಸುವಂತೆ ಏರ್ಪಡಿಸಲಾಗಿದೆ ಈ ಕಾನೂನು ಆಚರಣೆಯಲ್ಲಿ ತಂದಿರುವುದರಿಂದ ನಮ್ಮ ಜನಗಳಿಗೆ ಆಡಳಿತಕ್ರಮವನ್ನು ಕಲಿಸುವುದಕ್ಕೆ ಪಂಚಾಯಿತಿಗಳು ಪ್ರಯೋಗ ಕ್ಷೇತ್ರಗಳಾಗಿ ಪರಿಣಮಿಸಿವೆ ಅಂತು ಕಾಲ ಕ್ರಮದಲ್ಲಿ ಈ ಪಂಚಾಯಿತಿಗಳ ಸಮರ್ಪಕ ಕಾರ್ಯಕ್ರಮದಿಂದ ಸಂಸ್ಥಾನದ ಸರ್ಕಾರವು ಪ್ರಜಾಸತ್ತಾತ್ಮಕ ಪ್ರಭುತ್ವವಾಗಿ ಪರಿವರ್ತಿಸುವುದರಲ್ಲಿ ಸಂದೇಹವಿಲ್ಲ

೧೯೨೬ನೆಯ ಇಸವಿಯ ಮೈಸೂರು ವಿಲೇಜು ಪಂಚಾಯಿತಿ ರೆಗ್ಯುಲೇಷನ್ ಇತರ ಸ್ಥಳೀಯ ಸಂಸ್ಥೆಗಳ ಎಲ್ಲಾ ಕಾನೂನಿಗಳಿಗಿಂತಲೂ ಸಾಂಗೋಪಾಂಗವಾಗಿಯೂ, ಉತ್ತಮವಾಗಿಯೂ ಇದೆ ಇದರ ಪ್ರಕಾರ ಗ್ರಾಮ ಪಂಚಾಯಿತಿಗಳ ಕರ್ತವ್ಯವನ್ನು ಅನಿವಾರ್ಯ, ಐಚ್ಛಿಕ, ಸರ್ಕಾರ ದವರು ವಹಿಸಿಕೊಡಬಹುದಾದ, ಕರ್ತವ್ಯಗಳೆಂದು ಮೂರು ಬಗೆಯಾಗಿ ವಿಂಗಡಿಸಬಹುದು.

ಹಳ್ಳಿಯ ರಸ್ತೆಗಳನ್ನು ಸರಿಪಡಿಸುವುದು, ಸೇತುವೆಗಳನ್ನು

ಕಟ್ಟಿಸುವುದು, ಮನೆಗಳನ್ನು ಕಟ್ಟುವುದು, ಕುಡಿಯುವ ನೀರಿನ ಬಾವಿಗಳನ್ನು ತೋಡಿಸುವುದು, ಗ್ರಾಮಾರೋಗ್ಯ ರಕ್ಷಣೆಗಾಗಿ ಬೀದಿ, ಕೆರೆ, ಬಾವಿ ಇವುಗಳನ್ನು ಶುಚಿಯಾಗಿಟ್ಟುಕೊಳ್ಳುವುದು, ಬಲಾತ್ಕಾರ ವಿದ್ಯಾಭ್ಯಾಸವನ್ನು ಆಚರಣೆಗೆ ತರುವುದು— ಇವೇ ಮುಂತಾದುವು ಅನಿವಾರ್ಯ ಕರ್ತವ್ಯಗಳು

ಪ್ರಯಾಣೀಕರಿಗೆ ಅನುಕೂಲಗಳನ್ನು ಕಲ್ಪಿಸುವುದು, ಬಡವರಿಗೂ, ರೋಗಿಗಳಿಗೂ ಸಹಾಯಮಾಡುವುದು, ಕೈಗಾರಿಕೆ, ಸಹಕಾರ, ವ್ಯಾಪಾರ, ವಿದ್ಯಾಭ್ಯಾಸ— ಇವುಗಳ ವಿಷಯದಲ್ಲಿ ಗ್ರಾಮಗಳ ಶಕ್ತ್ಯಾನುಸಾರ ಅಭಿವೃದ್ಧಿಕಾರ್ಯಗಳನ್ನು ಕೈಗೊಳ್ಳುವುದು, ದೀಪಗಳನ್ನು ಇಡಿಸುವುದು — ಇವೇ ಮುಂತಾದುವು, ಪಂಚಾಯಿತಿಗಳ ಐಚ್ಛಿಕ ಕರ್ತವ್ಯಗಳಾಗಿವೆ ಹಳ್ಳಿಯ ದೇವಾಲಯ, ಕೆರೆ, ಸಾರ್ವಜನಿಕ ಸಂಸ್ಥೆ, ಗ್ರಾಮ ಪಾರಶಾಲೆ ಮತ್ತು ಅರಣ್ಯಪ್ರದೇಶ— ಇವೇ ಮುಂತಾದುವುಗಳ ಮೇಲಿರುವ ಸರ್ಕಾರದ ಮೇಲ್ವಿಚಾರಣೆಯನ್ನೂ ಮತ್ತು ಹಕ್ಕನ್ನೂ ಗ್ರಾಮ ಪಂಚಾಯಿತಿಗಳಿಗೆ ಸರ್ಕಾರದವರು ವಹಿಸಿಕೊಡಬಹುದು

ಮೈಸೂರು ಸಂಸ್ಥಾನದಲ್ಲಿರುವ ಅನೇಕ ಪಂಚಾಯಿತಿಗಳು ಉತ್ತಮ ಕೆಲಸ ನಡೆಸುತ್ತಿವೆ ಇಲ್ಲಿ ಸುಮಾರು ೧೧,೨೫೭ ಗ್ರಾಮ ಪಂಚಾಯಿತಿಗಳಿವೆ ಸಾಲಿಯಾನಾ ಸುಮಾರು ೧೧ ಲಕ್ಷ ರೂಪಾಯಿಗಳಿಗೆ ಮೇಲ್ಪಟ್ಟು ಅಭಿವೃದ್ಧಿ ಕೆಲಸಗಳಿಗಾಗಿ ಪಂಚಾಯಿತಿಗಳು ಖರ್ಚುಮಾಡುತ್ತಿವೆ ಕೆಲವು ಪಂಚಾಯಿತಿಗಳು ಸಿಹಿನೀರಿನ ಬಾವಿಗಳನ್ನು ತೋಡಿಸಿವೆ. ಕೆಲವು ಮಂದಿರಗಳನ್ನು ಕಟ್ಟಿಸಿವೆ ಇನ್ನು ಕೆಲವು ರಸ್ತೆ, ವೈದ್ಯ ಸಹಾಯ, ವಿದ್ಯಾಭ್ಯಾಸ, ಕೈಗಾರಿಕಾ ಸೌಕರ್ಯಗಳನ್ನು ಏರ್ಪಡಿಸಿವೆ. ಮತ್ತೆ ಕೆಲವು ವ್ಯವಸಾಯಾಭಿವೃದ್ಧಿಗೆ ಯಂತ್ರೋಪಕರಣಗಳು, ಉತ್ತಮ ಬೀಜ, ಗೊಬ್ಬರ— ಇವೇ ಮುಂತಾದುವನ್ನು ರೈತರಿಗೆ ಹಂಚುವ ಅನುಕೂಲಗಳನ್ನು ಕಲ್ಪಿಸುತ್ತಾ ಇವೆ ಉದ್ಯಾನ, ವಾಚನಾಲಯ, ಪುಸ್ತಕ ಭಂಡಾರ ಇವುಗಳನ್ನು ಸ್ಥಾಪಿಸುವುದೂ, ವಿದ್ಯುಚ್ಛಕ್ತಿ ದೀಪಗಳ ಸೌಕರ್ಯ ಒದಗಿಸುವುದೂ— ಇವೇ ಮುಂತಾದ ಕಾರ್ಯಕ್ರಮಗಳನ್ನು ಇನ್ನೂ ಅನೇಕ ಪಂಚಾಯಿತಿಗಳು ಕೈಗೊಳ್ಳುತ್ತಾ ಇವೆ ಈ ರೀತಿಯಲ್ಲಿ ಅನೇಕ

ಪಂಚಾಯಿತಿಗಳು ಗ್ರಾಮಾಭಿವೃದ್ಧಿ ಕಾರ್ಯಗಳನ್ನು ಆಚರಿಸಿ ಪ್ರಜೆಗಳಲ್ಲಿ ಪರೋಪಕಾರಬುದ್ಧಿಯೂ, ಸ್ವಾವಲಂಬನೆಯೂ ಉಂಟಾಗುವಂತೆ ಮಾಡುತ್ತಿವೆ.

ಒಟ್ಟಿನಲ್ಲಿ ಗ್ರಾಮ ಪಂಚಾಯಿತಿಗಳು ಇಲ್ಲಿಯವರೆಗ ಮಾಡಿರುವ ಫಲಕಾರಿಯಾದ ಅಭಿವೃದ್ಧಿಕಾರ್ಯಗಳು ಸ್ತೋತ್ರಾರ್ಹವಾಗಿಯೇ ಇವೆ ಆದರೆ ಇಂತಹ ಸಂಸ್ಥೆಗಳ ಮುಂದಿರುವ ಅಗಾಧ ಕಾರ್ಯಕ್ರಮಗಳ ಮೊತ್ತ ವನ್ನು ನಾವು ಸ್ವಲ್ಪ ವಿಚಾರಮಾಡಿದರೆ, ಇವು ಇನ್ನೂ ಶ್ರದ್ಧೆಯಿಂದಲೂ ಉತ್ಸಾಹದಿಂದಲೂ ವಿಸ್ತಾರವಾದ ಅಭಿವೃದ್ಧಿಕಾರ್ಯಗಳನ್ನು ಕೈಗೊಳ್ಳ ಬೇಕು ಎನ್ನಿಸುವುದು ಈ ವಿಚಾರದಲ್ಲಿ ಸರ್ಕಾರದ ಗ್ರಾಮ ಪಂಚಾಯಿತಿ ಗಳ ವರದಿಯಲ್ಲಿ ಹೇಳಿರುವ ಒಂದೆರಡು ವಿಷಯವನ್ನು ಇಲ್ಲಿ ನಮೂದಿಸು ವುದು ಸೂಕ್ತವಾಗಿದೆ "ನಮ್ಮ ಒಟ್ಟು ಪಂಚಾಯಿತಿಗಳ ಸಂಖ್ಯೆಯಲ್ಲಿ ಶೇ ೨೯ ಪಂಚಾಯಿತಿಗಳು ಮಾತ್ರ ಒಳ್ಳೆಯ ಕೆಲಸಮಾಡುತ್ತಿವೆ ಎಂದೂ, ಶೇ ೩೮ ಉದಾಸೀನಭಾವದಿಂದ ಕೂಡಿವೆ ಎಂದೂ, ಉಳಿದ ೩೩ರಷ್ಟು ಕೀಳು ದರ್ಜೆಗೆ ಸೇರಿವೆ ಎಂದೂ, ಕೀಳು ದರ್ಜೆಯ ಮತ್ತು ಉದಾ ಸೀನತೆಯಿಂದ ಇರುವ ಸಂಸ್ಥೆಗಳಿಗೆ ಅಧಿಕಾರಿಗಳು ಹೆಚ್ಚು ಗಮನ ಕೊಡಬೇಕೆಂದೂ"* ಸರ್ಕಾರದವರೇ ಹೇಳಿದ್ದಾರೆ

ಭರತಖಂಡದಲ್ಲಿರುವ ಅನೇಕ ಪಂಚಾಯಿತಿಗಳ ಕಾರ್ಯಕ್ರಮ ವನ್ನು ನಾವು ವಿಮರ್ಶಿಸಿದರೆ, ಅವುಗಳ ಕೆಲಸವು ಅಷ್ಟು ತೃಪ್ತಿಕರವಾಗಿಲ್ಲ ವೆಂದೇ ಹೇಳಬೇಕಾಗುವುದು ಇದು ನಮ್ಮ ಮೈಸೂರು ಸಂಸ್ಥಾನಕ್ಕೂ ಅನ್ವಯಿಸುತ್ತದೆ ಬಂಗಾಳಾ, ಬಿಹಾರ, ಒರಿಸ್ಸಾ ಪ್ರಾಂತಗಳಲ್ಲಿರುವ ಖಾಯಂಗುತ್ತಾ ಪದ್ಧತಿಯ ಆಡಳಿತ ಅನಾನುಕೂಲಗಳಿಂದ ಹೆಚ್ಚು ಗ್ರಾಮ ಪಂಚಾಯಿತಿಗಳ ಸ್ಥಾಪನೆಗೆ ಅವಕಾಶವಿಲ್ಲವಾಗಿದೆ ಇರುವ ಕೆಲವು ಸಂಸ್ಥೆಗಳಿಂದ ರೈತರಿಗೆ ಹೆಚ್ಚು ಪ್ರಯೋಜನವಾಗುವಂತಿಲ್ಲ ಬೊಂಬಾಯಿ ಆಧಿಪತ್ಯದಲ್ಲಿರುವ ೧೭೫ ಲಕ್ಷ ರೈತರ ಪೈಕಿ, ೧೫ ಲಕ್ಷ ಜನರು ಮಾತ್ರ ಈ ಸ್ಥಳೀಯ ಸಂಸ್ಥೆಗಳ ಆಡಳಿತಕ್ಕೆ ಒಳಪಟ್ಟಿದ್ದಾರೆ

* "Report on the working of Village Panchayats in Mysore", 1935-36, p 4

ಸಂಯುಕ್ತ ಪ್ರಾಂತದಲ್ಲಿ ಪಂಚಾಯಿತಿಗಳು ಬಹಳ ಚಿಕ್ಕವಾಗಿ ಆರ್ಥಿಕ ದುರವಸ್ಥೆಯಿಂದ ಕೂಡಿವೆ ಕಳೆದ ಎರಡು ವರ್ಷಗಳಲ್ಲಿ ಸುಮಾರು ೨೬೩ ಪಂಚಾಯಿತಿಗಳು ಇಲ್ಲಿ ವಜಾಮಾಡಲ್ಪಟ್ಟಿವೆ ಪಂಜಾಬು ದೇಶದಲ್ಲಿ ಕೂಡ ಗ್ರಾಮ ಪಂಚಾಯಿತಿಗಳ ಸಂಖ್ಯೆಯು ಹೆಚ್ಚಾಗಿಲ್ಲ, ಹೆಚ್ಚುತ್ತಲೂ ಇಲ್ಲ. ಮೈಸೂರು ಸಂಸ್ಥಾನದ ಪಂಚಾಯಿತಿಗಳ ಕಾರ್ಯಕ್ರಮಗಳಲ್ಲಿ ಹಣ ವಸೂಲಿ ಕೆಲಸವು ತೃಪ್ತಿಕರವಾಗಿಲ್ಲವೆಂದೇ ಹೇಳಬಹುದು ಇಲ್ಲಿಯ ೧೧,೨೫೫ ಪಂಚಾಯಿತಿಗಳ ಒಟ್ಟು ವರಮಾನ ೬೩,೫೮,೪೫೬ ರೂಪಾಯಿಗಳು ಇಷ್ಟು ಹಣದಲ್ಲಿ ೧೦,೪೪,೮೦೦ ರೂಪಾಯಿಗಳು ಮಾತ್ರ ೧೯೩೫–೩೬ನೆಯ ಇಸವಿಯಲ್ಲಿ ವಸೂಲಾಗಿದೆ ೭೩,೧೩,೬೫೬ ರೂಪಾಯಿಗಳು ಇನ್ನೂ ವಸೂಲಾಗಬೇಕು ಸರ್ಕಾರದ ವರದಿಯ ಪ್ರಕಾರ ಒಟ್ಟು ಗ್ರಾಮ ಪಂಚಾಯಿತಿಗಳಲ್ಲಿ ಶೇ ೭೫ರಷ್ಟು ಕ್ರಮವಾಗಿ ಮೀಟಿಂಗು (ಸಭೆ) ನಡೆಸುತ್ತಾ ಇಲ್ಲವೆಂದೂ, ಅವುಗಳು ವಸೂಲ್ಮಾಡಿದ ಅಲ್ಪ ಸ್ವಲ್ಪ ಹಣದಿಂದ ಕೂಡ, ಸರಿಯಾದ ಕೆಲಸ ನಡೆಸಲ್ಪಡುತ್ತಿಲ್ಲವೆಂದೂ ತಿಳಿಯುಬರುತ್ತದೆ ೧೯೩೫ನೆಯ ಇಸವಿಯಲ್ಲಿ ಗ್ರಾಮ ಪಂಚಾಯಿತಿ ಫಂಡಿಗೆ ಸೇರಿದ, ೩೦ ಲಕ್ಷ ರೂಪಾಯಿಗಳು ಸರ್ಕಾರದ ಖಜಾನೆಯಲ್ಲಿದ್ದಾಗ, ಅನೇಕ ಗ್ರಾಮ ಪಂಚಾಯಿತಿಗಳು ತಮ್ಮತಮ್ಮ ಗ್ರಾಮಗಳಲ್ಲಿ ಕಷ್ಟದಿಂದ ನರಳುತ್ತಿದ್ದ ರೈತರಿಗೆ ಬಾವಿ, ದೀಪ, ಕೈಗಾರಿಕಾ ಸೌಕರ್ಯಗಳನ್ನು ಹೆಚ್ಚು ಹೆಚ್ಚಾಗಿ ಕಲ್ಪಿಸಬಹುದಾಗಿತ್ತು ಆದರೆ ಅವು ಹಾಗೆ ಮಾಡದೆ, ತಮ್ಮ ಹಣವನ್ನು ಖಜಾನೆಗೆ ಸೇರಿಸಿ ಸುಮ್ಮನೆ ಕುಳಿತುಬಿಟ್ಟವು

ಹೀಗೆ ತೃಪ್ತಿಕರವಾದ ಮತ್ತು ವಿಸ್ತಾರವಾದ ಅಭಿವೃದ್ಧಿಕಾರ್ಯಕ್ರಮಗಳನ್ನು ಕೈಗೊಳ್ಳಲು ಪಂಚಾಯಿತಿಗಳಿಗೆ ಅನೇಕ ವಿಧವಾದ ಕಷ್ಟಗಳು ಪ್ರಾಪ್ತವಾಗುತ್ತಿವೆ ಇವುಗಳಲ್ಲಿ ಅತಿಮುಖ್ಯವಾದ ಕೆಲವು ಕಾರಣಗಳನ್ನು ಇಲ್ಲಿ ನಮೂದಿಸುವುದು ಯುಕ್ತವಾಗಿ ಕಾಣುತ್ತದೆ :—

೧ ಬ್ರಿಟಿಷರ ಆಳ್ವಿಕೆಯು ಪ್ರಾರಂಭವಾಗಿ ಸರ್ಕಾರದವರು ರೈತರ ಅಭಿವೃದ್ಧಿಕಾರ್ಯಗಳಲ್ಲಿ ತೊಡಗಿದಮೇಲೆ, ನಮ್ಮ ರೈತರು ತಾವು ಮಾಡುವ ಕರ್ತವ್ಯವನ್ನು ಬಿಟ್ಟು, ತಮಗೆ ಅವಶ್ಯಕವಾದ ಪ್ರತಿಯೊಂದು

ಕಾರ್ಯವನ್ನೂ ಸರ್ಕಾರದವರೇ ಮಾಡಬೇಕೆಂದು ಅಪೇಕ್ಷಿಸುತ್ತಿದ್ದಾರೆ ಯಾವಾಗ ಇದು ನಡೆಯುವುದಿಲ್ಲವೋ ಆಗ ಕೆಲವು ರೈತರು ಹಳ್ಳಿಯ ಮೇಲಣ ವ್ಯಾಮೋಹವನ್ನು ಬಿಟ್ಟು ನಗರಗಳನ್ನು ಸೇರುವುದಕ್ಕೆ ಪ್ರಾರಂಭಿಸಿದ್ದಾರೆ.

೨ ನಮ್ಮ ಹಳ್ಳಿಗಳಲ್ಲಿ ನಿಸ್ಪೃಹರಾದ ಮತ್ತು ವಿದ್ಯಾವಂತರಾದ ನಾಯಕರು ಇಲ್ಲದೇ ಇರುವುದು ಎರಡನೆಯ ಕಷ್ಟವಾಗಿದೆ ಈಗಿನ ಸಂದರ್ಭದಲ್ಲಿ ಪಂಚಾಯಿತಿ ಕೆಲಸಗಳನ್ನು ಸಾಂಗವಾಗಿ ನೆರವೇರಿಸುವುದಕ್ಕ ವಿದ್ಯಾವಂತರಾದ ನಾಯಕರು ಅತ್ಯಾವಶ್ಯಕ

೩. ಅನೇಕ ಪಂಚಾಯಿತಿಗಳ ಆಡಳಿತ ಕಾರ್ಯವು ಹಚ್ಚು ತಿಳಿವಳಿಕೆಯಿಲ್ಲದವರ ಕೈಯಲ್ಲಿ ಸೇರಿದೆ ಸರಿಯಾದವರು ಮುಂದೆ ಬಂದು ನಿಸ್ಪೃಹರಾಗಿ ಕೆಲಸಮಾಡಲು ಅಭಾವವಾಗಿದೆ ಈ ಕಾರಣದಿಂದ ಅನೇಕರು ಪಂಚಾಯಿತಿ ಕೆಲಸಗಳಿಗೆ ತಮ್ಮ ಸಹಕಾರವನ್ನು ನೀಡದೆ ಇದ್ದಾರ. ಅನೇಕರು ಪ್ರತಿಬಂಧಿಕಗಳಾಗಿಯೂ ಆಗಿದ್ದಾರೆ

೪ ಸಮಾಜಹಿತ ದೃಷ್ಟಿಯಿಂದ ಕೆಲಸಮಾಡುವ ಬುದ್ಧಿಯು ನಮ್ಮ ರೈತರಲ್ಲಿ ಇನ್ನೂ ಹಚ್ಚಾಗಿ ಉಂಟಾಗಿಲ್ಲ ಇದು ಹುಟ್ಟುವವರೆಗೂ ನಮ್ಮ ಪಂಚಾಯಿತಿ ಕೆಲಸಗಳು ಸಮರ್ಪಕವಾಗಿ ನಡಯಲಾರವು

೫ ಈಗಿನ ಪಂಚಾಯಿತಿ ಕಾರ್ಯಗಳಲ್ಲಿ ಸರ್ಕಾರದ ಅಧಿಕಾರಿಗಳು ಹೆಚ್ಚಾಗಿ ಪ್ರವೇಶಿಸುತ್ತಿರುವುದರಿಂದ, ಪಂಚಾಯಿತಿಯ ಸದಸ್ಯರು ಅಧಿಕಾರಿಗಳ ನಮ್ರಸೇವಕರಾಗಿ ಸಾರ್ವಜನಿಕ ಹಿತದಿಂದ ಸ್ವತಂತ್ರವಾಗಿ ಕೆಲಸಮಾಡುವುದಕ್ಕೆ ಅಶಕ್ತರಾಗಿದ್ದಾರೆ, ಎಂಬುದು ಕೆಲವರ ಆಕ್ಷೇಪಣೆ ಈ ಆಕ್ಷೇಪಣೆಕಾರರು ಈ ರೀತಿಯಾದ ತಾಬೇದಾರಿಯು ಸ್ಥಳೀಯ ಸಂಸ್ಥೆಗಳ ಹಿತದಲ್ಲಿ ಒಳ್ಳೆಯದಲ್ಲವೆಂದೂ, ಗ್ರಾಮ ಪಂಚಾಯಿತಿಗಳ ಸ್ವತಂತ್ರಾಧಿಕಾರಕ್ಕೆ ಇದು ಸಂಚಕಾರವೆಂದೂ ವಾದಿಸುತ್ತಾರೆ ಆದರೆ ಇದರಲ್ಲಿ ಸತ್ಯಾಂಶವಿಲ್ಲವೆಂದೇ ಹೇಳಬೇಕಾಗುವುದು

ಈಗಿನ ಅನುಭವದಲ್ಲಿ ನಮ್ಮ ಗ್ರಾಮ ಪಂಚಾಯಿತಿಗಳ ಪರಿಸ್ಥಿತಿಯನ್ನು ನೋಡಿದರೆ ತಮ್ಮಷ್ಟಕ್ಕೆ ತಾವೇ ಕೆಲಸಮಾಡಿಕೊಳ್ಳಲು ಅವುಗಳಿಗೆ ಇನ್ನೂ ಯೋಗ್ಯತೆ ಇಲ್ಲ. ಅನೇಕ ಹಳ್ಳಿಗಳಲ್ಲಿ ಸರಿಯಾದ ಸನ್ನಿವೇಶವೂ

ನಿಸ್ಪೃಹರಾದ ಜನಗಳು ಇದ್ದರೂ ಕೂಡ ಸರಿಯಾಗಿ ದಾರಿ ತೋರಿಸುವ ಹೊರಗಿನ ಒಂದು ಶಕ್ತಿಯು ಇದ್ದೇ ಇರಬೇಕು ಅಂತಹ ಶಕ್ತಿಗೆ ಸಾಮರ್ಥ್ಯ, ಅಧಿಕಾರ, ನಿರ್ವಾಹ—ಇವೆಲ್ಲಾ ಇರಲೇ ಬೇಕು ಒಳ್ಳೆಯ ವಿದ್ಯಾವಂತ ಸದಸ್ಯರನ್ನೊಳಗೊಂಡು ಕ್ಲ್ಪಪ್ತ ವರಮಾನವಿರುವ ಅನೇಕ ಉತ್ತಮ ಸ್ಥಳೀಯ ಸಂಸ್ಥೆಗಳೇ ಅಸಮರ್ಪಕ ಮತ್ತು ಅವ್ಯವಸ್ಥಿತ ಕಾರ್ಯಕ್ರಮವನ್ನು ಅನುಸರಿಸುತ್ತಿರುವಾಗ, ಇನ್ನು ಈ ಗ್ರಾಮ ಸಂಸ್ಥೆಗಳ ಪಾಡೇನು? ಇವುಗಳು ಹೇಗೆತಾನೆ ತಮ್ಮ ಕಾರ್ಯಕಲಾಪಗಳನ್ನು ಉತ್ತಮ ರೀತಿಯಲ್ಲಿ ನಡೆಸಲು ಅರ್ಹವಾಗುವುವು? ಎಂಬುದನ್ನು ನಾವು ವಿಚಾರಮಾಡಬೇಕು ಅಲ್ಲಿ ಇಲ್ಲಿ ಒಂದೊಂದು ಪಂಚಾಯಿತಿಗಳು ಚೆನ್ನಾಗಿ ಕೆಲಸಮಾಡುತ್ತಿರಬಹುದು ಇದನ್ನೇ ಉದಾಹರಣೆಯನ್ನಾಗಿ ಇಟ್ಟುಕೊಂಡು, ಎಲ್ಲಾ ಪಂಚಾಯಿತಿಗಳು ತಾವೇ ಸ್ವತಂತ್ರನಾಗಿ ಕೆಲಸ ಮಾಡುವಂತ ಏರ್ಪಡಿಸುವ ಪ್ರಯತ್ನವು ಸದ್ಯದಲ್ಲಿ ಅಷ್ಟು ಒಳ್ಳೆಯ ದಾಗಿ ಕಾಣುವುದಿಲ್ಲ ಏಕೆಂದರೆ ನಮ್ಮ ರೈತರು ಇನ್ನೂ ಹೆಚ್ಚು ವಿದ್ಯಾ ವಂತರಾಗಬೇಕು ಹೆಚ್ಚು ನಿಸ್ಪೃಹತೆಯನ್ನು ತೋರಿಸಬೇಕು ಹೆಚ್ಚು ಸಾರ್ವಜನಿಕ ಕೆಲಸಗಳಲ್ಲಿ ಭಾಗವಹಿಸಬೇಕು ಈ ವಿಚಾರಗಳಲ್ಲಿ ಅವರಿಗೆ ಹೆಚ್ಚು ಅನುಭವ ಉಂಟಾಗಬೇಕು ಹೀಗಾಗುವವರೆಗೂ ಹೊರಗಿನ ಅಧಿಕಾರ ಶಕ್ತಿಯು ಅವರಿಗೆ ಮಾರ್ಗದರ್ಶಕವಾಗಿರಬೇಕು ಆದುದರಿಂದ ಸರ್ಕಾರದ ಅಧಿಕಾರಿಗಳ ಮೇಲ್ವಿಚಾರಣೆಯು ಈಗ ಅವಶ್ಯಕವೆಂದೇ ಹೇಳಬಹುದು ಈ ಮೇಲ್ವಿಚಾರಣೆಯೂ, ಬುದ್ಧಿವಾದವೂ ಈ ಸಂಸ್ಥೆಗಳ ಕೃತಕ ಶ್ವಾಸೋಚ್ಛ್ವಾಸ ಕ್ರಿಯೆಗಳೆಂದೇ ನಾವು ಭಾವಿಸಬಹುದು

ಸಾಮಾನ್ಯವಾಗಿ ಪಂಚಾಯಿತಿಗಳ ಮೇಲ್ವಿಚಾರಣೆಯು ರೆವಿನ್ಯೂ ಇಲಾಖೆಯ ಆಡಳಿತಕ್ಕೆ ಸೇರಿದೆ ಈ ಇಲಾಖೆಯ ಸ್ಥಳೀಯ ಅಧಿಕಾರಿ ಗಳಿಗೆ ಅನೇಕ ಕೆಲಸಗಳಿರುವುದರಿಂದ, ಪಂಚಾಯಿತಿಗಳ ಅಭಿವೃದ್ಧಿಗೆ ಎಷ್ಟು ಲಕ್ಷ್ಯಬೇಕೋ ಅಷ್ಟನ್ನು ಅವರು ಕೊಡುವುದಕ್ಕೆ ಅವಕಾಶವಿಲ್ಲ ಎಂಬುದು ಕೆಲವರ ಮತ. ಸ್ಥಳೀಯ ವಿದ್ಯಮಾನಗಳನ್ನು ಸಾವಧಾನ ವಾಗಿ ವಿಮರ್ಶೆಮಾಡಿ, ಈ ಗ್ರಾಮ ಸಂಸ್ಥೆಗಳಿಗೆ ಸರಿಯಾದ ಉತ್ತೇಜನ ವನ್ನು ಸಮರ್ಪಕವಾದ ರೀತಿಯಲ್ಲಿ ಕೊಡುವುದಕ್ಕೆ ಅವರಿಗೆ

ಶಕ್ಯವಿಲ್ಲವೆಂಬುದರಲ್ಲಿ ನಿಜಾಂಶವಿದೆ ಪಂಚಾಯಿತಿಗಳ ವರಮಾನ ವಸೂಲಿ ಹಣದಲ್ಲಿ ಹೆಚ್ಚು ಬಾಕಿ ಬಿದ್ದಿರುವುದಕ್ಕೆ ಇದು ಮುಖ್ಯ ಕಾರಣ ವೆಂದು ಹೇಳಬಹುದು ಪಂಚಾಯಿತಿಗಳ ಸಂಖ್ಯೆಯು ದಿನೇ ದಿನೇ ಹೆಚ್ಚು ತ್ತಿದೆ ಅವುಗಳ ಆದಾಯ ವೆಚ್ಚವೂ, ಲಕ್ಷಾಂತರ ರೂಪಾಯಿಗಳ ಆಡಳಿತ ವಾಗಿದೆ ಆದುದರಿಂದ ಗ್ರಾಮ ಪಂಚಾಯಿತಿಗಳ ಮೇಲ್ವಿಚಾರಣೆಗಾಗಿ, ಪ್ರತ್ಯೇಕ ಅಧಿಕಾರಿಗಳನ್ನು ನೇಮಿಸುವುದು ಒಳ್ಳೆಯದು ಹೀಗೆ ಪ್ರತ್ಯೇಕ ಅಧಿಕಾರಿಗಳಿದ್ದರೆ, ವಸೂಲಿಕ್ರಮವು ಸರಿಯಾಗಿ ನಡೆಯುವುದಲ್ಲದೆ ಈಗಿನ ಸಂದರ್ಭಕ್ಕೆ ಮುಖ್ಯವಾಗಿರುವ ಗ್ರಾಮಾಭಿವೃದ್ಧಿ ಪ್ರಚಾರಕಾರ್ಯಗಳಿಗೆ ಅನುಕೂಲವಾಗುವುದು ಕ್ರಮೇಣ ಈ ಗ್ರಾಮ ಸಂಸ್ಥೆಗಳಿಗೆ ತಮ್ಮ ಕೆಲಸಗಳನ್ನು ತಾವೇ ಸ್ವತಂತ್ರವಾಗಿ ನಡೆಸಿಕೊಂಡುಹೋಗುವ ಅರ್ಹತೆ ಯನ್ನುಂಟುಮಾಡಬಹುದು

ಸುಶಿಕ್ಷಿತರಾದ ಪಂಚಾಯಿತಿ ಅಧಿಕಾರಿಗಳು, ಉತ್ತಮವಾದ ಮೇಲ್ವಿಚಾರಣೆಗೆ ಕಣ್ಣು ಕಿವಿಗಳಂತೆ ವರ್ತಿಸುವುದರಲ್ಲಿ ಸಂದೇಹವಿಲ್ಲ. ಪಂಚಾಯಿತಿಗಳು ಸರಿಯಾದ ಕ್ರಮದಲ್ಲಿ ಕೆಲಸಮಾಡುವಂತೆ ಬುದ್ಧಿವಾದ ಹೇಳುವುದು, ಅವುಗಳ ಲೆಕ್ಕಪತ್ರಗಳನ್ನು ಶೋಧಿಸುವುದು, ಗ್ರಾಮಾಭಿ ವೃದ್ಧಿ ಕಾರ್ಯಗಳಲ್ಲಿ ಹೆಚ್ಚು ಅನುಭವವನ್ನುಂಟುಮಾಡುವುದು — ಇವೇ ಮುಂತಾದ ಕೆಲಸಗಳನ್ನು ಈ ಅಧಿಕಾರಿಗಳು ಅತ್ಯುತ್ತಮ ರೀತಿ ಯಲ್ಲಿ ನಡೆಸಬಹುದು ೧೯೩೩ನೆಯ ಇಸವಿಯಲ್ಲಿ ಒಂದೇ ಒಂದು ಪಂಚಾಯಿತಿಯ ಲೆಕ್ಕವನ್ನು ಅಲ್ಲಿಯ ಒಂದು ಡಿಸ್ಟ್ರಿಕ್ಟ್ ಬೋರ್ಡು ಶೋಧನೆ ಮಾಡಿದೆ ಎಂಬದಾಗಿ, ಬೊಂಬಾಯಿ ಸರ್ಕಾರದವರು ಆಕ್ಷೇಪಿ ಸಿದ್ದಾರೆ ಪಂಜಾಬು ದೇಶದಲ್ಲಿ ಪಂಚಾಯಿತಿಗಳ ಮೇಲ್ವಿಚಾರಣೆ ಯನ್ನು ನಡೆಸುವುದಕ್ಕೆ ಬೇರೆ ಅಧಿಕಾರಿಗಳನ್ನು ನೇಮಿಸಿದ್ದಾರೆ ಸಂಯುಕ್ತ ಪ್ರಾಂತದ ಡಿಸ್ಟ್ರಿಕ್ಟು ಮತ್ತು ಸಬ್-ಡಿವಿಜನಲ್ ಅಧಿಕಾರಿಗಳು ಇತರ ಹೆಚ್ಚಿಗೆ ಕೆಲಸಗಳ ಅನಾನುಕೂಲತೆಯಿಂದ, ಒಂದು ವರ್ಷದಲ್ಲಿ ೨೦ ಪಂಚಾಯಿತಿಗಳ ಮೇಲ್ವಿಚಾರಣೆ ನಡೆಸಿದ್ದಾರೆ. ಇನ್ನೂ ಹೆಚ್ಚುಮಾಡ ಬೇಕಾಗಿತ್ತು ಎಂಬದಾಗಿ ಸರ್ಕಾರದವರು ಹೇಳಿದ್ದಾರೆ ಮೈಸೂರು ಸಂಸ್ಥಾನದಲ್ಲಿಯೂ ಕೂಡ ಪಂಚಾಯಿತಿಗಳ ಲೆಕ್ಕಪತ್ರಗಳನ್ನು ಸ್ಥಳೀಯ

ಶೋಧನಕಾರರು ಹೆಚ್ಚಾಗಿ ಪರೀಕ್ಷಿಸಬೇಕೆಂದೂ, ಉದಾಸೀನತೆಯಿಂದಲೂ, ಅಜಾಗ್ರತೆಯಿಂದಲೂ ಕೆಲಸಮಾಡುತ್ತಿರುವ ಪಂಚಾಯಿತಿಗಳ ವಿಷಯದಲ್ಲಿ ಅಧಿಕಾರಿಗಳು ಹಚ್ಚು ಗಮನವಹಿಸಬೇಕೆಂದೂ ಸರ್ಕಾರದವರು ಅಭಿಪ್ರಾಯಪಟ್ಟಿದ್ದಾರೆ ಆದುದರಿಂದ ಗ್ರಾಮ ಪಂಚಾಯಿತಿಗಳು ನಿಜವಾದ ಪ್ರಜಾಧಿಕಾರ ನಡೆಯಿಸಿ, ಹಳ್ಳಿಯ ಜೀವನವನ್ನು ಉತ್ತಮಪಡಿಸಬೇಕಾದರೆ, ಅವುಗಳ ಮೇಲ್ವಿಚಾರಣೆಗೆ ನಿಸ್ಪೃಹರಾದ, ಅಭಿಮಾನಯುಕ್ತರಾದ, ಪ್ರತ್ಯೇಕ ಅಧಿಕಾರಿಗಳನ್ನು ನೇಮಿಸಬೇಕು

ಗ್ರಾಮ ಪಂಚಾಯಿತಿಗಳು ತೃಪ್ತಿಕರವಾಗಿ ಕೆಲಸಮಾಡಬೇಕಾದರೆ ಅವುಗಳ ವರಮಾನವನ್ನು ಉತ್ತಮಪಡಿಸಬೇಕು ಗ್ರಾಮ ವ್ಯವಹಾರಗಳ ತೀರ್ಮಾನವನ್ನು ಅವುಗಳಿಗೆ ವಹಿಸುವುದರಿಂದ, ಸ್ಟಾಂಪು, ಫೀಜು, ಜುಲ್ಮಾನೆ— ಇವುಗಳಿಂದ ವರಮಾನವು ಸ್ವಲ್ಪಮಟ್ಟಿಗೆ ಹೆಚ್ಚಬಹುದು ಯಾವಾಗ ಪಂಚಾಯಿತಿಗಳು ಕಾನೂನುಬದ್ಧವಾದ ಸಂಸ್ಥೆಗಳೆಂಬದಾಗಿ ಏರ್ಪಟ್ಟವೋ, ಆಗ ಸರ್ಕಾರದವರು ಅವುಗಳಿಗೆ ಸರಿಯಾದ ವರಮಾನವುಂಟಾಗುವ ಏರ್ಪಾಡು ಮಾಡಬೇಕು ಆಗಲೇ ಅವುಗಳು ಗ್ರಾಮಗಳಲ್ಲಿ ಉತ್ತಮ ಕಾರ್ಯಕ್ರಮಗಳನ್ನು ಕೈಗೊಳ್ಳಲು ಅರ್ಹವಾಗುವುವು

ಗ್ರಾಮಗಳಲ್ಲಿ ಹಣ ಕೊಡಲಾರದ ಬಡವರು ಇರುವುದು ನಿಶ್ಚಯ ಆದರೆ ಅಂತಹವರು ತಮ್ಮ ಬಾಹುಬಲದಿಂದಲಾದರೂ ಗ್ರಾಮಹಿತದೃಷ್ಟಿಯಿಂದ, ಗ್ರಾಮದ ಅಭಿವೃದ್ಧಿಗಾಗಿ, ಊರೊಟ್ಟಿನ ಕೆಲಸಗಳಿಗೆ ದುಡಿಯಬೇಕು ಮೌರ್ಯವಂಶದ ಅರಸರಿಗೆ ಮಂತ್ರಿಯಾಗಿದ್ದ ಕೌಟಿಲ್ಯನ ಕಾಲದಲ್ಲಿ ಕೂಡ, ಊರೊಟ್ಟಿನ ಕೆಲಸಗಳಿಗೆ ಬರದೆ ತಪ್ಪಿಸಿಕೊಂಡ ರೈತರಮೇಲೆ ಪ್ರತ್ಯೇಕ ತೆರಿಗೆ ಹೊರಿಸಿ, ಅಂತಹ ಕೆಲಸದ ಪ್ರಯೋಜನವು ಅವನಿಗಿಲ್ಲದಂತೆ ಮಾಡುತ್ತಿದ್ದರೆಂಬದಾಗಿ, ಚರಿತ್ರೆಯಿಂದ ನಾವು ತಿಳಿಯಬಹುದು "ನಮ್ಮ ಹಳ್ಳಿಗಳು ಉತ್ತಮವಾದ ಸ್ಥಿತಿಯನ್ನು ತ್ವರಿತದಲ್ಲಿ ಹೊಂದಬೇಕಾದರೆ, ಹಳ್ಳಿಯ ಪ್ರತಿಯೊಬ್ಬ ರೈತನೂ, ಊರೊಟ್ಟಿನ ಕೆಲಸಗಳಿಗಾಗಿ, ವಾರಕ್ಕೊಂದುಸಲವಾದರೂ ಕಷ್ಟಪಟ್ಟು ದುಡಿಯಲೇಬೇಕು" ಎಂಬದಾಗಿ ಮೈಸೂರು ಸಂಸ್ಥಾನದ ಸಚಿವಶ್ರೇಷ್ಠ ಸರ್ ಮಿರ್ಜಾ ಇಸ್ಮೇಲರು ಹೇಳಿರುವ ಮಾತನ್ನು ಪ್ರತಿಯೊಬ್ಬ ರೈತನೂ ಜ್ಞಾಪಕದಲ್ಲಿಡಬೇಕು

ನಮ್ಮ ಗ್ರಾಮ ಪಂಚಾಯಿತಿಗಳು ಅಭಿವೃದ್ಧಿಹೊಂದಿ, ಉತ್ತಮ ರೀತಿಯ ಸಂಸ್ಥೆಗಳಾಗಬೇಕಾದರೆ, ಅವುಗಳ ಕೆಲಸವು ನಾನಾವಿಧವಾಗಿ ಬೇಕು ನಮ್ಮ ರೈತರಿಗೆ ಮೊದಲು ಸೇವೆಯ ಮಹತ್ವವನ್ನೂ ಕೆಲಸದ ಗೌರವವನ್ನೂ ಚೆನ್ನಾಗಿ ತಿಳಿಸಬೇಕು ಇದರಿಂದ ಅವರ ಸೋಮಾರಿತನವು ಮೊದಲು ತೊಲಗುವಂತಾಗಬೇಕು ಪಾದ್ರಿಗಳು ಅವರ ಮತಪ್ರಚಾರದಲ್ಲಿ ಯಾವ ವಿಧವಾದ ಉತ್ಸಾಹವನ್ನು ಹೊಂದಿದ್ದಾರೆಯೋ, ನಮ್ಮ ಅಧಿಕಾರಿಗಳು ಅದಕ್ಕಿಂತ ಹೆಚ್ಚು ಉತ್ಸಾಹವನ್ನು ತೋರಿಸಿ, ಹೆಚ್ಚು ಪ್ರಚಾರ ಕಾರ್ಯ ನಡೆಸಬೇಕು ಈ ರೀತಿಯಾದ ಅಭಿಮಾನದಿಂದ ಕೆಲಸಮಾಡಿದರೆ ರೈತರು ಉದ್ಧಾರವಾಗುವುದರಲ್ಲಿ ಸಂದೇಹವಿಲ್ಲ

ಗ್ರಾಮ ಪಂಚಾಯಿತಿಗಳ ಸ್ಥಿತಿಯನ್ನು ಉತ್ತಮಪಡಿಸುವುದಕ್ಕೆ ಮೈಸೂರು ಸರ್ಕಾರದವರು ೧೯೩೬ನೆಯ ಇಸವಿಯ ಗ್ರಾಮ ಪಂಚಾಯಿತಿ ಮಸೂದೆಯ ತಿದ್ದುಪಡಿಯೊಂದನ್ನು, ೧೯೩೭ನೆಯ ಇಸವಿಯ ಪ್ರಜಾ ಪ್ರತಿನಿಧಿ ಸಭೆಯ ದಸರಾ ಅಧಿವೇಶನದಲ್ಲಿ ತಂದಿದ್ದಾರೆ ಇದು ಹಿಂದೆ ಇದ್ದ ಕಲವು ದೋಷಗಳನ್ನು ನಿರ್ಮೂಲಮಾಡಿ, ಪಂಚಾಯಿತಿಗಳ ಆರ್ಥಿಕಸ್ಥಿತಿಯನ್ನು ಉತ್ತಮಪಡಿಸುವುದಕ್ಕೆ ಬಹಳ ಸಹಾಯಕವಾಗಿದೆ ಇದರ ಪ್ರಕಾರ ಪ್ರತಿಯೊಂದು ಪಂಚಾಯಿತಿಯವರು ನಿರ್ಬಂಧಕವಾಗಿ ವಿಧಿಸಬೇಕಾದ ತೆರಿಗೆಗಳು ಎಷ್ಟು ಎಂಬುದನ್ನು ಆಯಾ ತಾಲ್ಲೂಕಿನ ಅಮಲ್ದಾರರೇ ಗೊತ್ತುಮಾಡಬೇಕು ಪ್ರತಿಯೊಂದು ಗ್ರಾಮ ಪಂಚಾಯಿತಿಯ ತೆರಿಗೆ ಪಟ್ಟಿಯನ್ನು ಅಮಲ್ದಾರರೇ ತಯಾರಿಸಿ, ತೆರಿಗೆ ವಸೂಲಿಗೆ ಅವರೇ ಜವಾಬ್ದಾರರಾಗಿರಬೇಕಾಗುತ್ತದೆ ತೆರಿಗೆಯ ಬಾಕಿ ಮೊಬಲಗು ವಸೂಲುಮಾಡುವ 'ಲಿಮಿಟೇಷನ್' ವಾಯಿದೆಯನ್ನು ೩ ವರ್ಷದಿಂದ ೬ ವರ್ಷಕ್ಕೆ ಹೆಚ್ಚಿಸಲಾಗುವುದು ಈ ತಿದ್ದುಪಡಿಯಿಂದ ಗ್ರಾಮ ಪಂಚಾಯಿತಿಗಳು ಚೆನ್ನಾಗಿ ಕೆಲಸಮಾಡುವುದಕ್ಕೆ ಅವಕಾಶ ಕಲ್ಪಿಸಿದಂತಾಗಿದೆ

"ಸರ್ಕಾರದವರು ಕೈಗೊಂಡಿರುವ ಕಾರ್ಯಕ್ರಮಗಳ ಪೈಕಿ ಗ್ರಾಮ ಪುನರುಜ್ಜೀವನಕ್ಕೆ ಸಂಬಂಧಪಟ್ಟ ಕಾರ್ಯಕ್ರಮಕ್ಕಿಂತ ಹೆಚ್ಚು ಪ್ರಾಮುಖ್ಯವಾದುದು ಮತ್ತೆ ಯಾವುದೂ ಇಲ್ಲವೆಂದೇ ನನ್ನ ಭಾವನೆ.

ಗ್ರಾಮಗಳ ಅಭಿವೃದ್ಧಿಗಾಗಿ ನಡೆಯಿಸತಕ್ಕ ಕಾರ್ಯಕಲಾಪಗಳು ನಿಜವಾಗಿಯೂ ಮತ್ತು ಶಾಶ್ವತವಾಗಿಯೂ, ಗ್ರಾಮಗಳ ಪರಿಸ್ಥಿತಿಯನ್ನು ಉತ್ತಮಗೊಳಿಸುವ ರೀತಿಯಲ್ಲಿ ಕೆಲಸ ನಡೆಯಿಸತಕ್ಕುವಾಗಿವೆ'' ಎಂಬದಾಗಿ ಮೈಸೂರು ದಿವಾನ್ ಸಾಹೇಬರು ಅಪ್ಪಣೆ ಕೊಡಿಸಿದ್ದಾರೆ ಇದರಿಂದ ಮೈಸೂರು ಸರ್ಕಾರದವರು ರೈತರ ವಿಷಯದಲ್ಲಿಯೂ, ಗ್ರಾಮಾಭಿವೃದ್ಧಿಕಾರ್ಯಗಳಲ್ಲಿಯೂ ಎಷ್ಟರಮಟ್ಟಿನ ಆಸಕ್ತಿ ವಹಿಸಿ, ಅವುಗಳಿಗೆ ಎಲ್ಲಕ್ಕಿಂತ ಹೆಚ್ಚು ಪ್ರಾಮುಖ್ಯತೆ ಕೊಟ್ಟಿದ್ದಾರೆಂಬುದು ತಿಳಿಯಬರುತ್ತದೆ

ಒಟ್ಟಿನಲ್ಲಿ ನಮ್ಮ ರೈತರ ಉದ್ಧಾರವು ಗ್ರಾಮ ಪಂಚಾಯಿತಿಗಳ ಮೂಲಕವೇ ನಡೆಯಬೇಕು ಸಮಾಜದ ಹಿತಕ್ಕಾಗಿ, ಗ್ರಾಮಾಭಿವೃದ್ಧಿ ಕೆಲಸಗಳಿಗಾಗಿ, ಹಳ್ಳಿಗಳಲ್ಲಿ ವಾಸಮಾಡುವ ಪ್ರತಿಯೊಬ್ಬ ಮನುಷ್ಯನೂ ಉತ್ಸಾಹದಿಂದಲೂ, ಹುರುಪಿನಿಂದಲೂ ಕೆಲಸಮಾಡಬೇಕು ಇದಕ್ಕಾಗಿ ಸ್ವಾರ್ಥತ್ಯಾಗಿಗಳಾದ ಮತ್ತು ಶಕ್ತಿಯುತರಾದ ನಾಯಕರು ಮುಂದೆ ಬರಬೇಕು ಅಂತಹ ನಾಯಕರು ತಯಾರಾಗುವವರೆಗೂ, ಸರ್ಕಾರದ ಅಧಿಕಾರಿಗಳೇ ಆ ಪಾತ್ರವನ್ನು ವಹಿಸಬೇಕು ಕೆಲವು ಉತ್ತಮ ಪಂಚಾಯಿತಿಗಳಿಗೆ ಉತ್ತೇಜನಕೊಟ್ಟು, ಪಾರಿತೋಷಕ ಅಥವಾ ಪ್ರಶಸ್ತಿ ಪತ್ರಗಳನ್ನು ಕೊಡುವುದರ ಮೂಲಕ ಉಳಿದವುಗಳಲ್ಲಿ ಪೈಪೋಟಿಯನ್ನು ಹುಟ್ಟಿಸಬೇಕು ಹೀಗೆ ಮಾಡಿದರೆ ಎಲ್ಲಾ ಪಂಚಾಯಿತಿಗಳು ಚೆನ್ನಾಗಿ ಕೆಲಸಮಾಡುವಂತೆ ಪ್ರೋತ್ಸಾಹಪಡಿಸಿದಹಾಗೆ ಆಗುತ್ತದೆ ಹೀಗೆ ಅನೇಕ ರೀತಿಯಾದ ಕಾರ್ಯಕ್ರಮಗಳನ್ನು ಅನುಸರಿಸಿ, ಗ್ರಾಮ ಪಂಚಾಯಿತಿಗಳಿಗೆ ಉತ್ತೇಜನಕೊಟ್ಟರೆ, ಅವು ನಮ್ಮ ಮಾದರಿ ಮೈಸೂರು ಸಂಸ್ಥಾನದ ಮಾದರಿ ಸ್ಥಳೀಯ ಸಂಸ್ಥೆಗಳಾಗುವುದರಲ್ಲಿ ಸಂದೇಹವಿಲ್ಲ

# ೧೧. ಸಮಾಜ ಮತ್ತು ಸೌಂದರ್ಯೋಪಾಸನೆ

ಮಾನವರ ಪ್ರಾಚೀನ ಜೀವನದ ಅಂತಸ್ತನ್ನು ಮನುಷ್ಯೋತ್ಪತ್ತಿ ಶಾಸ್ತ್ರರೀತಿಯಾಗಿ ವಿಮರ್ಶೆಮಾಡಿದರೆ, ಮೊದಲು ಮಾನವನಿಗೆ ಪ್ರಾಣಿಗಳಂತೆಯೇ ಆಹಾರವನ್ನು ಒದಗಿಸಿಕೊಳ್ಳುವ ಕಾರ್ಯವೇ ಮುಖ್ಯವಾಗಿತ್ತೆಂದು ತಿಳಿದುಬರುವುದು ದೇಶ ಕಾಲ ಬದಲಾವಣೆಗಳಿಂದ ಉಂಟಾಗುತ್ತಿದ್ದ ಹೊರಗಿನ ಬಾಧಗಳನ್ನು ತಪ್ಪಿಸಿಕೊಳ್ಳಲು, ಅನಂತರ ಪ್ರಯತ್ನವಡಲಾಯಿತು ಈ ವಿಧ ಪ್ರಯತ್ನಗಳಲ್ಲೆಲ್ಲಾ ಪ್ರಾಣಿಗಳಂತೆಯೇ ಮಾನವರೂ ಕೂಡ, ಗುಂಪುಗುಂಪಾಗಿ ವಾಸಮಾಡುತ್ತಿದ್ದರೆಂದು, ಇತಿಹಾಸದಿಂದ ತಿಳಿದುಬರುವುದು

ಪ್ರಕೃತಿಸಿದ್ಧವಾದ ಆನುಕೂಲ್ಯಗಳನ್ನು ಉಪಯೋಗಿಸಿಕೊಂಡು, ಅದರಿಂದ ಉಂಟಾಗುತ್ತಿದ್ದ ಬಾಧಗಳನ್ನು ತಪ್ಪಿಸಿಕೊಳ್ಳಲು ಯಾವಾಗ ಮಾನವರು ಪ್ರಯತ್ನಿಸಿದರೋ, ಆಗ ಅವರು ಗುಹೆಗಳನ್ನಾಗಲಿ ಅಥವಾ ಗುಡಿಸಲುಗಳನ್ನಾಗಲಿ ವಾಸಕ್ಕಾಗಿ ಆಶ್ರಯಿಸಬೇಕಾಯಿತು ಪ್ರಾಚೀನ ಅನಾಗರಿಕ ಮನುಷ್ಯರು ಮೊದಲು, ಹಣ್ಣುಹಂಪಲುಗಳನ್ನು ತಿಂದು, ಎಲೆ, ಚರ್ಮ ಮುಂತಾದುವನ್ನು ಹೊದೆದುಕೊಂಡು ಗುಂಪುಗುಂಪಾಗಿ ವಾಸಿಸುತ್ತಿದ್ದರು ಅನಂತರ ಬೇಟೆ, ಮೀನು ಹಿಡಿಯುವುದು ಮುಂತಾದುವುಗಳಿಂದ ಜೀವನ ನಡೆಸುತ್ತಿದ್ದರು ಇದಕ್ಕಾಗಿ ಅವರು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಯಾವ ಅಡಚಣೆಯೂ ಇಲ್ಲದ ಪ್ರಯಾಣ ಮಾಡಬೇಕಾಯಿತು ಕೆಲವು ಕಾಲದಮೇಲೆ, ಈ ರೀತಿಯ ವಲಸೆ ಜೀವನದಲ್ಲಿ (Nomadic life) ಜಿಹಾಸೆ ಹುಟ್ಟಿತು ಒಂದೇ ಸ್ಥಳದಲ್ಲಿ ನಿಂತು ಸಾಧು ಪ್ರಾಣಿಗಳನ್ನು ಹಿಡಿದು, ಅವುಗಳ ಪಾಲನೆಮಾಡುತ್ತಾ ಜೀವನ ನಡೆಸಲು ಮಾನವರು ಪ್ರಾರಂಭಿಸಿದರು ಆಮೇಲೆ ಪ್ರಕೃತಿ ಸನ್ನಿವೇಶಗಳನ್ನು ಉಪಯೋಗಿಸಿಕೊಂಡು ಜಮೀನಿನಲ್ಲಿ ಕೆಲಸಮಾಡಿ ಜೀವನಕ್ಕೆ ಬೇಕಾದ ದವಸಗಳನ್ನು ಬೆಳೆಯಲಾರಂಭಿಸಿದರು ಹೀಗೆ ಜೀವನದ ಅಂತಸ್ತುಗಳು ಬದಲಾವಣೆಯಾದಹಾಗೆಲ್ಲಾ, ಮಾನವ ಗುಂಪಿನ ಅಥವಾ ಸಂಘದ ಪರಸ್ಪರ ಸಂಬಂಧವು ಹೆಚ್ಚು ಹೆಚ್ಚಾಗಿ ಬೆಳೆಯು

ಲಾರಂಭಿಸಿತು ಸಮಾಜದ ಕಟ್ಟುಪಾಡುಗಳು ಒಂದೊಂದಾಗಿ ಏರ್ಪಟ್ಟವು ಈ ಕಟ್ಟುಪಾಡುಗಳಿಂದ ಈ ಸಂಸ್ಥೆಗಳಲ್ಲಿ ಒಂದು ಬಗೆಯ ಹದ್ದುಬಸ್ತು ಏರ್ಪಟ್ಟಿತು ಕಾಲಕ್ರಮದಲ್ಲಿ ಈ ಪದ್ಧತಿಗಳೂ, ಸಂಸ್ಥೆಗಳೂ ಅಭಿವೃದ್ಧಿ ಹೊಂದುತ್ತಾ ಬಂದು, ಮಾನವರ ಆರ್ಥಿಕ ಜೀವನದ ಮೇಲೆ ತಮ್ಮ ಪ್ರತಿಭೆಯನ್ನು ಬೀರಲಾರಂಭಿಸಿದುವು

ಸಾಮಾನ್ಯವಾಗಿ ಮಾನವರ ಆರ್ಥಿಕ ಸಂಸ್ಥೆಗಳನ್ನು 'ವೈಯಕ್ತಿಕ' ಮತ್ತು 'ಸಾಮಾಜಿಕ' ಎಂದು ಎರಡು ಪಂಗಡಗಳಾಗಿ ವಿಂಗಡಿಸಬಹುದು ಜೀವಶಾಸ್ತ್ರ ರೀತಿಯಲ್ಲಿ ಹೇಳುವುದಾದರೆ, 'ಪ್ಯಾಕ್ ಟೈಪ್' ಮತ್ತು 'ಹರ್ಡ್ ಟೈಪ್' ಎಂದು ಕರೆಯಬಹುದು ಕೇಂದ್ರೀಕೃತಾಧಿಕಾರ, ಆದಾಯದ ಆಶ, ಕಡುತರವಾದ ಶಿಸ್ತು, ಕೆಲಸಗಾರರ ಯೋಗಕ್ಷೇಮ ನಿರಾಕರಣೆ, ಪೈಪೋಟಿ ಧ್ವಂಸ — ಇವೇ ಮುಂತಾದುವು 'ಪ್ಯಾಕ್ ಟೈಪಿ'ನ ಮುಖ್ಯ ಲಕ್ಷಣಗಳು ಪಾಶ್ಚಾತ್ಯ ಸಮಾಜ ಜೀವನದಲ್ಲಿ ಈ ಲಕ್ಷಣಗಳೆಲ್ಲಾ ಪ್ರಧಾನವಾಗಿ ಕಂಡುಬರುತ್ತವೆ

ಎರಡನೆಯದಾದ 'ಹರ್ಡ್ ಟೈಪ್' ಅಥವಾ ಸಾಮಾಜಿಕ ವಿಧಾನದಲ್ಲಿ ಪ್ರಜಾಸತ್ತಾತ್ಮಕಾಧಿಕಾರ, ಆದಾಯದ ಹಂಚಿಕೆ, ಸಮಾಜದ ಬಡವರ ಮತ್ತು ಬಲಹೀನರ ರಕ್ಷಣೆ, ವ್ಯಕ್ತಿಯ ಅಭಿವೃದ್ಧಿಗೆ ಪ್ರೋತ್ಸಾಹ, ಸಮಾಜೋದ್ಧಾರದ ಕಾರ್ಯಕ್ರಮ — ಇವೇ ಮುಂತಾದುವು ಪ್ರಧಾನ ಲಕ್ಷಣಗಳಾಗಿರುತ್ತವೆ ನಾಗರಿಕತೆಯ ಬೆಳವಣಿಗೆಯಲ್ಲಿ ಈ ಪ್ರತಿಯೊಂದು ಲಕ್ಷಣಗಳೂ ಒಂದೊಂದು ರೀತಿಯಲ್ಲಿ ಸಮಾಜದ ಆರ್ಥಿಕ ಜೀವನದ ಮೇಲೆ ತಮ್ಮ ಪ್ರಭಾವವನ್ನು ಬೀರುತ್ತಿವೆ

ಪಾಶ್ಚಾತ್ಯ ದೇಶಗಳು ತಮ್ಮ ಆರ್ಥಿಕ ಜೀವನವನ್ನು ವೈಯಕ್ತಿಕ ಕಟ್ಟುಪಾಡಿಗೆ ಸಿಲುಕಿಸಿ, ವಿಜ್ಞಾನಶಾಸ್ತ್ರ ಪ್ರತಿಭೆಯಿಂದ, ವಸ್ತುರಚನಾ ಕ್ರಿಯೆಯಲ್ಲಿ ಮಹಾಕ್ರಾಂತಿಯನ್ನುಂಟುಮಾಡಿದುವು ಈ ಕ್ರಾಂತಿಯ ಫಲವಾಗಿ, ಅಲ್ಲಿಯ ಸಾಮಾಜಿಕ ಸಂಸ್ಥೆಗಳಲ್ಲಿ ಅನೇಕ ಮಾರ್ಪಾಟುಗಳುಂಟಾಗಿ, ಹೊಸ ಸಂಸ್ಥೆಗಳು ಉದ್ಭವಿಸಿದುವು ಈ ಬದಲಾವಣೆಯಿಂದ ಆರ್ಥಿಕ ಜೀವನವು ಸಮಾಜದ ಕಟ್ಟುಪಾಡಿನಿಂದ ಬಿಡುಗಡೆಹೊಂದಿ ವೈಯಕ್ತಿಕ ಸ್ವಾತಂತ್ರ್ಯವನ್ನು ಹೊಂದಿದಂತೆ ಇದೆ

ಭರತಖಂಡದ ಸಾಮಾಜಿಕ ಪದ್ಧತಿಯು, 'ಹರ್ಡ್‌ಟೈಪ್' ನಮೂನೆಗೆ ಸೇರಿದುದು ಮೊದಲಿನಿಂದಲೂ ಇಲ್ಲಿಯ ವ್ಯಾವಸಾಯಿಕ ನಾಗರಿಕತೆಯು, ಸಮಾಜದ ಆರ್ಥಿಕ ಜೀವನಕ್ಕೆ ಒಂದು ವಿಧವಾದ ನೈತಿಕ ಬಲವನ್ನು ಕೊಡುತ್ತಿದೆ ಆಧ್ಯಾತ್ಮಿಕ ಮತ್ತು ಉತ್ತಮ ಸಾಮಾಜಿಕ ಯೋಜನೆಯ ಫಲವೇ ಈ ನಾಗರಿಕತೆಯ ತಳಹದಿ ಇಲ್ಲಿಯ ಆರ್ಥಿಕ ಕಾರ್ಯಕ್ರಮಗಳು ಸಾಮಾಜಿಕ ಸಂಸ್ಥೆಗಳಿಂದಲೇ ನಿರ್ಧರಿಸಲ್ಪಟ್ಟುವು. ಆದುದರಿಂದಲೇ ರೈತರ ಕೃಷಿ, ಅವರ ವ್ಯಾಪಾರ ಮತ್ತು ಆರ್ಥಿಕ ಜೀವನದಮೇಲೆ ಸಾಮಾಜಿಕ ಸಂಸ್ಥೆಗಳು, ಹೆಚ್ಚು ಪರಿಣಾಮವನ್ನುಂಟು ಮಾಡುತ್ತಿವೆ

ಹಿಂದಿನಿಂದ ಬಂದ ಸಂಪ್ರದಾಯ ನಿಯಮಗಳು ಈಗಲೂ ಸಮಾಜದಲ್ಲಿ ಆಚರಣೆಯಲ್ಲಿವೆ ಅವಿಭಕ್ತ ಕುಟುಂಬ, ವ್ಯವಸಾಯ ಮತ್ತು ಕೈಗಾರಿಕೆಗಳಿಂದ ಬಂದ ಲಾಭ ವಿಭಜನಾ ಸಂಸ್ಥೆ, ಜಾತಿಪದ್ಧತಿ ಮುಂತಾದುವುಗಳೂ, ಕರ್ಮ, ವೈರಾಗ್ಯ, ಅಂಧಶ್ರದ್ಧೆ ಮುಂತಾದ ದೃಢನಂಬುಗೆಗಳೂ ಸಮಾಜದ ಆರ್ಥಿಕ ಜೀವನದಲ್ಲಿ ಪದೇ ಪದೇ ಏಳುತ್ತಿವ ಆದುದರಿಂದ ಗ್ರಾಮಾಭ್ಯುದಯ ತತ್ವಜ್ಞರು ಸಮಾಜದ ಆರ್ಥಿಕೋನ್ನತಿಯ ಜತೆಗೆ ಸಮಾಜ ಸಂಸ್ಥೆಗಳ ಅಭಿವೃದ್ಧಿಯನ್ನು ಜ್ಞಾಪಕದಲ್ಲಿಟ್ಟುಕೊಂಡು, ಆ ಸಂಸ್ಥೆ ಮತ್ತು ಸಂಪ್ರದಾಯಗಳ ಗುಣದೋಷಗಳನ್ನು ವಿಮರ್ಶೆಮಾಡಬೇಕು ಒಂದು ಗ್ರಾಮದ ಆರ್ಥಿಕೋನ್ನತಿಗೆ ಅಲ್ಲಿಯ ಸಮಾಜಾಭಿವೃದ್ಧಿ ಮತ್ತು ಸೌಂದರ್ಯ ಸುಖಮಯ ಸನ್ನಿವೇಶಗಳ ಏರ್ಪಾಡು, ಇವೆರಡೂ ಮುಖ್ಯವಾದ ಅಂಗಗಳು ಇವೆರಡೂ ಗ್ರಾಮಾಭಿವೃದ್ಧಿಯ ಮುಖ್ಯ ತತ್ವವಾಗಿರಬೇಕು

ಜಾತಿಪದ್ಧತಿಯು ಭರತಖಂಡದ ಸಾಮಾಜಿಕ ಸಂಸ್ಥೆಗಳಲ್ಲಿ ಬಹು ಮುಖ್ಯವಾದುದು ಇದರಿಂದ ಸಮಾಜವನ್ನು ಸಣ್ಣ ಸಣ್ಣ ಪಂಗಡಗಳನ್ನಾಗಿ ವಿಭಾಗಿಸಲು ಅನುಕೂಲವಾಗಿದೆ ಒಂದು ಪಂಗಡದವರು ಇನ್ನೊಂದು ಪಂಗಡದವರೊಡನೆ ಮದುವೆ, ಊಟ ಮುಂತಾದ ವ್ಯವಹಾರ ನಡೆಸುವುದಿಲ್ಲ. ಜನಜೀವನದಲ್ಲಿ ಜಾತಿಪದ್ಧತಿಗೆ ಹೆಚ್ಚು ಪ್ರಾಮುಖ್ಯತೆ ಬಂದಿದೆ ಜಾತಿ ನಿಯಮಗಳು ಸರ್ಕಾರದ ಕಾನೂನಿಗಿಂತ ಹೆಚ್ಚು

ಬೆಲೆಯುಳ್ಳವಾಗಿ ಪರಿಗಣಿಸಲ್ಪಡುತ್ತಿವೆ ಇವನ್ನು ಮೀರಿದವರಿಗೆ ಬಹಿಷ್ಕಾರವೇ ಮುಂತಾದ ಶಿಕ್ಷೆಗಳು ವಿಧಿಸಲ್ಪಡುತ್ತಿವೆ

ಜಾತಿಪದ್ಧತಿಯು ಯಾವಾಗ ನಮ್ಮ ಸಮಾಜದಲ್ಲಿ ಏರ್ಪಟ್ಟಿತು ಎಂಬುದು ತೊಡಕಾದ ಪ್ರಶ್ನೆ ಉಪನಿಷತ್ತುಗಳ ಕಾಲದಿಂದ ಈ ಪದ್ಧತಿ ಇದೆ ಮೊದಲು ಬ್ರಹ್ಮ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ನಾಲ್ಕು ಜಾತಿಗಳಿದ್ದುವು ಈ ವಿಭಜನೆಯು ಮೊದಲು ಅಷ್ಟು ಕಠಿಣವಾಗಿರಲಿಲ್ಲ ಬ್ರಾಹ್ಮಣರು ತಪಸ್ಸುಮಾಡಿ ವಿದ್ಯೆಯನ್ನು ಗಳಿಸಿ, ಇತರರಿಗೆ ಶಿಕ್ಷಣ ಕೊಡುವ ವೃತ್ತಿಯುಳ್ಳವರಾಗಿದ್ದರೆಂದೂ, ಕ್ಷತ್ರಿಯರು ಯುದ್ಧಮಾಡಿ ಜನರ ದಾಸ್ಯತ್ವವನ್ನು ಹೋಗಲಾಡಿಸಿ, ರಕ್ಷಣಾವೃತ್ತಿಯನ್ನು ಕೈಗೊಂಡಿದ್ದರೆಂದೂ, ವೈಶ್ಯರು ನಿತ್ಯಜೀವನದ ಪದಾರ್ಥಗಳ ಮಾರಾಟದ ವೃತ್ತಿಯನ್ನು ಕೈಗೊಂಡಿದ್ದರೆಂದೂ, ಮತ್ತು ಶೂದ್ರರು ವ್ಯವಸಾಯ ಮತ್ತು ಸೇವಾವೃತ್ತಿಯನ್ನು ಕೈಗೊಂಡಿದ್ದರೆಂದೂ ತಿಳಿದುಬರುವುದು ಮೇಲ್ಕಂಡ ನಾಲ್ಕು ವರ್ಣದವರೂ ಸಮಾಜಾಭಿವೃದ್ಧಿಗೆ ಅನ್ಯೋನ್ಯ ಸಹಾಯಕರಾಗಿದ್ದರೆಂದು ಪುರಾಣೇತಿಹಾಸಗಳಿಂದ ತಿಳಿಯಬಹುದು

ಇತರ ದೇಶಗಳ ಸಂಪರ್ಕವು ನಮ್ಮ ದೇಶಕ್ಕೆ ಹೆಚ್ಚಿದಹಾಗೆಲ್ಲಾ, ಈ ವರ್ಣಗಳು ತಮ್ಮ ತಮ್ಮ ಉಚ್ಚ್ರಧ್ಯೇಯಗಳನ್ನು ಮರೆಯುತ್ತಾ ಬಂದುವು ವ್ಯಕ್ತಿಸ್ವಾತಂತ್ರ್ಯ, ವ್ಯಕ್ತಿಲಾಭ, ಯಶಸ್ಸು ಮುಂತಾದ ದುರಾಶೆಗಳು ಸಮಾಜದಲ್ಲಿ ಬೇರೂರಲಾರಂಭಿಸಿದುವು ಜೀವನದ ಆರ್ಥಿಕ ಸಮಸ್ಯೆಯು ಕಠಿಣವಾದಹಾಗೆಲ್ಲಾ, ಬೇರೆ ಬೇರೆ ಕಸಬಿನವರು ಬೇರೆ ಬೇರೆ ಪಂಗಡಗಳನ್ನು ಮಾಡಿಕೊಂಡರು ಆರ್ಯರು ನಮ್ಮ ದೇಶಕ್ಕೆ ಬಂದಾಗ, ತಮ್ಮ ಸಮಾಜದ ನಾಗರಿಕತೆಯನ್ನು ಪ್ರತ್ಯೇಕವಾಗಿಡಲು ಬೇರೆ ಬೇರೆ ಜಾತಿಗಳನ್ನು ಕಲ್ಪಿಸಿದರೆಂದು ಚರಿತ್ರೆಯಿಂದ ತಿಳಿದುಬರುವುದು ಅಂತೂ ಜಾತಿಪದ್ಧತಿಯೇನೋ ದಿನೇ ದಿನೇ ವೃದ್ಧಿಯಾಗುತ್ತಿದೆ

ಜಾತಿಪದ್ಧತಿಯ ಗುಣದೋಷಗಳ ವಿಚಾರವಾಗಿ ವಿಮರ್ಶೆ ಮಾಡೋಣ ಸಮಾಜದಲ್ಲಿ ಆರ್ಜೇಯವಾಗಿ ಬಂದ ಪ್ರತಿಯೊಂದು ಕಸಬಿನ ಚತುರತೆಯನ್ನು ಕಾಪಾಡಿಕೊಂಡುಬಂದು, ಅದನ್ನು ಹೆಚ್ಚು ವಿಸ್ತರಿಸಿ, ಅಭಿವೃದ್ಧಿಪಡಿಸುವುದಕ್ಕೆ ಈ ಪದ್ಧತಿಯು ಸಹಾಯಕವಾಗಿದೆ

ಒಂದೊಂದು ಜಾತಿಯೂ ಪ್ರತ್ಯೇಕ ಕಸಬನ್ನು ಕೈಗೊಂಡು, ಉತ್ತಮ ಪರಸ್ಪರ ಸಹಾಯಕ ಸಂಘದಂತೆ ಇರಬಹುದು. ಒಂದಾನೊಂದು ಕಾಲದಲ್ಲಿ ಪ್ರತಿಯೊಂದು ಜಾತಿ ಸಂಸ್ಥೆಯೂ ಆಯಾಯಾ ಪಂಗಡದ ಯುವಕರ ಶಿಕ್ಷಣ, ವ್ಯಾಜ್ಯ ತೀರ್ಮಾನ, ಲಾಭ ನಷ್ಟ ವಿಭಜನೆ— ಮುಂತಾದ ವ್ಯವಹಾರಗಳನ್ನು ನಿರ್ಣಯಿಸುತ್ತಿದ್ದಿತು ವಿವಾಹ, ಭೋಜನ ಮುಂತಾದ ವಿಷಯಗಳಲ್ಲಿ ಇದ್ದ ನಿಯಮಗಳನ್ನು ಕಾಪಾಡಿ, ಕುಲದ ಶ್ರೇಷ್ಠತೆಯನ್ನು ಉಳಿಸಿಕೊಳ್ಳಲು, ಜಾತಿಪದ್ಧತಿಯು ಸಹಾಯಮಾಡುತ್ತಿತ್ತು ಇದರಿಂದ ಸಮಾಜವು ಸರ್ವತೋಮುಖವಾದ ಮತ್ತು ಸಮಾನ ಬೆಳವಣಿಗೆಯನ್ನು ಹೊಂದಲು ಅವಕಾಶವಿತ್ತು ಸಮಾಜಕ್ಕೆ ಮಹೋಪಕಾರಮಾಡುತ್ತಿದ್ದ ಸಂಸ್ಥೆಯೇ ಜಾತಿಪದ್ಧತಿ

ಸಮಾಜದಲ್ಲಿ ಬಡತನವು ಹಚ್ಚುತ್ತಿರುವುದಕ್ಕೆ ಜಾತಿಪದ್ಧತಿಯೇ ಕಾರಣವೆಂದು ಅರ್ಥಶಾಸ್ತ್ರಜ್ಞರು ಹೇಳುತ್ತಾರೆ ನಮ್ಮಲ್ಲಿ ನಿರುತ್ಸಾಹ ಮತ್ತು ನಿರುದ್ಯೋಗವು ದಿನೇ ದಿನೇ ವೃದ್ಧಿಯಾಗುತ್ತಿರುವುದಕ್ಕೆ ಜಾತಿ ಪದ್ಧತಿಯೇ ಕಾರಣವೆಂದು, ಸಮಾಜಸುಧಾರಕರು ಹೇಳುತ್ತಾರೆ ಈ ಪದ್ಧತಿಯಿಂದ ಉಂಟಾದ ಕಠಿಣ ಸಮಸ್ಯೆಗಳನ್ನು ತೊಡೆದುಹಾಕ ಬೇಕೆಂದು, ಅನೇಕ ಹೂಸ ಮತಗಳು ಸ್ಥಾಪಿತವಾದುವು ಸಮಾಜದ ಅಡಿಗಲ್ಲಿನಂತಿರುವ ಈ ಪದ್ಧತಿಯನ್ನು ನಾಶಮಾಡುವುದಕ್ಕೆ ಆರ್ಯ ಸಮಾಜ, ಬ್ರಹ್ಮಸಮಾಜ, ರಾಮಕೃಷ್ಣಾಶ್ರಮ — ಮುಂತಾದ ಸಮಾಜ ಸುಧಾರಕ ಸಂಸ್ಥೆಗಳಿಗೆ ಶಕ್ಯವಾಗಲಿಲ್ಲ

ಪಾಶ್ಚಾತ್ಯ ನಾಗರಿಕತೆಯ ಸಂಪರ್ಕವು ನಮಗೆ ಹೆಚ್ಚಿದಂತೆಲ್ಲಾ, ಜಾತಿಗಳು ಮತ್ತು ಉಪಜಾತಿಗಳು ಹೆಚ್ಚಿದುವು ಹಿಂದಿನಿಂದ ಬಂದ ಜಾತಿನಿರ್ಬಂಧಗಳು ಸಡಿಲವಾದುವು ಸಮಾಜಹಿತಕ್ಕಾಗಿ ಒಂದಾನೊಂದು ಕಾಲದಲ್ಲಿ ಏರ್ಪಟ್ಟ ಸಂಸ್ಥೆಯು, ಸಮಾಜಕ್ಷೀಣತೆಗೆ ಕಾರಣವಾಗುತ್ತಾ ಬಂದಿತು ಜಾತಿಗಳು ಹಚ್ಚಿದಷ್ಟೂ ವೈಷಮ್ಯ, ಅಸೂಯೆ, ಬಡತನ, ನಿರುತ್ಸಾಹ— ಮುಂತಾದುವುಗಳು ಹೆಚ್ಚುತ್ತಾ ಬಂದುವು ಈ ಪದ್ಧತಿ ಯಿಂದ ಕಸಬಿನ ಸ್ವಾತಂತ್ರ್ಯ ಸಡಿಲವಾಯಿತು ಸಮಾಜದಲ್ಲಿ ಒಂದೊಂದು ಪಂಗಡಕ್ಕೂ ಇದ್ದ ಭಿನ್ನಭಾವಗಳು ಹೆಚ್ಚಿದುವು. ಕಷ್ಟ

ಪಟ್ಟು ಕೆಲಸಮಾಡುವುದು ಜನರಿಗೆ ಅವಮಾನವಾಗಿ ಕಂಡುಬಂದಿತು ಈ ಭಾವನೆಯು ಗ್ರಾಮಗಳಲ್ಲಿ ಹೆಚ್ಚಾಗುತ್ತಾ ಇದೆ. ಗ್ರಾಮಸ್ಥರು ಯಾವಾಗ ಶುಚಿಯಾದ ಬಟ್ಟೆಗಳನ್ನು ಧರಿಸುವರೋ, ಆಗ ವ್ಯವಸಾಯ ಕೆಲಸಗಳನ್ನು ಮಾಡಲು ಹಿಂಜರಿಯುತ್ತಿದ್ದಾರೆ ಹಾಗೆ ಮಾಡುವುದು ಅವಮಾನಕರವೆಂದು ಭಾವಿಸುತ್ತಿದ್ದಾರೆ ಇದರಿಂದ ಪರೋಪಜೀವನ ಹೆಚ್ಚುತ್ತಾ ಇದೆ ಒಂದು ಸಂಸಾರದಲ್ಲಿ ಒಬ್ಬನ ದುಡಿಯುವುದಾದರೆ, ಅವನನ್ನು ಅವಲಂಬಿಸಿರುವವರು ಅನೇಕರಾಗುತ್ತಿದ್ದಾರೆ

ಜಾತಿನಿಯಮಗಳು ಈಗಾಗಲೆ ಸಡಿಲವಾಗಿವೆ ಗ್ರಾಮಾಭಿಮಾನಿಗಳೂ ಮತ್ತು ಸುಧಾರಕರೂ ಜಾತಿಪದ್ಧತಿಯಿಂದ ಉಂಟಾಗುತ್ತಿರುವ ಅಂತರಗಳನ್ನು ತೊಡೆದುಹಾಕಲು ಪ್ರಯತ್ನಿಸಬೇಕು ಅನೇಕ ಗ್ರಾಮಗಳಲ್ಲಿ ಕೆರೆ, ಕೊಳ ಮತ್ತು ಬಾವಿ— ಇವುಗಳಿಂದ ನೀರು ಉಪಯೋಗಿಸುವುದಕ್ಕೆ ಕೆಲವು ಜಾತಿಯವರಿಗೆ ನಿರ್ಬಂಧವಿದೆ ಇದಕ್ಕೆ ಹಿಂದಿನ ಜಾತಿಪದ್ಧತಿಯ ಅಂಧಶ್ರದ್ಧೆಯೇ ಕಾರಣವಾಗಿದೆ ಇದು ಸಮಾಜದ ಏಳಿಗೆಗೆ ಹಿತವಲ್ಲ ( ಗ್ರಾಮಗಳಲ್ಲಿ ಸರ್ವಸಮಾನತಾ ಭಾವನೆಯುಂಟಾಗಬೇಕು ಪ್ರತಿಯೊಂದು ಜೀವನದ ಅವಲಂಬನವೂ ಗೌರವಯುತವಾದುದೆಂದು ಜನರು ತಿಳಿಯಬೇಕು ಸಮಾಜೋನ್ನತಿಗ ಈ ವಿಧವಾದ ವಾತಾವರಣವನ್ನು ಕಲ್ಪಿಸುವುದು ಗ್ರಾಮಾಭ್ಯುದಯ ತತ್ವದ ಧ್ಯೇಯವಾಗಿರಬೇಕು

ಅವಿಭಕ್ತಕುಟುಂಬ ಪದ್ಧತಿಯು ಹಿಂದು ಸಮಾಜವನ್ನು ಅಂಟಿಕೊಂಡಿರುವ ಇನ್ನೊಂದು ಹಳೆಯ ಸಂಸ್ಥೆ ಒಂದು ಸಂಸಾರದ ಜನಗಳು ಒಟ್ಟಿಗೆ ಸೇರಿ ಒಂದೇ ಮನೆಯಲ್ಲಿ ವಾಸಮಾಡಿಕೊಂಡು ಒಟ್ಟು ಆದಾಯ ವೆಚ್ಚದಲ್ಲಿ ಎಲ್ಲರೂ ಭಾಗಿಗಳಾಗಿ, ಜೀವನಮಾಡುವುದೇ ಈ ಸಂಸ್ಥೆಯ ಮುಖ್ಯ ತತ್ವ. ಮನುಧರ್ಮಶಾಸ್ತ್ರ ರೀತಿಯಾಗಿ ತಂದೆಯೇ ಎಲ್ಲರಿಗೂ ಯಜಮಾನ ಕುಟುಂಬಕ್ಕೆ ಸೇರಿದವರಿಗೆಲ್ಲಾ ಕುಟುಂಬದ ಆಸ್ತಿಯಲ್ಲಿ ಹಕ್ಕುಂಟು ಒಂದು ಅವಿಭಕ್ತಕುಟುಂಬವನ್ನು ಒಂದು ಚಿಕ್ಕ ಸಮಾಜವೆಂದೇ ಭಾವಿಸಬಹುದು

ಈ ಪದ್ಧತಿಯು ಹಿಂದು ಸಂಸ್ಕೃತಿಯ ವಾತಾವರಣಕ್ಕೆ ಅನುಕೂಲವಾದ ಸಂಸ್ಥೆ. ಇದರಲ್ಲಿ ಗುಣದೋಷಗಳೆರಡೂ ಇವೆ. ಒಂದು

ಕುಟುಂಬದಲ್ಲಿ ಕೈಲಾಗದವರೂ, ಬಾಲಕರೂ, ಅಂಗವಿಹೀನರೂ, ವೃದ್ಧರೂ—ಇದ್ದಾರೆ ಇವರನ್ನೆಲ್ಲಾ ಅವಿಭಕ್ತಕುಟುಂಬದ ಯಜಮಾನನೇ ಕಾಪಾಡುತ್ತಾನೆ ಈ ಕೆಲಸಕ್ಕಾಗಿ ಪಾಶ್ಚಾತ್ಯ ದೇಶಗಳಲ್ಲಿ ದೀನ ರಕ್ಷಣಾಲಯ, ವೃದ್ಧಾಪ್ಯ ವೇತನ ಮುಂತಾದ ವ್ಯವಸ್ಥೆಗಳಿವೆ ನಮ್ಮಲ್ಲಿ ಈ ಬಗೆಯ ವ್ಯವಸ್ಥೆಯನ್ನು ಅವಿಭಕ್ತಕುಟುಂಬವೇ ನಡೆಸುತ್ತಿದೆ ಇದರಿಂದ ಅನೇಕ ಸಂಸಾರಗಳಿಗೆ ಖರ್ಚುಮಾಡುವ ಹಣಕ್ಕಿಂತ, ಕಡಮೆ ವೆಚ್ಚವಾಗುವುದಲ್ಲದೆ, ವ್ಯವಸ್ಥಿತ ರೀತಿಯಲ್ಲಿ ಜೀವನ ನಡೆಸುವ ಅಭ್ಯಾಸವಾಗುತ್ತದೆ ತಾಯಿತಂದೆಗಳಲ್ಲಿ ಪ್ರೇಮ, ಗುರುಹಿರಿಯರಲ್ಲಿ ಭಕ್ತಿ ಮುಂತಾದ ಲಕ್ಷಣಗಳು ಚೆನ್ನಾಗಿ ಬೇರೂರಲು ಈ ಸಂಸ್ಥೆಯು ಸಹಾಯಮಾಡುತ್ತದೆ. ಇದರಿಂದ ಒಂದು ಕುಟುಂಬವು ಉತ್ತಮ ಪರಸ್ಪರ ಸಹಾಯಕ ಸಂಘದಂತೆ ಬೆಳೆದು ಸಮಾಜೋನ್ನತಿಗೆ ಸಹಾಯಮಾಡಬಹುದು

ಆದರ ಅವಿಭಕ್ತಕುಟುಂಬದಿಂದ ಸೋಮಾರಿತನವು ಹೆಚ್ಚಿ, ವ್ಯಕ್ತಿಸ್ವಾತಂತ್ರ್ಯವು ಕಡಿಮೆಯಾಗುವುದೆಂದು ಕೆಲವು ಆಕ್ಷೇಪಣೆಗಳಿವೆ ಅನೇಕ ಕುಟುಂಬಗಳಲ್ಲಿ ಯಜಮಾನರೇ ಹಗಲಿರುಳೂ ದುಡಿಯುವುದೂ, ಕೆಲವರು ಸೋಮಾರಿಗಳಾಗಿ ವ್ಯರ್ಥ ಕಾಲಕ್ಷೇಪ ಮಾಡುತ್ತಿರುವುದೂ, ಇನ್ನುಕೆಲವರು ಸ್ವಾತಂತ್ರ್ಯಕ್ಕೆ ಹಾತೊರೆಯುತ್ತಿರುವುದೂ ನಿಶ್ಚಯ ಆದರೆ ಜೀವನ ಸಂಗ್ರಾಮದಲ್ಲಿ ಯಾರು ಧೈರ್ಯವಹಿಸಿ ಕಷ್ಟಗಳನ್ನು ಎದುರಿಸುವರೋ ಅವರಿಗೆ ಇವುಗಳೊಂದೂ ದೋಷವೆನಿಸುವುದಿಲ್ಲ ಅವಿಭಕ್ತಕುಟುಂಬವು ಬಹಳ ಪುರಾತನ ಸಂಪ್ರದಾಯ ಹಿಂದೂ ಸಂಸ್ಕೃತಿಯ ಮತ್ತು ಸಮಾಜೋನ್ನತಿಯ ಹಿತವನ್ನು ಮನಸ್ಸಿನಲ್ಲಿಟ್ಟುಕೊಂಡೇ ಅದನ್ನು ಪೂರ್ವಿಕರು ಆಚರಣೆಯಲ್ಲಿ ತಂದಿದ್ದಾರೆ. ಈ ಪದ್ಧತಿಯು ಇತ್ತೀಚೆಗೆ ಮಾಯವಾಗುತ್ತಿದೆ ಗ್ರಾಮಗಳು ಪುರಾತನ ಸಂಪ್ರದಾಯಗಳ ತವರುಮನೆ ಹಿಂದೂ ಸಂಸ್ಕೃತಿಯು ಇನ್ನೂ ಉಳಿದಿರುವುದು ಅಲ್ಲಿಯೇ ಈ ಹಿಂದಿನ ಪದ್ಧತಿಯ ದೋಷಗಳನ್ನು ತೊಡೆದು ಹಾಕಿ, ಆಧುನಿಕ ವಾತಾವರಣಕ್ಕೆ ಈ ಪದ್ಧತಿಯನ್ನು ಉಪಯೋಗಿಸಿಕೊಳ್ಳಬೇಕು ಇದರಿಂದ ಗ್ರಾಮಾಭಿವೃದ್ಧಿಯಾಗುವುದರಲ್ಲಿ ಸಂದೇಹವಿಲ್ಲ

ಗ್ರಾಮಜೀವನವನ್ನು ಒಳಹೊಕ್ಕು ನೋಡಿದರೆ, ಅಲ್ಲಿ ನಿರುತ್ಸಾಹ,

ನಿರುದ್ಯೋಗ, ಔದಾಸೀನ್ಯ, ಮುಂತಾದುವು ಹೆಚ್ಚುತ್ತಾ ಇವೆ ಈ ನಶ್ವರವಾದ ಪ್ರಪಂಚದಲ್ಲಿ ಹೇಗೋ ಹಾಗೆ, ಜೀವನಪಥವನ್ನು ಕಳೆದು, ಶಾಶ್ವತ ಮುಕ್ತಿಯನ್ನು ಸಂಪಾದನೆ ಮಾಡಬೇಕೆಂಬುದೇ ಹಿಂದೂ ಸಂಸ್ಕೃತಿಯ ತಿರುಳು ಪ್ರಾಯಶಃ ಇದು ಪ್ರತಿಯೊಬ್ಬರಿಗೂ ತಿಳಿದೇ ಇದೆ ಒಂದು ವರ್ಷ ಮಳೆ ಬರದೆ, ಕ್ಷಾಮವುಂಟಾದರೆ, ಅದು ದೈವ ಲೀಲೆ ಇನ್ನು ಏನಾದರೂ ಕಷ್ಟ ಸಂಭವಿಸಿದರೆ, ಅದು ಪೂರ್ವಜನ್ಮದ ಕರ್ಮಫಲ ಈ ರೀತಿಯಾಗಿ ರೈತರು ಹೇಳುತ್ತಾರೆ ಇದರ ಜೊತೆಗೆ ಇಹಲೋಕ ವ್ಯಾಪಾರವನ್ನು ದೂಷಣೆ ಮಾಡುವ ಅಭ್ಯಾಸವೂ ಇದೆ ಈ ವಿಧವಾದ ಜೀವನದ ಜುಗುಪ್ಸೆಯು ಗ್ರಾಮಗಳಿಂದ ದೂರವಾಗ ಬೇಕು ಹೀಗೆ ಮಾಡುವುದು ಗ್ರಾಮ ಪುನರುಜ್ಜೀವನದ ಮುಖ್ಯ ಕೆಲಸವಾಗಬೇಕು

ಭರತಖಂಡದ ಇತಿಹಾಸವನ್ನು ವಿಚಾರ ಮಾಡಿದರೆ, ಇಲ್ಲಿಯ ಸಮಾಜದ ಪಾರಮಾರ್ಥಿಕ ಸ್ಥಿತಿಯು, ಅತ್ಯುನ್ನತವಾಗಿದ್ದಾಗಲೂ ಕೂಡ, ಜನರು ಇಹಲೋಕದ ಸುಖಸಂಪತ್ತಿನ ಕಡೆಗೆ ಹೆಚ್ಚು ಲಕ್ಷ್ಯಕೊಡುತ್ತಿದ್ದ ರೆಂದು ತಿಳಿದುಬರುವುದು ಪರಲೋಕ ಸೌಖ್ಯಕ್ಕಾಗಿ ಪ್ರಯತ್ನಪಡು ತ್ತಿದ್ದರೂ, ಇಹಲೋಕ ವ್ಯಾಪಾರಕ್ಕಾಗಿ ಸಂತೋಷದಿಂದ ದುಡಿಯು ತ್ತಿದ್ದರು ನಿರಾಶಾಜನಕ ಸೂಚನೆಗಳು ಅವರಲ್ಲಿ ಇರಲಿಲ್ಲ ಜನರು ತಮ್ಮ ಬಾಹುಬಲದಲ್ಲಿ ದೃಢನಂಬುಗೆ ಇಟ್ಟಿದ್ದರು ಫಲಾಫಲಗಳಮೇಲೆ ಹೆಚ್ಚು ದೃಷ್ಟಿಯನ್ನಿಡದೆ, ಪುರುಷ ಪ್ರಯತ್ನಕ್ಕೆ ಪ್ರಾಮುಖ್ಯತೆ ಕೊಟ್ಟಿ ದ್ದರು. ಸುಖ, ಸಂಪತ್ತು ಮತ್ತು ಸೌಂದರ್ಯ—ಇವುಗಳಿಂದ ಕೂಡಿದ ಸನ್ನಿವೇಶಗಳನ್ನು ಸಮಾಜವು ಕಲ್ಪಿಸಿಕೊಂಡು, ಇಹಲೋಕ ವ್ಯಾಪಾರ ಪ್ರಯತ್ನದಲ್ಲಿ ಒಂದು ಬಗೆಯ ಕುಶಲತೆಯನ್ನು ತೋರ್ಪಡಿಸುವಂತಿತ್ತು ಈಗ ಅವೆಲ್ಲಾ ಮಾಯವಾಗುತ್ತಿವೆ

ಇಂದು ನಾವು ಒಂದು ಗ್ರಾಮವನ್ನು ನೋಡಲು ಹೋದರೆ, ಮೊದಲು ಕಾಣಬರುವುದೇನು? ಇಕ್ಕಟ್ಟಾದ ದಾರಿ, ದಾರಿಯ ಎರಡು ಪಾರ್ಶ್ವ ಗಳಲ್ಲಿಯೂ ಪೊದೆಯಾಗಿ ಬೆಳೆದಿರುವ ಬೇಲಿ, ಈ ಬೇಲಿಯ ಮಗ್ಗುಲಲ್ಲಿ ಉದ್ದಕ್ಕೂ ದುರ್ವಾಸನೆಯಿಂದ ಕೂಡಿದ ಗೊಬ್ಬರದ ಗುಂಡಿಗಳು, ಇದನ್ನು

ಕಳೆದು ಮುಂದಕ್ಕೆ ಹೋದರೆ, ಸಾರುವ ಪದಾರ್ಥಗಳಿಂದ ತುಂಬಿದ, ನೀರಿನ ಹಳ್ಳಕೊಳ್ಳಗಳು ಈ ಹಳ್ಳಗಳೂ, ಗೊಬ್ಬರದ ಗುಂಡಿಗಳೂ, ಹಾಳು ವರಾರಗಳೂ ಮತ್ತು ಪೊದೆಯ ಬೇಲಿಗಳೂ ಸಾರ್ವಜನಿಕ ಕಕ್ಕಸುಗಳಾಗಿವೆ ಎಲ್ಲೆಲ್ಲೂ ಕಸಕಡ್ಡಿಗಳು ಬಿದ್ದಿವೆ ಸೊಟ್ಟನಾದ ಮತ್ತು ಇಕ್ಕಟ್ಟಾದ ಬೀದಿಗಳು, ಅಲ್ಲಲ್ಲಿ ಹಳ್ಳತಿಟ್ಟಾದ ಪ್ರದೇಶಗಳು, ಕೊರಕಲು ಮತ್ತು ಕಲ್ಲುಮಣ್ಣುಗಳಿಂದ ತುಂಬಿರುವ ಜಾಗಗಳು ಕಾಣ ಬರುತ್ತವೆ ಚೊಕ್ಕಟವಾದ ಪ್ರದೇಶವೇ ಇಲ್ಲ ಮನಸ್ಸಿಗೆ ರಮ್ಯವಾದ ಸ್ಥಳವೇ ಕಾಣಬರುವುದಿಲ್ಲ ಗ್ರಾಮದಲ್ಲಿ ಮಕ್ಕಳಿಗೆ ಆಡುವುದಕ್ಕೆ ಜಾಗವಿಲ್ಲ ಉಪನ್ಯಾಸ, ಹರಿಕಥೆ, ಭಜನೆ, ಯಕ್ಷಗಾನ— ಮುಂತಾದ ಸಾರ್ವಜನಿಕ ಕೆಲಸಗಳಿಗೆ ಸರಿಯಾದ ಸ್ಥಳವಿಲ್ಲ ಗ್ರಾಮವು ದೊಡ್ಡ ದಾಗಿದ್ದಷ್ಟೂ, ಈ ಭಯಂಕರ ಸ್ಥಿತಿಯು ಹೆಚ್ಚಾಗಿರುವುದು ಗ್ರಾಮದ ಹೊರಗಿನ ನೋಟವು ಇಷ್ಟಾದರೆ, ಒಳಗಿನ ಸ್ಥಿತಿಯು ಇನ್ನೂ ಶೋಚನೀಯ ವಾಗಿರುವುದು

ಆರೋಗ್ಯಕರವಾದ ಮನೆಗಳಿಗೆ ಮುಖ್ಯವಾದುದು ಗಾಳಿ, ಬೆಳಕು ಮತ್ತು ನೈರ್ಮಲ್ಯ ಗ್ರಾಮದ ಅನೇಕ ಮನೆಗಳಲ್ಲಿ ಕಿಟಕಿಗಳೇ ಇರು ವುದಿಲ್ಲ ಎಲ್ಲಾದರೂ ಒಂದೆರಡು ಇದ್ದರೆ, ಅವು ಬಹಳ ಚಿಕ್ಕವು ಇದರಿಂದ ಗಾಳಿ ಬೆಳಕಿಗೆ ಅವಕಾಶವಿಲ್ಲ ಮನೆಗಳ ಸುತ್ತುಮುತ್ತಲೂ ಕಸ, ಕಡ್ಡಿ ಗೊಬ್ಬರ— ಮುಂತಾದ ಅನಾರೋಗ್ಯಕರವಾದ ಪದಾರ್ಥಗಳಿವೆ ವಾಸ ಮಾಡುವ ಮನೆಯಲ್ಲಿಯೇ ದನಕರುಗಳನ್ನು ಕಟ್ಟುತ್ತಾರೆ ಇದರಿಂದ ಕೆಟ್ಟವಾಸನೆಯುಂಟಾಗುವುದಲ್ಲದೆ, ಸೊಳ್ಳೆಗಳು ಹೆಚ್ಚುವುದಕ್ಕೆ ಅವಕಾಶ ವಾಗುವುದು ರೈತರು, ಸಾಮಾನ್ಯ ಆರೋಗ್ಯನಿಯಮಗಳನ್ನು ಲಕ್ಷಿಸುತ್ತಾ ಇಲ್ಲ ಸ್ನಾನಮಾಡದಿದ್ದರೆ ತೊಂದರೆಯೇನು ? ಮನೆ ಮತ್ತು ಆವರಣವನ್ನು ಚೊಕ್ಕಟವಾಗಿಡದಿದ್ದರೆ ಹಾನಿಯೇನು ?—ಎಂಬ ವಿಷಯ ಗಳ ಕಡೆಗೆ, ಗಮನಕೊಡುತ್ತಿಲ್ಲ ಮಾರಿ, ಮಸಣಿ ಮುಂತಾದ ಗ್ರಾಮದೇವತೆಗಳಿಗೆ, ಬಲಿಕೊಡುವುದರಿಂದ ತಮ್ಮ ಕಷ್ಟಗಳು ಪರಿಹಾರ ವಾಗುವುದೆಂದು ಇನ್ನೂ ಅನೇಕ ಕಡೆಗಳಲ್ಲಿ, ರೈತರಿಗೆ ನಂಬಿಕೆ ಇದೆ

ಗ್ರಾಮದ ಅನೇಕ ಮನೆಗಳಲ್ಲಿ, ಅಡಿಗೆಮಾಡುವುದಕ್ಕೆ ಪ್ರತ್ಯೇಕ

ಕೊರಡಿಗಳಿರುವುದಿಲ್ಲ ಮನೆಯೊಳಗೆಲ್ಲಾ ಹೊಗೆ ತುಂಬಿಕೊಂಡು, ಗೋಡೆ, ಸೂರು, ಮರಮುಟ್ಟುಗಳೆಲ್ಲಾ ಕಪ್ಪಾಗಿರುತ್ತವೆ ಮನೆಯ ಸಾಮಾನುಗಳೂ ಕೂಡ, ಒಂದು ವ್ಯವಸ್ಥಿತ ರೀತಿಯಲ್ಲಿ ಇರುವುದಿಲ್ಲ ಒಂದು ಮೂಲೆಯಲ್ಲಿ ರಾಗಿಕಲ್ಲು, ಇನ್ನೊಂದು ಮೂಲೆಯಲ್ಲಿ ದವಸದ ರಾಶಿ, ಮತ್ತೊಂದು ಮೂಲೆಯಲ್ಲಿ ಮಡಕೆಗಳು ಹೀಗೆ, ಮನೆಯಲ್ಲಿಟ್ಟಿರುವ ಪದಾರ್ಥಗಳು ಅಸ್ತವ್ಯಸ್ತವಾಗಿರುತ್ತವೆ ಅವುಗಳನ್ನು ಇಡತಕ್ಕ ವಿಧಾನದಲ್ಲಿ, ಒಂದು ರೀತಿ ಅಥವಾ ಕ್ರಮ ಇಲ್ಲವೇ ಇಲ್ಲ ಮನೆಯ ಗೋಡೆಯಮೇಲೆ, ಅನೇಕವೇಳೆ ಪಟಗಳನ್ನು ನೋಡುತ್ತೇವೆ ಅವುಗಳ ಮೇಲಿರುವ ಧೂಳು, ತೂಗುಹಾಕಿರುವ ರೀತಿ, ಇವುಗಳನ್ನು ಗಮನಿಸಿದರೆ ರೈತರ ಉದಾಸೀನತೆಯು ಚೆನ್ನಾಗಿ ಕಂಡುಬರುವುದು ಈ ವಿಷಯಗಳು ಅವರಿಗೆ ತಿಳಿಯದೆಂದಲ್ಲ ಈ ವಿಷಯಗಳಿಗೆ ಅವರು ಗಮನ ಕೊಡುತ್ತಿಲ್ಲ ಮನುಷ್ಯನ ಸುಖಜೀವನಕ್ಕೆ ಸೌಂದರ್ಯವೂ ಅವಶ್ಯಕ ಜೀವನಕ್ಕೆ ದುಡಿಯುವುದೇ ಪ್ರಾಧಾನ್ಯವಲ್ಲ ಅದರ ಜತೆಗೆ ಕಲಾಭಿರುಚಿಯೂ ಇರಬೇಕು ಸುತ್ತಮುತ್ತಲಿನ ಸನ್ನಿವೇಶಗಳನ್ನು ಸೌಂದರ್ಯದಿಂದ ಕೂಡಿದ್ದನ್ನಾಗಿ ಮಾಡಿಕೊಳ್ಳಬೇಕು ಅವುಗಳನ್ನು ನೋಡಿದರೆ, ಮನಸ್ಸಿಗೆ ಹರ್ಷವಾಗಬೇಕು

ಮನೆಯ ಬಚ್ಚಲನೀರು ಗ್ರಾಮದ ಬೀದಿಯಲ್ಲಾಗಲಿ ಅಥವಾ ಮನೆಯ ಹಿಂಭಾಗದಲ್ಲಿಯಾಗಲಿ ನಿಲ್ಲುತ್ತದೆ ಇದರಿಂದ ಉಂಟಾಗಬಹುದಾದ ಕೆಡುಕನ್ನು ಎಲ್ಲರೂ ಊಹಿಸಬಹುದು ಗ್ರಾಮದ ಬಾವಿ ಅಥವಾ ಕೊಳದ ಬಳಿ ಜನರು ಪಾತ್ರೆ, ಬಟ್ಟೆ ಮುಂತಾದುವನ್ನು ತೊಳೆಯುವರು ಆ ಕೊಳಕುನೀರು ಅಲ್ಲಿಯೇ ನಿಂತು, ಅದರ ಸಾರವೆಲ್ಲಾ ಬಾವಿಯೊಳಕ್ಕೆ ಇಳಿಯುವುದು ಅನೇಕ ಕಡೆಗಳಲ್ಲಿ ಬಾವಿಯ ಪಕ್ಕದಲ್ಲಿಯೇ ಗೊಬ್ಬರದ ಗುಂಡಿಗಳಿರುತ್ತವೆ. ಗೊಬ್ಬರದ ಸಾರವೂ ಕೂಡ, ಬಾವಿಯೊಳಕ್ಕೆ ಇಳಿದು ನೀರನ್ನು ಕೆಡಿಸುತ್ತದೆ ಇದರಿಂದ ಅನೇಕ ರೋಗಗಳು ಹರಡುವುವು

ಗ್ರಾಮಜೀವನವು ಸುಖಮಯವಾಗಬೇಕಾದರೆ, ದೇಹಪುಷ್ಟಿ, ನೈರ್ಮಲ್ಯ, ಮನಶ್ಶಾಂತಿ ಮುಂತಾದ ವಿಷಯಗಳ ಮಹತ್ವವನ್ನೂ ಸಕಾಲ

ಸ್ನಾನ, ಹಲ್ಲು, ಕಣ್ಣು, ಕಿವಿ, ಬಟ್ಟೆ— ಮುಂತಾದುವುಗಳನ್ನು ಚೊಕ್ಕಟ ಮಾಗಡುವುದರ ಪ್ರಯೋಜನವನ್ನೂ, ರೈತರು ಚೆನ್ನಾಗಿ ಗಮನಿಸಬೇಕು. ದೇಹಾರೋಗ್ಯಕ್ಕೆ ಶುಚಿತ್ವವು ಎಷ್ಟು ಆವಶ್ಯಕವೋ, ಸುಖಜೀವನಕ್ಕೆ ಮನೆ ಮತ್ತು ಅದರ ಆವರಣಗಳನ್ನು ಚೊಕ್ಕಟವಾಗಿಡುವುದೂ, ಅಷ್ಟೆ ಆವಶ್ಯಕವೆಂಬುದಾಗಿ ರೈತರು ತಿಳಿಯಬೇಕು ಆದುದರಿಂದ, ವಾಸದ ಮನೆಗಳು ಚಿಕ್ಕವಾದರೂ ಸರಿಯೆ, ಅವುಗಳನ್ನು ಸರಿಯಾದ ರೀತಿಯಲ್ಲಿ ಇಟ್ಟುಕೊಳ್ಳಬೇಕು ಮನೆಗಳಿಗೆ ಆಗಾಗ್ಗೆ ಸುಣ್ಣ ತೊಡೆಯಿಸಿ ಮನೆಯಲ್ಲಿರತಕ್ಕ ಪದಾರ್ಥಗಳನ್ನು ಸುವ್ಯವಸ್ಥಿತ ರೀತಿಯಲ್ಲಿ ಇಟ್ಟುಕೊಂಡರೆ, ಅಂದವಾಗಿ ಕಾಣುತ್ತದೆ ದೇಹ, ಮನೆ, ಶುಚಿತ್ವದ ವಿಷಯದಲ್ಲಿ, ರೈತರು ಹೆಚ್ಚು ಆಸಕ್ತಿವಹಿಸುವಂತಾಗಬೇಕು ಹಾಗೆಯೇ ಗ್ರಾಮಾರೋಗ್ಯ ಮತ್ತು ಗ್ರಾಮ ನೈರ್ಮಲ್ಯಗಳ ವಿಷಯಗಳಲ್ಲಿಯೂ ಮಮತೆ ಹುಟ್ಟಬೇಕು ವೈಯಕ್ತಿಕವಾದ ಕೆಲಸದಮೇಲೆ ಇರುವ ಅಭಿಮಾನಕ್ಕಿಂತ, ಸಾರ್ವಜನಿಕ ಕೆಲಸಗಳಲ್ಲಿ ಹೆಚ್ಚು ಅಭಿಮಾನವೂ, ಶ್ರದ್ಧೆಯೂ ಹುಟ್ಟಬೇಕು

ಗ್ರಾಮಗಳಲ್ಲಿ ಪಾರಮಾರ್ಥಿಕತೆಯೂ ಮತ್ತು ನಿರುತ್ಸಾಹವೂ ಹೆಚ್ಚುತ್ತಿದೆ 'ಹೇಗಿದ್ದರೇನು', 'ದೇವರು ಮಾಡಿದಂತಾಗಲಿ' ಎಂಬ ನುಡಿಗಳು ಕೇಳಿಬರುತ್ತಿವೆ ಭರತಖಂಡದಲ್ಲಿ, ವೈದಿಕ ಧರ್ಮವು ಅತ್ಯುನ್ನತ ಸ್ಥಿತಿಯಲ್ಲಿದ್ದಾಗಲೂ ಕೂಡ, ಜನಗಳಲ್ಲಿ ಕಲಾಭಿರುಚಿಯೂ, ಸೌಖ್ಯ ಜೀವನದ ಆಶೆಯೂ ಪ್ರಧಾನವಾಗಿತ್ತೆಂದು ತಿಳಿದುಬರುವುದು. ಆದುದರಿಂದ ರೈತರು ಪಾರಮಾರ್ಥಿಕ ದೃಷ್ಟಿಯಿಂದ, ಐಹಿಕಸಂಪತ್ತನ್ನು ಅಸಡ್ಡೆ ಮಾಡಬೇಕಾಗಿಲ್ಲ ಗ್ರಾಮವಾಸಸ್ಥಾನ, ವಿವಾಹ ಪದ್ಧತಿ, ಅವಿಭಕ್ತ ಕುಟುಂಬ, ಶಿಕ್ಷಣಪದ್ಧತಿ— ಇವುಗಳೆಲ್ಲವೂ ಒಂದೊಂದು ರೀತಿಯಲ್ಲಿ ರೈತರ ಬಡತನ, ಅಜ್ಞಾನ ಮತ್ತು ಕಷ್ಟಗಳನ್ನು ಹೆಚ್ಚಿಸುತ್ತಿರುವುದು ನಿಜ ಆದರೆ ಇವುಗಳ ಪರಿಹಾರಕ್ಕಾಗಿ, ಅಭಿವೃದ್ಧಿಕಾರ್ಯಕ್ರಮಗಳು ಆಚರಣೆಯಲ್ಲಿ ಬರುತ್ತಿವೆ ಇವುಗಳ ಜತೆಗೆ, ರೈತರ ಕಲಾಭಿರುಚಿಯನ್ನು ಹೆಚ್ಚಿಸಿ, ಒಟ್ಟನಲ್ಲಿ ಗ್ರಾಮವನ್ನು ಸೌಂದರ್ಯಮಯವನ್ನಾಗಿ ಮಾಡಲು. ಅನುಕೂಲವಾದ ಕಾರ್ಯಕ್ರಮವನ್ನು ಅನುಸರಿಸಬೇಕು ಕಲಾ ಮತ್ತು

ಸೌಂದರ್ಯಾಭಿಮಾನವು ಅವರಲ್ಲಿ ಬೇರೂರಿ, ಅವುಗಳ ಪ್ರಯೋಜನವು ಅವರಿಗೆ ತಿಳಿಯಬೇಕು

ಗ್ರಾಮಗಳಲ್ಲಿ, ಪ್ರಕೃತಿಯೇ ಒಂದು ಬಗೆಯ ಸೌಂದರ್ಯಪೂರಿತ ಸನ್ನಿವೇಶಗಳನ್ನು ಒದಗಿಸಿದೆ ಅವುಗಳನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸಿಕೊಳ್ಳುವ ವಿಧಾನವು ರೈತರಿಗೆ ತಿಳಿದಿಲ್ಲ ಗ್ರಾಮಗಳಲ್ಲಿರ ತಕ್ಕ ಮನೆಗಳೂ, ಬೀದಿಗಳೂ, ಇತರ ಸಾರ್ವಜನಿಕ ಸ್ಥಳಗಳೂ ಅಷ್ಟು ದೊಡ್ಡವಾಗಿಲ್ಲ ಅವುಗಳನ್ನು ಚೊಕ್ಕಟವಾಗಿಟ್ಟುಕೊಂಡು, ಅನುಕೂಲ ವಾದ ಆವರಣವನ್ನು ಕಲ್ಪಿಸಿ, ನಾಲ್ಕಾರು ಹೂವಿನ ಗಿಡಗಳನ್ನು ಬೆಳಸು ವುದಕ್ಕೆ ರೈತರು ಹೆಚ್ಚು ದುಡ್ಡು ಖರ್ಚುಮಾಡಬೇಕಾಗಿಲ್ಲ ಬೆಳಗಿನಿಂದ ಸಾಯಂಕಾಲದವರೆಗ ದುಡಿಯುವ ಅಭ್ಯಾಸವುಳ್ಳ ರೈತರಿಗೆ, ಈ ಕೆಲಸ ವೇನೂ ದೊಡ್ಡದಲ್ಲ ಹಾಗೆಯೇ ಮನೆಯ ಒಳಗೂ ಕೂಡ, ಸುಂದರ ವಾಗಿ ಕಾಣುವಂತೆ ಮಾಡಲು, ರೈತರು ಹೆಚ್ಚು ಶ್ರಮಪಡಬೇಕಾಗಿಲ್ಲ. ಆದರೆ ಮುಖ್ಯವಾಗಿ ಬೇಕಾಗಿರುವುದು, ಶ್ರದ್ಧೆ ಮತ್ತು ಉತ್ಸಾಹ. ಪ್ರತಿಯೊಂದು ಸಣ್ಣ ವಿಷಯವನ್ನೂ ಅವರು ಗಮನಿಸಬೇಕು ಅವುಗಳ ಮಹಿಮೆಯನ್ನೂ ಮತ್ತು ಪ್ರಯೋಜನವನ್ನೂ ಅವರು ತಿಳಿಯುವಂತಾಗ ಬೇಕು ಹೀಗಾಗಬೇಕಾದರೆ ಗ್ರಾಮಾಭಿಮಾನಿ ತತ್ವಜ್ಞರು ಹೆಚ್ಚು ಪ್ರಚಾರಕಾರ್ಯ ನಡೆಸಬೇಕು ಒಂದೆರಡು ಉತ್ತಮ ಮಾದರಿಗಳನ್ನು ಕಲ್ಪಿಸಿ, ಈ ವಿಷಯಗಳು ರೈತರಿಗೆ ಚೆನ್ನಾಗಿ ಮುಂದಟ್ಟಾಗುವಂತೆ ಮಾಡಬೇಕು

ಸಂಗೀತ, ನಾಟಕ, ಹರಿಕಥೆ, ಯಕ್ಷಗಾನ ಮುಂತಾದುವುಗಳಲ್ಲಿ, ರೈತರಿಗೆ ಇಂದೂ ಶ್ರದ್ಧೆ ಇದ್ದೇ ಇದೆ ಆದರೆ ಪಟ್ಟಣಗಳಲ್ಲಿ ಇರುವ ಅನುಕೂಲಗಳು, ಇವಕ್ಕೆ ಹಳ್ಳಿಗಳಲ್ಲಿ ಇಲ್ಲ ರೈತರ ಅಭಿಮಾನವನ್ನೂ ಮತ್ತು ಸೌಂದರ್ಯವನ್ನಾಕರ್ಷಿಸುವ ಶಕ್ತಿಯನ್ನೂ ಇವುಗಳಮೇಲೆ ಹೆಚ್ಚಿ ಸುವುದಕ್ಕೆ ಅನೇಕ ಮಾರ್ಗಗಳಿವೆ ಆರ್ಥಿಕ ಪುನರುದ್ಧಾರ ಕಾರ್ಯಗಳು, ರೈತರ ಸೌಖ್ಯಕ್ಕೆ ಎಷ್ಟು ಅವಶ್ಯಕವೋ, ಸುಂದರಮಯ ಸನ್ನಿವೇಶಗಳನ್ನು ಕಲ್ಪಿಸುವುದೂ ಅಷ್ಟೇ ಆವಶ್ಯಕ ಜೀವನದ ಸೌಂದರ್ಯವನ್ನು ಉತ್ತಮ ಪಡಿಸುವುದಕ್ಕೆ, ಆರ್ಥಿಕಾಭಿವೃದ್ಧಿ ಮತ್ತು ಹೃದಯ ವಿಕಾಸ, ಎರಡೂ

ಅತ್ಯವಶ್ಯಕವಾದುವು ಹೃದಯ ವಿಕಾಸಕ್ಕೆ, ಶುಚಿಯಾದ ಮತ್ತು ಆರೋಗ್ಯಕರವಾದ ವಾತಾವರಣವನ್ನುಂಟುಮಾಡಬೇಕು ಆದುದರಿಂದ ರೈತರು ತಮ್ಮ ಮನೆ ಮತ್ತು ಅದರ ಸುತ್ತುಮುತ್ತಲಿನ ಪ್ರದೇಶಗಳನ್ನೂ ಮತ್ತು ಗ್ರಾಮದ ಸಾರ್ವಜನಿಕ ಸ್ಥಳಗಳನ್ನೂ ಅಂದವಾಗಿ ಕಾಣುವ ರೀತಿಯಲ್ಲಿ ಇಡುವಂತೆ ಪ್ರೋತ್ಸಾಹಿಸಬೇಕು ಅವಶ್ಯಕವಾದಾಗಲೆಲ್ಲಾ ಈ ವಿಷಯಗಳಲ್ಲಿ, ರೈತರಿಗೆ ಹೆಚ್ಚು ತಿಳಿವಳಿಕೆಯನ್ನುಂಟುಮಾಡಿ, ಶಿಕ್ಷಣವನ್ನು ಕೊಡಬೇಕು

ಕಲಾ ಸೌಂದರ್ಯದಿಂದ ಉಂಟಾಗುವ ಸೌಖ್ಯವು ಶಾಶ್ವತ ವಾದ್ದುದೂ ಮತ್ತು ಪವಿತ್ರವಾದುದೂ ಆಗಿದೆ ಪ್ರಕೃತಿ ಸೌಂದರ್ಯ ವನ್ನನುಭವಿಸುವುದರಿಂದ, ಉಂಟಾಗುವ ಸಂತೋಷವು ಅತ್ಯಂತ ಶ್ರೇಷ್ಠ ವಾದುದು ಹೀಗೆ ಮಾಡುವುದರಿಂದ ಆತ್ಮವು, ಪ್ರಕೃತಿ ಸೌಭಾಗ್ಯ ದೊಡನೆ ಸೇರಿ, ನಿತ್ಯಾನಂದವನ್ನನುಭವಿಸಲು ಅವಕಾಶವಾಗುತ್ತದೆ, ಇಂತಹ ಸುಂದರಮಯ ಸನ್ನಿವೇಶಗಳು, ಪವಿತ್ರಹರ್ಷವನ್ನುಂಟುಮಾಡು ವುದಲ್ಲದೆ, ಮನುಷ್ಯಸ್ವಭಾವ ಜನ್ಯವಾದ ಗುಣಗಳನ್ನು ಹೆಚ್ಚಿಸುತ್ತವೆ, ಶ್ರೇಷ್ಠತಮವಾದ ಕಲೋಪಾಸನೆಯು, ಮಾನವನ ಆತ್ಮವಿಕಾಸವೆಂದು ಹೇಳಬಹುದು ಅನೇಕ ಸಂದರ್ಭಗಳಲ್ಲಿ, ಸೌಂದರ್ಯೋಪಾಸನೆಯು ಮನಸ್ಸಿನ ಉತ್ಕರ್ಷವನ್ನು ಹೆಚ್ಚಿಸುವುದಲ್ಲದೆ, ಇಂದ್ರಿಯಾನುಭವಕ್ಕಿಂತ ಕಲೋಪಾಸನಾ ಸುಖವು, ಅತ್ಯುತ್ತಮವಾದುದೂ ಮತ್ತು ಶಾಶ್ವತ ವಾದುದೂ ಎಂಬ ಅಭಿಪ್ರಾಯವನ್ನುಂಟುಮಾಡುತ್ತದೆ ಆದುದರಿಂದ, ಸೌಂದರ್ಯೋಪಾಸನೆಯು ಜೀವನದ ಮುಖ್ಯ ಅಂಗವೆಂದು ಹೇಳ ಬಹುದು ಇಂತಹ ಪವಿತ್ರ ಅನುಭವವನ್ನು ಪ್ರತಿಯೊಂದು ಗ್ರಾಮ ದಲ್ಲಿಯೂ ರೈತರಿಗೆ ಒದಗಿಸುವುದು ಗ್ರಾಮಾಭ್ಯುದಯ ತತ್ವದ ಮುಖ್ಯ ಧ್ಯೇಯವಾಗಿರಬೇಕು

# ಪರಿಶಿಷ್ಟ ೧

# ಗ್ರಾಮಾಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವುದಕ್ಕೆ ಅನುಕೂಲ ಅಧಿಕಾರಿಗಳನ್ನು ತರಪೇತುಮಾಡುವ ಯೋಜನೆ

**(Training for the Inspector of Rural Reconstruction)**

**(ಮೈಸೂರು ಸಂಸ್ಥಾನಕ್ಕೆ ಸಂಬಂಧಪಟ್ಟ ಹಾಗೆ)**

I ತರಗತಿಗಳು ಮೊದಲು ಬೆಂಗಳೂರಿನಲ್ಲಿ ಪ್ರಾರಂಭವಾಗಬೇಕು. ಅನಂತರ ಡಿಸ್ಟ್ರಿಕ್ಟು ಕೇಂದ್ರಗಳಲ್ಲಿ ಸ್ಥಾಪಿಸಬಹುದು.

II ವಿದ್ಯಾರ್ಥಿಗಳನ್ನು ಚುನಾಯಿಸುವುದಕ್ಕೆ ಈ ಕೆಳಗೆ ಕಂಡ ಅಧಿಕಾರಿಗಳನ್ನೊಳಗೊಂಡ ಸಮಿತಿ ಇರತಕ್ಕದ್ದು —

೧ ರೆವಿನ್ಯೂ ಕಮಿಷನರ್
೨ ವಿದ್ಯಾಭ್ಯಾಸದ ಮುಖ್ಯಾಧಿಕಾರಿಗಳು
೩ ಆರೋಗ್ಯ ಶಾಖಾ ,,
೪ ವ್ಯವಸಾಯ ಶಾಖಾ ,,
೫ ವಾಣಿಜ್ಯ ,,
೬ ಸಹಕಾರ ಶಾಖಾ ,,
೭ ಪಶುವೈದ್ಯ ಶಾಖಾ ,,
೮ ಡಿಸ್ಟ್ರಿಕ್ಟ್ ಬೋರ್ಡ್ ಪ್ರೆಸಿಡೆಂಟ್
೯ ಸ್ಥಳೀಯ ಸಂಸ್ಥೆ ಇಲಾಖೆಯ ಮುಖ್ಯಾಧಿಕಾರಿಗಳು.

III ಪ್ರಾರಂಭದಲ್ಲಿ ವಿಶ್ವವಿದ್ಯಾನಿಲಯದ ಪದವೀಧರರನ್ನು ಚುನಾಯಿಸಬೇಕು ಡಿಸ್ಟ್ರಿಕ್ಟು ಕೇಂದ್ರಗಳಲ್ಲಿ ಸ್ಥಾಪನೆಯಾದಮೇಲೆ, ಇಂಟರ್‌ಮಿಡಿಯಟ್ ಪರೀಕ್ಷೆಯಲ್ಲಿ, ಉತ್ತೀರ್ಣರಾದವರನ್ನು ಆರಿಸಬಹುದು. ಸಾಧ್ಯವಾದ ಮಟ್ಟಿಗೆ ಹಳ್ಳಿಗಳಲ್ಲಿ ಹುಟ್ಟಿ ಬೆಳೆದು, ಹಳ್ಳಿಗಳ ಮೇಲೆ ಹೆಚ್ಚು ವ್ಯಾಮೋಹ ಇರುವವರನ್ನು ಆರಿಸುವುದು ಒಳ್ಳೆಯದು

IV ವ್ಯಾಸಂಗ ಕಾಲವು ಸುಮಾರು ೧೨ ತಿಂಗಳಿಂದ ೧೫ ತಿಂಗಳ ವರೆಗೂ ಇರಬಹುದು ಈ ಕಾಲದಲ್ಲಿ ಕೆಲವು ಉತ್ತಮ ವಿದ್ಯಾರ್ಥಿಗಳಿಗೆ

ವೇತನದ ಏರ್ಪಾಡು ಮಾಡಬಹುದು ವಿದ್ಯಾರ್ಥಿಗಳು ಶಿಕ್ಷಣಕಾಲದಲ್ಲಿ ಸರಿಯಾದ ಆಡಳಿತಕ್ರಮಕ್ಕೆ ಒಳಪಟ್ಟು ವ್ಯಾಸಂಗ ಮಾಡಬೇಕು

V ವ್ಯವಸಾಯ ಪರೀಕ್ಷಾಕ್ಷೇತ್ರಗಳಲ್ಲಿ ಅನುಭವಿಕ ಮತ್ತು ಪ್ರಮಾಣಿಕ ಕಾರ್ಯಗಳಲ್ಲಿ ವಿದ್ಯಾರ್ಥಿಗಳು ಉತ್ತಮ ಶಿಕ್ಷಣವನ್ನು ಹೊಂದಬೇಕು ಅವರು ಗ್ರಾಮಗಳಿಗೆ ಆಗಾಗ್ಗೆ ಹೋಗಿ, ಉಪನ್ಯಾಸ ಕೊಡುವ ಕಾರ್ಯಗಳಲ್ಲಿ ಅಭ್ಯಾಸ ಪಡೆಯಬೇಕು ಗ್ರಾಮಾಭಿವೃದ್ಧಿ ಕಾರ್ಯಗಳು ವ್ಯವಹಾರದೃಷ್ಟಿಯಿಂದ ಉತ್ತಮವಾಗಿ ನಡೆಯಬೇಕಾದರೆ ವಿದ್ಯಾರ್ಥಿಗಳು ಆ ವಿಷಯಗಳನ್ನೆಲ್ಲಾ ಚೆನ್ನಾಗಿ ಗ್ರಹಿಸಿ, ಅನುಭವವನ್ನು ಹೊಂದಿ, ಅನಂತರ ತಾವೇ ಸ್ವತಃ ಗ್ರಾಮಾಂತರಗಳಲ್ಲಿ ಕಾರ್ಯಕ್ರಮಗಳನ್ನು ಪ್ರಾರಂಭಿಸಿ, ರೈತರಿಗೆ ಮಾರ್ಗದರ್ಶಕರಾಗಬೇಕು

VI ಆದುದರಿಂದ ವಿದ್ಯಾರ್ಥಿಗಳು ವ್ಯವಸಾಯ, ವಿದ್ಯಾಭ್ಯಾಸ, ಆರೋಗ್ಯ ಮತ್ತು ನೈರ್ಮಲ್ಯ, ಸಣ್ಣ ಕೈಗಾರಿಕೆ, ಸಹಕಾರ— ಇವೇ ಮುಂತಾದ ಮುಖ್ಯ ವಿಷಯಗಳಲ್ಲಿ ಹೆಚ್ಚು ಪರಿಶ್ರಮವನ್ನು ಹೊಂದಬೇಕು ಈ ವಿಷಯಗಳಲ್ಲಿ ಮುಂದುವರಿಯುತ್ತಿರುವ ಇತರ ದೇಶಗಳು ಆಚರಿಸುತ್ತಿರುವ ಅಭಿವೃದ್ಧಿಕಾರ್ಯಗಳನ್ನು ಚೆನ್ನಾಗಿ ತಿಳಿದುಕೊಳ್ಳಬೇಕು ಶಿಕ್ಷಣ ಕಾಲದಲ್ಲಿ ಪಡೆದ ಪಾಂಡಿತ್ಯ ಮತ್ತು ಅನುಭವದಿಂದ, ರೈತರ ಅಭಿವೃದ್ಧಿಕಾರ್ಯಗಳಲ್ಲಿ ಆಸಕ್ತಿ ವಹಿಸಿ ದುಡಿಯಬೇಕು ಅವರ ವ್ಯಾಸಂಗಕ್ಕೆ ಈ ಕೆಳಗೆ ಕಂಡ ಪಾಠಗಳ ಪಟ್ಟಿಯನ್ನು ಕೊಡಲಾಗಿದೆ

VII ವ್ಯವಸಾಯ

೧ ವ್ಯವಸಾಯದ ಮಹತ್ವ (ಇಲ್ಲಿ ಅದರ ಕ್ಷೀಣತೆಗಳ ಕಾರಣ, ಇತ್ಯಾದಿ)

೨ ಉತ್ತಮ ಯಂತ್ರೋಪಕರಣಗಳು

೩. ನೀರಾವರಿ ಅನುಕೂಲ್ಯ, ಆಸ್ಪದ, ಇತ್ಯಾದಿ

೪ ಗೊಬ್ಬರ, ಇತರ ಫಲೋತ್ಪಾದಕ ಪದಾರ್ಥಗಳು

೫ ಮುಖ್ಯ ಬೆಳೆಗಳ ವ್ಯವಸಾಯಕ್ರಮವನ್ನು ಉತ್ತಮಪಡಿಸುವ ವಿಧಾನ. ತರಕಾರಿ, ಹಣ್ಣುಗಿಡಗಳ ವ್ಯವಸಾಯ

೬ ದನಕರುಗಳ ಆವಶ್ಯಕ ಮತ್ತು ಪಾಲನೆ
೭ ದನಕರುಗಳ ಆಹಾರವನ್ನು ಶೇಖರಿಸುವ ಕ್ರಮ
೮ ವ್ಯವಸಾಯ ವಿದ್ಯಾಪ್ರಚಾರ
೯ ಉತ್ತಮ ಬೀಜಗಳು
೧೦ ಮುಖ್ಯ ಬೆಳಗಳಿಗೆ ಉಂಟಾಗತಕ್ಕ ರೋಗರುಜಿನಾದಿಗಳು ಮತ್ತು ಅವುಗಳನ್ನು ನಿರ್ಮೂಲಮಾಡುವ ಕ್ರಮ
೧೧ ರೈತರ ಕ್ಷೇತ್ರ ವರಮಾನ ವಿಚಾರ, ಇತರ ದೇಶಗಳ ರೈತರ ವರಮಾನ ಪಟ್ಟಿಯೊಡನೆ ಹೋಲಿಸುವುದು, ಇವುಗಳ ವಿಮರ್ಶೆ
೧೨ ವ್ಯವಸಾಯ ಪದಾರ್ಥಗಳ ವ್ಯಾಪಾರ ಸೌಕರ್ಯ
೧೩ ಪರೀಕ್ಷಾ ಕ್ಷೇತ್ರಗಳಲ್ಲಿ ಸ್ವತಃ ಕೆಲಸಮಾಡುವುದು

VIII ವಿದ್ಯಾಭ್ಯಾಸ

೧ ವಿದ್ಯಾಭ್ಯಾಸದ ಅರ್ಥ ಮತ್ತು ಗುರಿ
೨ ಮಾತೃಭಾಷೆಯ ಮಹತ್ವ
೩ ಗ್ರಾಮ ವಿದ್ಯಾಭ್ಯಾಸಕ್ರಮದ ಚರಿತ್ರೆ, ಅದರ ಪ್ರಭಾವ
೪ ಪ್ರಾಥಮಿಕ ವಿದ್ಯಾಭ್ಯಾಸದ ವಿಸ್ತಾರ, ಬಲಾತ್ಕಾರ ವಿದ್ಯಾಭ್ಯಾಸದ ಕ್ರಮ
೫ ಪ್ರಯಾಣಿಕ ಪುಸ್ತಕ ಭಂಡಾರ, ಅವುಗಳ ಉಪಯೋಗ
೬ ಪ್ರಚಾರಕಾರ್ಯಗಳ ಕ್ರಮ, ಅವಶ್ಯಕತೆ, ಇತ್ಯಾದಿ
೭ ಗ್ರಾಮಾಭಿವೃದ್ಧಿ ನಾಟಕಗಳು, ಪದಗಳು, ಲಾವಣಿ —ಇವುಗಳಲ್ಲಿ ಸ್ವತಃ ಅನುಭವ ಹೊಂದುವುದು

IX ಆರೋಗ್ಯ ಮತ್ತು ನೈರ್ಮಲ್ಯ

೧ ಜೀವನಕ್ಕೆ ಅತಿಮುಖ್ಯವಾದ ಗಾಳಿ, ನೀರು, ಆಹಾರ —ಇವುಗಳ ಸಂಕ್ಷಿಪ್ತ ಚರಿತ್ರೆ, ಅವುಗಳ ಪ್ರಾಮುಖ್ಯತೆ
೨ ಅತಿಮುಖ್ಯ ರೋಗಗಳ ನಿವಾರಣೆ
೩ ಜನನ ಮರಣ ತಃಖ್ತೆಯ ವಿಮರ್ಶೆ, ಮರಣ ಸಂಖ್ಯೆಯನ್ನು ಕಡಿಮೆಮಾಡುವುದಕ್ಕೆ ಇತರ ದೇಶಗಳು ಆಚರಿಸುತ್ತಿರುವ ಉಪಾಯ

೪ ಗ್ರಾಮ ನೈರ್ಮಲ್ಯ

೫ ದೇವಿ ಹಾಕಿಸುವುದು, ಇನಾಕ್ಯುಲೇಷನ್— ಇವುಗಳ ಅವಶ್ಯಕತೆ

೬ ಮನೆ ಮತ್ತು ಅವರ ಹತ್ತಿರ ಪ್ರದೇಶಗಳು

೭ ಮುಖ್ಯವಾದ ಸಾಂಕ್ರಾಮಿಕ ರೋಗ, ಅವುಗಳ ನಿವಾರಣೋಪಾಯ

೮ ಮಾತೃತ್ವ, ಮಕ್ಕಳ ಆರೋಗ್ಯ ರಕ್ಷಣೆ

೯ ಆರೋಗ್ಯ ಪ್ರಚಾರಕ್ಕೆ ಮಾಡುವ ಉಪನ್ಯಾಸಗಳ ಅನುಭವ

X ಸಣ್ಣ ಕೈಗಾರಿಕ

೧ ಉಪವೃತ್ತಿಗಳ ಆವಶ್ಯಕತ, ಪ್ರಭಾವ, ಇತ್ಯಾದಿ

೨ ಇತರ ದೇಶಗಳ ಗ್ರಾಮ ಕೈಗಾರಿಕೆಯ ಸಂಕ್ಷಿಪ್ತ ಚರಿತ್ರೆ

೩ ಅತಿಮುಖ್ಯ ಗ್ರಾಮ ಕೈಗಾರಿಕೆಗಳ ಅನುಭವ

೪ ಸುಲಭವಾದ ಸಣ್ಣ ಕೈಗಾರಿಕೆಗಳಲ್ಲಿ ಶಿಕ್ಷಣ ಹೊಂದುವುದು

XI ಸಹಕಾರ

೧ ಸಹಕಾರತತ್ವದ ಅರ್ಥವಿವರಣೆ

೨ ರೈತರ ಆರ್ಥಿಕಜೀವನ

೩ ಸಹಕಾರತತ್ವ ಚರಿತ್ರೆ, ನಮ್ಮ ದೇಶದಲ್ಲಿ ಅದರ ಬೆಳವಣಿಗೆ ಕ್ರಮ

೪ ಗ್ರಾಮಗಳಿಗೆ ಅನುಕೂಲವಾದ ಸಹಕಾರ ಸಂಘಗಳ ಮಾದರಿ

೫ ಸಹಕಾರ—ರೈತರ ಸಾಲ

೬ ಗ್ರಾಮಾಭಿವೃದ್ಧಿಕಾರ್ಯಗಳಲ್ಲಿ ಸಹಕಾರದ ಸಹಾಯ.

೭ ವ್ಯವಸಾಯ ವಿಧಾನಗಳಲ್ಲಿ ಸಹಕಾರ

ಗ್ರಾಮ ಪಂಚಾಯಿತಿ, ಪಶುವೈದ್ಯ, ಸ್ಕೌಟಿಂಗ್ ಮತ್ತು ರೆವಿನ್ಯೂ ಆಡಳಿತ ವಿಷಯಗಳಲ್ಲಿ ಸಾಧ್ಯವಾದಷ್ಟು ಪರಿಚಯವನ್ನು ಉಂಟುಮಾಡುವುದು

ನಮ್ಮ ಗ್ರಾಮಗಳ ಈಗಿನ ಸನ್ನಿವೇಶದಲ್ಲಿ ಹೆಚ್ಚು ಪ್ರಚಾರಕಾರ್ಯ ಮೊದಲು ನಡೆಯಬೇಕು ಪ್ರಚಾರಕಾರ್ಯವನ್ನು ಉತ್ತಮ ರೀತಿಯಲ್ಲಿ ನಡೆಸಬೇಕಾದರೆ ರೈತರ ಸ್ಥಿತಿ, ಅವರ ವ್ಯವಸಾಯಕ್ರಮ, ಶಿಕ್ಷಣಪದ್ಧತಿ, ಅವರ ಜೀವನಕ್ರಮ—ಇವುಗಳ ವಿಷಯದಲ್ಲಿ ಪ್ರಚಾರಕರಿಗೆ ಸ್ವಲ್ಪ ವಾದರೂ ಪಾಂಡಿತ್ಯವೂ ಪರಿಚಯವೂ ಇರಲೇಬೇಕು ಸ್ವಲ್ಪ ಅನುಭವವೂ ಇದ್ದರೆ ಇನ್ನೂ ಒಳ್ಳೆಯದು ನಮ್ಮ ಪ್ರಚಾರಕರಿಗೆ ಪಾದ್ರಿಗಳ ಮತ ಪ್ರಚಾರ ಪ್ರೀತಿಗಿಂತ ಹೆಚ್ಚು ಪ್ರೀತಿಯೂ ಉತ್ಸಾಹವೂ ಅವರ ಕೆಲಸ ದಲ್ಲಿರಬೇಕು ಆದುದರಿಂದ ಮೇಲ್ಕಂಡ ರೀತಿಯಲ್ಲಿ ವಿದ್ಯಾವಂತ ಯುವಕ ರನ್ನು ತರಪೇತುಮಾಡಿ ಗ್ರಾಮಾಭಿವೃದ್ಧಿಕಾರ್ಯಗಳಿಗೆ ನೇಮಿಸಿದರೆ, ಗ್ರಾಮ ಪುನರುಜ್ಜೀವನ ಕೆಲಸವು ಸರ್ಕಾರದವರ ಆಶ್ರಯದಲ್ಲಿ ಅತ್ಯುತ್ತಮ ರೀತಿಯಲ್ಲಿ, ಸಮರ್ಪಕವಾಗಿ ನಡೆಯುವುದರಲ್ಲಿ ಸಂದೇಹವಿಲ್ಲ.

# ಪರಿಶಿಷ್ಟ ೨

## ಗ್ರಾಮ ಆರ್ಥಿಕ ವಿಚಾರಣೆಯ ಯೋಜನೆ

**(Plan for Village Economic Survey)**

### ಅಧ್ಯಾಯ ೧. ಪೀಠಿಕಾ ಪ್ರಕರಣ

೧

೧ ಗ್ರಾಮದ ಹೆಸರು, ತಾಲ್ಲೂಕು, ಡಿಸ್ಟ್ರಿಕ್ಟು, ವಿಸ್ತೀರ್ಣ, ಮುಖ್ಯ ಇತಿಹಾಸ ವಿಚಾರ, ಗ್ರಾಮದ ಹತ್ತಿರ ಇರುವ ಕಾಡು, ನದಿ, ದೇವಸ್ಥಾನ ಮತ್ತು ಹೊರಗಿನ ಸ್ಥಳಗಳಿಗೆ ಇರುವ ದೂರ, ದಾರಿ, ಮುಂತಾದ ಪ್ರಯಾಣ ಸೌಕರ್ಯಗಳನ್ನು ವಿಶದವಾಗಿ ನಮೂದಿಸಿ ?

೨ ಗ್ರಾಮದ ಒಟ್ಟು ಜನಸಂಖ್ಯೆ ? ಕೆಲವು ಸೆನ್ಸಸ್ ವರದಿಯನ್ನು ತೆಗೆದುಕೊಂಡು, ಈ ಕೆಳಗೆ ಕಂಡ ವಿಷಯಗಳನ್ನೊಳಗೊಂಡ ತಃಖ್ತೆಯನ್ನು ತಯಾರುಮಾಡಿ ?

ಗಂಡಸು ಮತ್ತು ಹೆಂಗಸರ ಸಂಖ್ಯೆ, ವಯಸ್ಸು, ಜಾತಿ, ಅವರು ಆಡತಕ್ಕ ಭಾಷೆ

೩ ಗ್ರಾಮದ ಜನನ ಮರಣ ತಃಖ್ತೆಯನ್ನು ವಿಚಾರಮಾಡಿ, ಜನನ ಮರಣಗಳಲ್ಲಿ ಹೆಚ್ಚು ವ್ಯತ್ಯಾಸ ಕಂಡುಬಂದ ಕಡೆ, ಕಾರಣಗಳನ್ನು ನಮೂದಿಸಿ ಅವುಗಳ ಶೇಕಡ ದರವನ್ನು ತೋರಿಸಿ

೪ ಜನಗಳು ಗ್ರಾಮವನ್ನು ಬಿಡುತ್ತಿದ್ದಾರೆಯೆ ? ಅಥವಾ ಹೊರಗಿನಿಂದ ಬಂದು ನೆಲೆಸುತ್ತಿದ್ದಾರೆಯೆ ? ಇವುಗಳಿಗೆ ಕಾರಣವೇನು ?

೫ ಗ್ರಾಮಸ್ಥರ ಮುಖ್ಯ ವೃತ್ತಿ ಯಾವುದು ? ಎಷ್ಟೆಷ್ಟು ಸಂಸಾರಗಳು ಯಾವ ಯಾವ ವೃತ್ತಿಯನ್ನು ಅನುಸರಿಸುತ್ತಾ ಇವೆ ?

೬ ಕೂಲಿಗಾರರು ಗ್ರಾಮದಲ್ಲಿ ಹೆಚ್ಚಾಗಿರುವರೆ ? ಅವರ ಸಂಬಳದ ದರ ಹೇಗೆ ? ಅವರ ಹಕ್ಕುಬಾಧ್ಯತೆಗಳೇನು ? ಸಂಬಳ ಯಾವ ರೀತಿಯಲ್ಲಿ ಪಾವತಿಯಾಗುತ್ತಿದೆ ? ಅದು ಅವರ ಜೀವನಕ್ಕೆ ಸಾಕೆ ? ಮುಂತಾದ ವಿಷಯಗಳನ್ನು ವಿಶದವಾಗಿ ವರ್ಣಿಸಿ

೨

೧ ಗ್ರಾಮದ ಪಾಠಶಾಲೆಯ ಶಿಕ್ಷಣ ಪದ್ಧತಿಯನ್ನು ತಿಳಿಸಿ? ಶಿಕ್ಷಣವು ಗ್ರಾಮದ ವಾತಾವರಣಕ್ಕೆ ಅನುಕೂಲವಾಗಿದೆಯೆ? ಹಾಗೆ ಇಲ್ಲದಿದ್ದರೆ ಅದರಿಂದ ಆಗಿರುವ ಬಾಧಕಗಳೇನು?

೨ ಪಾಠಶಾಲೆಗಳ ಸಂಖ್ಯೆ, ವಿದ್ಯಾರ್ಥಿ ವಿದ್ಯಾರ್ಥಿನಿಯರ ಸಂಖ್ಯೆ, ಗ್ರಾಮದಲ್ಲಿ ಓದು ಬರಹ ಬರುವವರ ಸಂಖ್ಯೆ, ವಿದ್ಯಾಭ್ಯಾಸಕ್ಕಾಗಿ ಹೊರಕ್ಕೆ ಹೋಗಿರುವವರ ಸಂಖ್ಯೆ, ಮುಂತಾದ ವಿಷಯಗಳನ್ನೊಳಗೊಂಡ ಒಂದು ತಃಖ್ತೆಯನ್ನು ತಯಾರುಮಾಡಿ

೩ ಓದುಬರಹಕ್ಕೆ ಉತ್ತೇಜನ ಕೊಡತಕ್ಕ ಪುಸ್ತಕ ಭಂಡಾರ, ವಾಚನಾಲಯ, ಸಂಗೀತ ಮತ್ತು ಇತರ ಕಲೆಗಳ ಅಭಿವೃದ್ಧಿಗೆ ಅನುಕೂಲಗಳು ಗ್ರಾಮದಲ್ಲಿ ಇವೆಯೆ? ಇದ್ದರೆ ಅವು ಎಷ್ಟರ ಮಟ್ಟಿಗೆ ಸಂಸ್ಕೃತಿಗೆ ಸಹಾಯಮಾಡುತ್ತಿವೆ ಎಂಬುದನ್ನು ವಿಶದವಾಗಿ ತಿಳಿಸಿ

೩

೧ ಗ್ರಾಮದ ಆರೋಗ್ಯವು ಹೇಗಿದೆ? ಸಾಂಕ್ರಾಮಿಕ ರೋಗಗಳು ಹೆಚ್ಚೆ? ಗ್ರಾಮದಲ್ಲಿರುವ ವೈದ್ಯ ಸಹಾಯವೇನು? ಪ್ಲೇಗು, ಕಾಲರಾ, ಮಲೇರಿಯಾ, ಸಿಡುಬು, ಮುಂತಾದ ರೋಗಗಳಿಂದ ಸಾಯುವವರ ಸಂಖ್ಯೆ ಹೆಚ್ಚಾಗುತ್ತಿದೆಯೆ?

೨ ಗ್ರಾಮದಲ್ಲಿರುವ ಅನಾರೋಗ್ಯಕರವಾದ ಅಭ್ಯಾಸಗಳನ್ನು ವಿಶದವಾಗಿ ತಿಳಿಸಿ? ಅಲ್ಲಿರುವ ಕುಡಿಯುವ ನೀರಿನ ಸೌಕರ್ಯವು ಸಮರ್ಪಕವಾಗಿದೆಯೆ?

೩ ಗ್ರಾಮಸ್ಥರು ವಾಸಿಸುತ್ತಿರುವ ಮನೆಗಳು ಅನುಕೂಲವಾಗಿವೆಯೆ? ಗಾಳಿ, ಬೆಳಕು ಮತ್ತು ನೈರ್ಮಲ್ಯ ಮುಂತಾದುವುಗಳು ಸಾಕಾದಷ್ಟಿವೆಯೆ?

೪ ಗ್ರಾಮದ ಆರೋಗ್ಯವನ್ನು ಉತ್ತಮಪಡಿಸುವುದಕ್ಕೆ ಅನುಕೂಲವಾದ ಸೂಚನೆಗಳನ್ನು ಸ್ಥಳವಿದ್ಯಮಾನಗಳಿಗೆ ಅನ್ವಯವಾಗುವಂತೆ ತಿಳಿಸಿ

## ಅಧ್ಯಾಯ ೨. ವ್ಯವಸಾಯ

೧

೧ ಗ್ರಾಮದಲ್ಲಿ ಸಾಗುವಳಿಯಾಗಲು ಅರ್ಹವಾಗಿರುವ ಜಮೀನಿನ ಒಟ್ಟು ವಿಸ್ತೀರ್ಣ, ಸಾಗುವಳಿಯಾಗುತ್ತಿರುವ ಜಮೀನಿನ ಒಟ್ಟು ವಿಸ್ತೀರ್ಣ ಎಷ್ಟು?

೨ ಈ ಕೆಳಗಿನ ಅಂಶಗಳನ್ನೊಳಗೊಂಡ ಒಂದು ತಃಖ್ತೆಯನ್ನು ಮಾಡಿ?

೩ ಗ್ರಾಮದಲ್ಲಿ ಬೆಳೆಯುವ ಮುಖ್ಯ ಧಾನ್ಯಗಳು ಯಾವುವು? ಯಾವ ಯಾವ ಧಾನ್ಯಗಳು ಎಷ್ಟೆಷ್ಟು ಎಕರೆಯಲ್ಲಿ ಬೆಳೆಯಾಗುತ್ತಿವೆ

೪ ಅಲ್ಲಿ ಆಚರಣೆಯಲ್ಲಿರುವ ತರಿ, ಖುಷ್ಕಿ, ಬಾಗಾಯ್ತು ಸಾಗುವಳಿ ಕ್ರಮವನ್ನು ಚೆನ್ನಾಗಿ ವಿವರಿಸಿ?

೫ ಉಪಯೋಗಿಸುತ್ತಿರುವ ಗೊಬ್ಬರಗಳ್ಯಾವುವು? ಯಾವ ಬೆಳೆಗೆ ಗೊಬ್ಬರ ಹಾಕುತ್ತಾರೆ? ಎಷ್ಟು ಹಾಕುತ್ತಾರೆ? ಯಾವ ರೀತಿ ಹಾಕುತ್ತಾರೆ? ಗೊಬ್ಬರವನ್ನು ಹೇಗೆ ಶೇಖರಿಸುತ್ತಿದ್ದಾರೆ?—ಇವುಗಳನ್ನೆಲ್ಲಾ ವಿಶದವಾಗಿ ತಿಳಿಸಿ

೨

೧ ರೈತರು ಬಿತ್ತುವ ಬೀಜವನ್ನು ಹೇಗೆ ಚುನಾಯಿಸುತ್ತಾರೆ? ಉತ್ತಮವಾದ ಬೀಜಗಳು ಅವರಿಗೆ ಸಿಕ್ಕುತ್ತಿವೆಯ? ಒದಗಿಸುವುದಕ್ಕೆ ಯಾವುದಾದರೂ ಅನುಕೂಲಗಳು ಗ್ರಾಮದಲ್ಲಿ ಇವೆಯೆ? ವ್ಯವಸಾಯ ಶಾಖೆಯವರು ಯಾವುದಾದರೂ ಕಾರ್ಯಕ್ರಮವನ್ನು ಕೈಗೊಂಡಿದ್ದಾರೆಯೆ?

೨ ರೈತರ ಉತ್ಪತ್ತಿಯು ಸರಿಯಾಗಿದೆಯೆ? ಒಂದು ಎಕರೆಯಲ್ಲಿ ಆಗುವ ಉತ್ಪತ್ತಿಯ ಅಂದಾಜು ಏನು? ರೈತರು ಬೆಳೆಯುತ್ತಿರುವ ಧಾನ್ಯವೆಷ್ಟು? ಉತ್ಪತ್ತಿಯು ಹೆಚ್ಚುತ್ತಿದೆಯೆ? ಅಥವಾ ಕಡಿಮೆಯಾಗುತ್ತಿದೆಯೆ? ಹೆಚ್ಚು ಕಡಿಮೆಗೆ ಮುಖ್ಯ ಕಾರಣಗಳೇನು? ಕಳೆದ ೫ ವರ್ಷದ ಉತ್ಪತ್ತಿಯನ್ನು ಎಕರೆವಾರಾಗಿ ಶೇಖರಿಸಿ

| ವರ್ಷ | ಖುಷ್ಕಿ ಜಮೀನಿನ ವಿಸ್ತೀರ್ಣ | | ತರಿ ಜಮೀನಿನ ವಿಸ್ತೀರ್ಣ | | ಬಾಗಾಯ್ತು ಜಮೀನಿನ ವಿಸ್ತೀರ್ಣ | | ಅರಣ್ಯದ ವಿಸ್ತೀರ್ಣ | | ಕಾವಲು ವಿಸ್ತೀರ್ಣ | | ಬಂಜರು ವಿಸ್ತೀರ್ಣ | | ಒಟ್ಟು | |
|---|---|---|---|---|---|---|---|---|---|---|---|---|---|---|
| | ಎ | ಗುಂ | ಎ | ಗುಂ | ಎ | ಗುಂ | ಎ | ಗುಂ | ಎ | ಗುಂ | ಎ | ಗುಂ | ಎ | ಗಂ |
| 1910 | | | | | | | | | | | | | | |
| 1915 | | | | | | | | | | | | | | |
| 1920 | | | | | | | | | | | | | | |
| 1925 | | | | | | | | | | | | | | |
| 1930 | | | | | | | | | | | | | | |
| 1935 | | | | | | | | | | | | | | |
| 1938 | | | | | | | | | | | | | | |

೩. ಈಗ ಇರುವ ಸಾಗುವಳಿ ಕ್ರಮದಲ್ಲಿ ಆಚರಣೆಯಲ್ಲಿ ಇರುವ ಯಂತ್ರಸಾಮಗ್ರಿಗಳು ಯಾವುವು? ಅವು ಸರಿಯಾಗಿ ಇವೆಯೆ? ಅಥವಾ ಅವುಗಳಲ್ಲಿ ಯಾವುದಾದರೂ ಬದಲಾವಣೆಯಾಗಬೇಕೆ? ಅಲ್ಲಿಯ ವ್ಯವಸಾಯಕ್ರಮವನ್ನು ಉತ್ತಮಪಡಿಸುವುದಕ್ಕೆ ಅವಶ್ಯಕವಾದ ಸಾಧನ ಸಾಮಗ್ರಿಗಳು ಯಾವುವು? ಇವುಗಳನ್ನು ಆಚರಣೆಯಲ್ಲಿ ತರುವುದಕ್ಕೆ ಇರುವ ಸಾಧಕ ಬಾಧಕಗಳು ಯಾವುವು?— ಇವುಗಳನ್ನೆಲ್ಲಾ ಚೆನ್ನಾಗಿ ಚರ್ಚೆಮಾಡಿ, ಸೂಕ್ತವಾದ ಸಲಹೆಗಳನ್ನು ನಮೂದಿಸಿ?

೪ ವಾಣಿಜ್ಯ ಬೆಳೆಗಳನ್ನು ಮಾಡುವುದಕ್ಕೆ (Commercial crops) ಅಲ್ಲಿ ಇರುವ ತೊಂದರೆಗಳೇನು?

೩

೧ ಗ್ರಾಮದ ಪ್ರಾಣಿಗಳನ್ನು ತೋರಿಸತಕ್ಕ ಒಂದು ತಃಖ್ತೆಯನ್ನು ತಯಾರುಮಾಡಿ —

| ಪ್ರಾಣಿಗಳ ಹೆಸರು | ಒಟ್ಟು ಸಂಖ್ಯೆ | | | | ಅವುಗಳ ಉಪಯೋಗ |
|---|---|---|---|---|---|
| | 1925 | 1930 | 1935 | 1938 | |
| ಹಸು | | | | | |
| ಎತ್ತು | | | | | |
| ಎಮ್ಮೆ | | | | | |
| ಕೋಣ | | | | | |
| ಆಡು | | | | | |
| ಕುರಿ | | | | | |
| ಕುದುರೆ | | | | | |
| ಹಂದಿ | | | | | |
| ಕತ್ತೆ | | | | | |

೨ ಪ್ರಾಣಿಗಳನ್ನು ಸಾಕುತ್ತಿರುವ ಬಗೆಯನ್ನು ಚಿತ್ರಿಸಿ, ಅಲ್ಲಿ ಆಗಾಗ್ಗೆ ಉಂಟಾಗುವ ಸಾಂಕ್ರಾಮಿಕ ರೋಗಗಳ ಸ್ವಭಾವ ಮತ್ತು ಅವುಗಳ ನಿವಾರಣೋಪಾಯಗಳನ್ನು ವರ್ಣಿಸಿ? ಪ್ರಾಣಿಗಳ ಆಹಾರ, ಆಹಾರವನ್ನು ಇಡತಕ್ಕ ಕ್ರಮ, ಉತ್ತಮಪಡಿಸುವ ವಿಧಾನ—ಇವುಗಳ ವಿಷಯವಾಗಿ ಅಲ್ಲಿ ಸಿಕ್ಕುವ ಅಂಶಗಳನ್ನು ಶೇಖರಮಾಡಿ?

೪

೧ ಗ್ರಾಮದ ವ್ಯವಸಾಯಕ್ಕೆ ಇರುವ ನೀರಾವರಿ ಸೌಕರ್ಯವು ಹೇಗಿದೆ? ಬಾವಿ, ಕೆರೆ, ಕಾಲುವೆ, ಇವುಗಳಿಂದ ಸಾಗುವಳಿಯಾಗತಕ್ಕ ವಿಸ್ತೀರ್ಣವೆಷ್ಟು? ನೀರಾವರಿ ಸೌಕರ್ಯವನ್ನು ಉತ್ತಮಪಡಿಸುವುದಕ್ಕೆ ಏನು ಮಾಡಬೇಕು? ಹಾಗೆ ಉತ್ತಮಪಡಿಸಿದರೆ ಅವುಗಳಿಂದ ಉಂಟಾಗುವ ಪ್ರತಿಫಲದ ಅಂದಾಜೇನು?

೨ ಈಗ ಸಾಗುವಳಿಯಾಗುತ್ತಿರುವ ತರಿ, ಖುಷ್ಕಿ, ಬಾಗಾಯ್ತು ತಾಕುಗಳಲ್ಲಿ ಕೆಲವು ಮಾದರಿ ತಾಕುಗಳನ್ನು ಚುನಾಯಿಸಿಕೊಂಡು, ಅವುಗಳ ಆದಾಯ ಖರ್ಚುಗಳನ್ನು ತೋರಿಸತಕ್ಕ ಪಟ್ಟಿಗಳನ್ನು ತಯಾರು ಮಾಡಿ, ಹಾಗೆಯೇ ಅವುಗಳಿಂದ ಉಂಟಾಗುವ ಆದಾಯ ನಷ್ಟಗಳನ್ನು ವಿಶದವಾಗಿ ತೋರಿಸಿ

೩ (1) ತಾಕಿನ ವಿಸ್ತೀರ್ಣ, ರೈತನ ಮನೆಯಲ್ಲಿರುವವರ ಸಂಖ್ಯೆ, ಕೂಲಿಯಾಳುಗಳ ಸಂಖ್ಯೆ, ಸಾಗುವಳಿ ಖರ್ಚು ಮತ್ತು ಕಂದಾಯದ ಖರ್ಚು—ಇವುಗಳನ್ನು ತೋರಿಸತಕ್ಕ ತಃಖ್ತೆಯನ್ನು ತಯಾರುಮಾಡಿ —

| ಸಾಗುವಳಿ ಕೆಲಸ | ಖರ್ಚು | | | ಷರಾ |
|---|---|---|---|---|
| | ರೂ | ಆ | ಪೈ | |
| ಉಳುಮೆ ಮತ್ತು ಮಟ್ಟ | | | | |
| ಗೊಬ್ಬರ | | | | |
| ನೀರು ಹಾಯಿಸುವುದು | | | | |
| ಬೀಜ | | | | |
| ನಾಟಿ | | | | |
| ಕಾಲುವೆ ತೋಡಿಸುವುದು | | | | |
| ಕಳೆ ಕೀಳಿಸುವುದು | | | | |
| ಕಟಾವು ಮಾಡಿಸುವುದು | | | | |
| ರೇಖೆ ಮಾಡಿಸುವುದು | | | | |
| ಪ್ರಾಣಿಗಳ ಖರ್ಚು | | | | |
| ಉಪಕರಣಗಳು | | | | |
| ಕಂದಾಯ | | | | |
| ಇತರ ತೆರಿಗೆ | | | | |
| ಸಾಲದ ಬಡ್ಡಿ | | | | |
| ಇತರೆ ಖರ್ಚು | | | | |

(ii) ಒಟ್ಟು ಆದಾಯ —

| ವರಮಾನ | ಮೊತ್ತ | | ಮೊಬಲಗು | | |
|---|---|---|---|---|---|
| | ಖಂಡಿ | ಕೊಳಗ | ರೂ | ಆ | ಪೈ |
| ಖುಷ್ಕಿ, ತರಿ, ಬಾಗಾಯ್ತು ಜಮೀನುಗಳಿಂದ ಬಂದ ವರಮಾನ | | | | | |
| ಹಾಲು, ಮೊಸರು, ಬೆಣ್ಣೆ ಮುಂತಾದವುಗಳಿಂದ ಬಂದ ವರಮಾನ | | | | | |
| ದನ, ಕುರಿ, ಆಡು ಮುಂತಾದವುಗಳಿಂದ ಬಂದ ವರಮಾನ | | | | | |
| ಕೂಲಿ ಕೆಲಸದಿಂದ ಬಂದ ವರಮಾನ | | | | | |
| ಇತರ ಕೈಗಾರಿಕೆಯಿಂದ ಬಂದ ವರಮಾನ | | | | | |
| ಇತರೆ ವರಮಾನ | | | | | |

ರೂ ಆ ಪೈ

(iii) ಒಟ್ಟು ಆದಾಯ
ಒಟ್ಟು ಖರ್ಚು

ಉಳಿದ ಆದಾಯ ಅಥವಾ ನಷ್ಟ

೪ ಮೇಲ್ಕಂಡ ರೀತಿಯಲ್ಲಿ ಕೆಲವು ಮಾದರಿ ತಾಕುಗಳನ್ನು ಆರಿಸಿ, ವಿಮರ್ಶೆಮಾಡಿ, ಅವುಗಳಲ್ಲಿ ಆಗುತ್ತಿರುವ ಬದಲಾವಣೆಗಳನ್ನು ನಮೂದಿಸಿ

## ಅಧ್ಯಾಯ ೩. ಗ್ರಾಮ ಕೈಗಾರಿಕೆ

೧

೧ ಈಗ ಇರುವ ಕೈಕಸಬುಗಳು ಯಾವುವು? ಅವುಗಳ ಸ್ವಭಾವ, ಬಂಡವಾಳ, ಕೆಲಸಮಾಡುತ್ತಿರುವವರ ಸಂಖ್ಯೆ, ಅವುಗಳಿಂದ ಬರುತ್ತಿರುವ ಉತ್ಪತ್ತಿ ಮುಂತಾದುವುಗಳನ್ನು ವಿಶದವಾಗಿ ತಿಳಿಸಿ,

೨ ನೂಲುವುದು ಮತ್ತು ನೇಯ್ಗೆ ಕೈಗಾರಿಕೆಗಳು ಇವೆಯೆ? ಇದ್ದರೆ ಎಷ್ಟು ಮಗ್ಗಗಳಿವೆ? ಎಷ್ಟು ಜನ ಕೆಲಸಮಾಡುತ್ತಿದ್ದಾರೆ? ಅವುಗಳಿಂದ

ಉತ್ಪತ್ತಿಯಾಗುವ ಬಟ್ಟೆ ಎಷ್ಟು? ಮತ್ತು ಅದರ ಬೆಲೆ ಎಷ್ಟು? ಗ್ರಾಮಕ್ಕೆ ಸಾಕಾಗುವಷ್ಟು ಬಟ್ಟೆಯನ್ನು ಒದಗಿಸಲು ಈ ಕೈಗಾರಿಕೆಗೆ ಸಾಧ್ಯವೆ?

೩ ಪ್ರತಿ ವ್ಯವಸಾಯಗಾರನೂ ಎಷ್ಟು ದಿನ ಒಂದು ವರ್ಷದಲ್ಲಿ ಕೆಲಸ ಮಾಡುತ್ತಾನೆ? ಬೇಸಾಯದ ಕೆಲಸವಿಲ್ಲದೆ ಪುರಸತ್ತು ಇರುವ ಕಾಲದಲ್ಲಿ ರೈತರು ಬೇರೆ ಉಪವೃತ್ತಿಯನ್ನು ಕೈಗೊಂಡಿದ್ದಾರೆಯೆ?

೪ ವ್ಯವಸಾಯಕ್ಕೆ ಸಂಬಂಧಪಟ್ಟಂತೆ ಯಾವುದಾದರೂ ಉಪ ಕೈಗಾರಿಕೆಗಳು ಇವೆಯೇ? ಅಥವಾ ಅಂತಹವುಗಳನ್ನು ಸರ್ಕಾರದವರು ಸ್ಥಾಪಿಸಲು ಪ್ರಯತ್ನಪಡುತ್ತಿದ್ದಾರೆಯೆ? ಇಂತಹ ಕೈಗಾರಿಕೆಗಳಿಗೆ ಗ್ರಾಮದಲ್ಲಿ ಸರಿಯಾದ ಅನುಕೂಲ, ಸನ್ನಿವೇಶಗಳು ಇವೆಯೆ? ಹೀಗೆ ಇಂತಹ ಕೈಗಾರಿಕೆಗಳನ್ನು ಅಭಿವೃದ್ಧಿಗೆ ತರಬೇಕಾದರೆ ಏನು ಮಾಡ ಬೇಕು?—ಇವುಗಳನ್ನೆಲ್ಲಾ ವಿಶದವಾಗಿ ವಿವರಿಸಿ?

೫ ಗ್ರಾಮದ ಸ್ಥಳೀಯ ವಿದ್ಯಮಾನಗಳಿಗೆ ಯೋಗ್ಯವಾದ ಮತ್ತು ತಕ್ಕುದಾದ ಸಣ್ಣ ಕೈಗಾರಿಕೆಗಳನ್ನು ನಮೂದಿಸಿ? ಅವುಗಳ ಅಭಿವೃದ್ಧಿಗೆ ಸೂಕ್ತವಾದ ಕಾರ್ಯಕ್ರಮವನ್ನು ವಿವರಿಸಿ?

೨

೧ ಗ್ರಾಮದಲ್ಲಿ ಇರತಕ್ಕ ಅಂಗಡಿಗಳೆಷ್ಟು? ಅವುಗಳ ಸ್ವಭಾವ, ಮಾರತಕ್ಕ ಸಾಮಾನು ಮತ್ತು ದರ ಇವುಗಳನ್ನು ತಿಳಿಸಿ? ಅಂಗಡಿಗಳು ತಾವು ಮಾರತಕ್ಕ ಸಾಮಾನುಗಳನ್ನು ಅಲ್ಲಿಯೇ ಬೆಳೆದ ಪದಾರ್ಥಗಳಿಂದ ಶೇಖರಿಸುತ್ತಿವೆಯೇ? ಅಥವಾ ಹೊರಗಿನಿಂದ ತರಿಸುತ್ತಿವೆಯೇ? ಮಾರಾಟದ ಪದಾರ್ಥಗಳ ಬೆಲೆಯು ಯಾವ ರೀತಿ ಇದೆ? ಬದಲಾವಣೆ ಯಾಗುತ್ತಿದ್ದರೆ ಅದಕ್ಕೆ ಕಾರಣವೇನು?

೨ ಪದಾರ್ಥಗಳ ಬೆಲೆಯ ಪಟ್ಟಿಯನ್ನು ತಯಾರಿಸಿ? ಯಾವ ಯಾವ ಕಾಲದಲ್ಲಿ ಯಾವ ಯಾವ ಪದಾರ್ಥಗಳ ಬೆಲೆಯು ಏರುತ್ತಿದೆ ಎಂಬುದನ್ನು ಪಟ್ಟಿಯಲ್ಲಿ ತೋರಿಸಿ?

೩ ಗ್ರಾಮಸ್ಥರು ಪದಾರ್ಥಗಳನ್ನು ಸಾಲವಾಗಿ ಕೊಳ್ಳುತ್ತಾರೆಯೆ? ಈ ಸಾಲವನ್ನು ಪಾವತಿಮಾಡುವ ಕ್ರಮ ಹೇಗೆ? ಈ ರೀತಿಯ ಸಾಲ ದಿಂದ ಉಂಟಾಗುತ್ತಿರುವ ತೊಂದರೆಗಳೇನು?

೪ ಅಂಗಡಿಗಳಲ್ಲಿ ಉಪಯೋಗಿಸುತ್ತಿರುವ ತಕ್ಕಡಿ, ತೂಕ, ಅಳತೆ ಮುಂತಾದುವು ಸರಿಯಾಗಿವೆಯೇ?

೫ ಗ್ರಾಮದಲ್ಲಿ ಸಹಕಾರ ಸಂಘವಿದೆಯೇ? ಇದ್ದರೆ ಅದರಿಂದ ಗ್ರಾಮಸ್ಥರಿಗೆ ಆಗುತ್ತಿರುವ ಪ್ರಯೋಜನವೇನು? ಸಹಕಾರ ಸಂಘವು ಪದಾರ್ಥಗಳ ಮಾರಾಟವನ್ನು ವಹಿಸಿಕೊಂಡರೆ ಅನುಕೂಲವೆ? ಹಾಗೆ ವಹಿಸಿಕೊಂಡರೆ ಅದರಿಂದ ಗ್ರಾಮಸ್ಥರಿಗೆ ಆಗಬಹುದಾದ ಲಾಭದ ಅಂದಾಜು ಎಷ್ಟು?

೩

೧ ಪದಾರ್ಥಗಳ ಮಾರಾಟಕ್ಕೆ ಗ್ರಾಮದಲ್ಲಿ ಇರುವ ದಾರಿ, ಮೋಟಾರ್, ರೈಲ್ವೆ ಅಥವಾ ಸಂತೆ—ಇವುಗಳ ಅನುಕೂಲ್ಯವೇನು? ಗ್ರಾಮದಿಂದ ಇತರ ಪ್ರಸಿದ್ಧ ವ್ಯಾಪಾರಸ್ಥಳಗಳಿಗಾಗಲಿ ಅಥವಾ ಪಟ್ಟಣ, ಸಂತೆಯಾಗುವ ಸ್ಥಳಗಳಿಗೆ ಇರುವ ದೂರವೆಷ್ಟು?

೨ ಗ್ರಾಮದಲ್ಲಿ ಬೆಳೆಯುವ ದವಸಗಳನ್ನು ಯಾರು ಕೊಳ್ಳುತ್ತಿದ್ದಾರೆ? ಅವುಗಳ ಬೆಲೆಯು ಹೇಗೆ ನಿರ್ಧರವಾಗುತ್ತಿದೆ? ಪದಾರ್ಥಗಳು ಸರಿಯಾದ ಬೆಲೆಗೆ ಮಾರಾಟವಾಗುತ್ತಿವೆಯೆ? ಸರಿಯಾದ ಬೆಲೆ ಬರುವವರೆಗೆ ರೈತರು ಕಾಯುತ್ತಿದ್ದಾರೆಯೆ? ಅಥವಾ ದರದಿಗೋಸ್ಕರ ಕಡಿಮೆ ಬೆಲೆಗೆ ಮಾರುತ್ತಿದ್ದಾರೆಯೆ? ಹೀಗೆ ಕಡಿಮೆ ಬೆಲೆಗೆ ಮಾರುವುದರಿಂದ ಅವರಿಗೆ ಆಗುವ ನಷ್ಟದ ಅಂದಾಜು ಎಷ್ಟು?—ಇವುಗಳನ್ನೆಲ್ಲಾ ವಿಶದವಾಗಿ ವಿವರಿಸಿ

೩ ಗ್ರಾಮದಲ್ಲಿ ತಯಾರಾಗುತ್ತಿರುವ ಪದಾರ್ಥಗಳು ಯಾವುವು? ಅವುಗಳನ್ನು ಗ್ರಾಮಸ್ಥರೇ ತಮ್ಮ ಉಪಯೋಗಕ್ಕೆ ಕೊಳ್ಳುತ್ತಿದ್ದಾರೆಯೆ? ಅಥವಾ ಹೊರಕ್ಕೆ ಮಾರಾಟಕ್ಕೆ ಕಳುಹಿಸುತ್ತಿದ್ದಾರೆಯೆ? ಗ್ರಾಮದಲ್ಲಿ ಇವುಗಳಿಗೆ ಗಿರಾಕಿ ಇದೆಯೆ?

೪ ಕಂದಾಯ, ತೆರಿಗೆ ಮುಂತಾದ ಖರ್ಚುಗಳಿಗಾಗಿ ರೈತರು ತಮ್ಮ ಪದಾರ್ಥಗಳನ್ನು ಕಡಿಮೆ ಬೆಲೆಗೆ ಮಾರುತ್ತಿದ್ದಾರೆಯೆ? ಬೆಳೆಗಳ ಮಾರಾಟಕ್ಕೆ ಅಲ್ಲಿರುವ ಸಹಕಾರ ಸಂಘದಿಂದ ಏನಾದರೂ ಪ್ರಯೋಜನವಾಗುತ್ತಿದೆಯೆ?

೫ ಗ್ರಾಮದಲ್ಲಿ ದಳ್ಳಾಳಿಗಳಿದ್ದಾರೆಯೆ? ಇವರಿಂದ ಪದಾರ್ಥಗಳನ್ನು ತಯಾರುಮಾಡುವವರಿಗೂ ಮತ್ತು ಕೊಳ್ಳುವವರಿಗೂ ಆಗುವ ನಷ್ಟವೆಷ್ಟು?

೬ ಗ್ರಾಮದ ವ್ಯಾಪಾರವನ್ನು ಉತ್ತಮಪಡಿಸುವುದಕ್ಕೆ ಅನುಕೂಲ ಸಂಸ್ಥೆಗಳ್ಯಾವುವು? ಅವುಗಳನ್ನು ಅಲ್ಲಿ ಸ್ಥಾಪಿಸುವುದಕ್ಕೆ ಮಾಡಬೇಕಾದ ಉಪಾಯಗಳೇನು?— ಇವುಗಳನ್ನು ಸೂಚಿಸಿ

## ಅಧ್ಯಾಯ ೪. ಜಮೀನು ತಾಕುಗಳು

### ೧

೧ ಗ್ರಾಮದಲ್ಲಿ ಸಾಗುವಳಿಯಾಗುತ್ತಿರುವ ಒಟ್ಟು ಜಮೀನು ವಿಸ್ತೀರ್ಣ, ಜಮೀನುದಾರರ ಸಂಖ್ಯೆ, ಒಟ್ಟು ತಾಕುಗಳ ಸಂಖ್ಯೆ, ಪ್ರತಿಯೊಬ್ಬ ಜಮೀನುದಾರನಿಗೆ ಬರುವ ಸರಾಸರಿ ತಾಕುಗಳ ಸಂಖ್ಯೆ ಮತ್ತು ತಾಕಿನ ವಿಸ್ತೀರ್ಣ— ಇವುಗಳನ್ನು ನಮೂದಿಸಿ?

೨ ಈ ಕೆಳಗೆ ಕಂಡ ತಃಖ್ತೆಗಳನ್ನು ತಯಾರಿಸಿ

ನಂ. 1

| | ಸಂಖ್ಯೆ | ವಿಸ್ತೀರ್ಣ | ಸಾಗುವಳಿಯಾಗದೆ ಇರುವ ಜಮೀನು ವಿಸ್ತೀರ್ಣ |
|---|---|---|---|
| ½ ಎಕರೆಗಿಂತ ಕಡಿಮೆ ವಿಸ್ತೀರ್ಣವುಳ್ಳ ತಾಕುಗಳು | | | |
| 1 ಎಕರೆಯಿಂದ 2 ಎಕರೆ ವಿಸ್ತೀರ್ಣವುಳ್ಳ ತಾಕುಗಳು | | | |
| 2 ,, 3 ,, | | | |
| 3 ,, 4 ,, | | | |
| 4 ,, 5 ,, | | | |
| 5 ,, 8 ,, .. | | | |
| 8 ,, 10 ,, | | | |
| 10 ,, 15 ,, . | | | |
| 15 ,, 20 ,, | | | |
| 20 ಎಕರೆಗೆ ಮೇಲ್ಪಟ್ಟ ತಾಕುಗಳು | | | |
| ಜುಮ್ಲಾ | | | |

## ನಂ. 2

| | ಜಮೀನುದಾರರು ಸ್ವಂತಕ್ಕೆ ಇಟ್ಟು ಸಾಗುವಳಿಯಾಗುತ್ತಿರುವ | | ಗೇಣಿಗೆ ಕೊಟ್ಟಿರುವ ತಾಕುಗಳ | |
|---|---|---|---|---|
| | ತಾಕಿನ ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ |
| 1 ಎಕರೆಗಿಂತ ಕಡಿಮೆ ವಿಸ್ತೀರ್ಣವುಳ್ಳದ್ದು | | | | |
| 1 ಎಕರೆಯಿಂದ 2 ಎಕರೆ | | | | |
| 2 ,, 4 ,, | | | | |
| 4 ,, 6 , | | | | |
| 6 ,, 8 ,, | | | | |
| 8 ,, 10 ,, | | | | |
| 10 ,, 15 ,, | | | | |
| 15 ,, 20 ,, | | | | |
| 20 ಎಕರೆಗೆ ಮೇಲ್ಪಟ್ಟು | | | | |
| ಜುಮ್ಲಾ | | | | |

## ನಂ. 3

| ವರ್ಷ | ಜಮೀನುದಾರರ ಸಂಖ್ಯೆ | ಜಮೀನು ವಿಸ್ತೀರ್ಣ | ತಾಕುಗಳ ಸಂಖ್ಯೆ | ತಾಕುಗಳ ಸರಾಸರಿ ವಿಸ್ತೀರ್ಣ | ಸಾಗುವಳಿದಾರರ ಸಂಖ್ಯೆ | ಸಾಗುವಳಿ ವಿಸ್ತೀರ್ಣ |
|---|---|---|---|---|---|---|
| 1905 | | | | | | |
| 1910 | | | | | | |
| 1915 | | | | | | |
| 1920 | | | | | | |
| 1925 | | | | | | |
| 1930 | | | | | | |
| 1935 | | | | | | |
| 1938 | | | | | | |

## ನಂ. 4

| ತಾಕುಗಳು | ಇಷ್ಟು ತಾಕುಗಳನ್ನು ಹೊಂದಿರುವವರ ಸಂಖ್ಯೆ | ಈ ತಾಕುಗಳ ಒಟ್ಟು ವಿಸ್ತೀರ್ಣ |
|---|---|---|
| 1 ತಾಕು ಜಮೀನು ಹೊಂದಿರುವವರು | | |
| 2 ,, ,, | | |
| 3 ,, ,, | | |
| 4 ,, ,, | | |
| 5 ,, ,, | | |
| 6 ,, ,, | | |
| 7 ,, ,, | | |
| 8 ,, ,, | | |
| 9 ,, ,, | | |
| 10ಕ್ಕೆ ಮೇಲ್ಪಟ್ಟು ,, | | |
| ಜುಮ್ಲಾ | | |

## ನಂ. 5

| ವಿಸ್ತೀರ್ಣ | ಅಷ್ಟೇ ವಿಸ್ತೀರ್ಣವುಳ್ಳ ತಾಕುಗಳ ಸಂಖ್ಯೆ | ಒಟ್ಟು ತಾಕುಗಳ ವಿಸ್ತೀರ್ಣ |
|---|---|---|
| ½ ಎಕರೆ ವಿಸ್ತೀರ್ಣಕ್ಕಿಂತ ಕಡಿಮೆಯಾದ ತಾಕುಗಳು | | |
| ½ ಎಕರೆಯಿಂದ 1 ಎಕರೆ ವಿಸ್ತೀರ್ಣವುಳ್ಳ ತಾಕುಗಳು | | |
| 1 ರಿಂದ 2 ಎಕರ ವಿಸ್ತೀರ್ಣವುಳ್ಳದ್ದು | | |
| 2 ,, 3 ,, | | |
| 3 ,, 4 ,, | | |
| 4 ,, 5 ,, | | |
| 5 ,, 6 ,, | | |
| 6 ,, 7 ,, | | |
| 7 ,, 8 ,, | | |
| 8 ,, 9 ,, | | |
| 9 ,, 10 ,, | | |
| 10ಕ್ಕೆ ಮೇಲ್ಪಟ್ಟು ,, .. | | |
| ಜುಮ್ಲಾ .. | | |

## ನಂ. 6

ಸಾಗುವಳಿದಾರರ (ಜಮೀನ್ದಾರರಲ್ಲ) ಸಂಖ್ಯೆಯನ್ನು ತೋರಿಸುವ ಪಟ್ಟಿ —

| | ಸಂಖ್ಯೆ | ವಿಸ್ತೀರ್ಣ |
|---|---|---|
| 1 ಎಕರೆಗಿಂತ ಕಡಿಮೆ ವಿಸ್ತೀರ್ಣವುಳ್ಳ ತಾಕನ್ನು ಸಾಗುವಳಿಮಾಡುವವರು | | |
| 1 ಎಕರೆಯಿಂದ 2 ಎಕರೆ ,, | | |
| 2 ,, 3 ,, | | |
| 3 ,, 4 ,, | | |
| 4 ,, 5 ,, | | |
| 5 ,, 6 ,, | | |
| 6 ,, 10 ,, | | |
| 10 ಎಕರೆಗೆ ಮೇಲ್ಪಟ್ಟು ,, | | |
| ಜುಮ್ಲಾ | | |

## ನಂ. 7

| ಸಾಗುವಳಿಮಾಡತಕ್ಕ ತಾಕುಗಳು | ಸಾಗುವಳಿಮಾಡತಕ್ಕವರ ಸಂಖ್ಯೆ |
|---|---|
| 1 ತಾಕು ಸಾಗುವಳಿಮಾಡತಕ್ಕವರು | |
| 2 ,, ,, | |
| 3 ,, ,, | |
| 4 ,, ,, | |
| 5 ,, ,, | |
| 6 ,, ,, | |
| 7 ,, ,, | |
| 8 ,, ,, | |
| 9 ,, ,, | |
| 10 ,, ,, | |
| 10 ಕ್ಕೆ ಮೇಲ್ಪಟ್ಟ ತಾಕುಗಳು | |

ನಂ. 8

| ತಾಕಿನ ವಿಸ್ತೀರ್ಣ | | | | ಇಷ್ಟು ವಿಸ್ತೀರ್ಣವುಳ್ಳ ತಾಕುಗಳ ಸಂಖ್ಯೆ |
|---|---|---|---|---|
| ½ ಎಕರೆಗಿಂತ ಕಡಿಮೆ ವಿಸ್ತೀರ್ಣವುಳ್ಳ ತಾಕುಗಳ ಸಂಖ್ಯೆ | | | | |
| ½ ಎಕರೆಯಿಂದ 1 ಎಕರೆ ವಿಸ್ತೀರ್ಣವುಳ್ಳ ತಾಕು | | | | |
| 1 | ,, | 2 | ,, | |
| 2 | ,, | 3 | ,, | |
| 3 | ,, | 4 | ,, | |
| 4 | ,, | 5 | ,, | |
| 5 | ,, | 6 | ,, | |
| 6 | ,, | 7 | ,, | |
| 7 | ,, | 8 | ,, | |
| 8 | ,, | 9 | ,, | |
| 9 | ,, | 10 | ,, | |
| 10 ಎಕರೆಗೆ ಮೇಲ್ಪಟ್ಟು | | | | |

ನಂ 9

| ತಾಕುಗಳ ಸಂಖ್ಯೆ | | | | ತಾಕುಗಳನ್ನು ಹೊಂದಿರುವ ಜಮೀನ್ದಾರರ ಸಂಖ್ಯೆ | ತಾಕುಗಳನ್ನು ಸಾಗುವಳಿ ಮಾಡುತ್ತಿರುವವರ ಸಂಖ್ಯೆ |
|---|---|---|---|---|---|
| 1 ತಾಕು | | | | | |
| 2 ತಾಕಿನಿಂದ 5 ತಾಕು | | | | | |
| 5 | ,, | 8 | ,, | | |
| 9 | ,, | 12 | ,, | | |
| 13 | ,, | 15 | ,, | | |
| 15 ತಾಕಿಗೆ ಮೇಲ್ಪಟ್ಟು | | | | | |
| ಜುಮ್ಲಾ | | | | | |

೨

೧ ಕ್ರಯ, ದಾನ, ಆಧಾರ, ಭೋಗ್ಯ, ವಿಭಾಗ—ಇವೇ ಮುಂತಾದುವುಗಳಿಂದ ತಾಕುಗಳ ವಿಭಾಗವೂ ಮತ್ತು ಅವುಗಳ ಚದುರುವಿಕೆಯೂ ಹೆಚ್ಚಾಗುತ್ತಿದೆಯೆ? ಇದನ್ನು ಅಂಕಿಗಳ ಸಹಾಯದಿಂದ ವ್ಯಕ್ತಪಡಿಸಿ.

೨ ತಾಕುಗಳ ಚದುರುವಿಕೆಯಿಂದ ಆಗುತ್ತಿರುವ ಬಾಧಕವೇನು? ಇದನ್ನು ತಪ್ಪಿಸುವುದಕ್ಕೆ ಉಪಾಯವೇನು? ವಿಶದವಾಗಿ ಚರ್ಚಿಸಿ

೩ ತಾಕುಗಳ ಸಂಯೋಜನಾ ಕ್ರಮವು ಆಚರಣೆಯಲ್ಲಿದೆಯೇ? ಅದರಿಂದ ಉಂಟಾಗುವ ಪ್ರಯೋಜನವೇನು? ಅಂತಹ ಕಾರ್ಯಕ್ರಮದಿಂದ ಗ್ರಾಮಸ್ಥರಿಗೆ ಅನುಕೂಲವೇ? ಎಂಬುದನ್ನು ವಿಚಾರಮಾಡಿ ಸೂಕ್ತವಾದ ಕಾರ್ಯಕ್ರಮವನ್ನು ಸೂಚಿಸಿ?

## ಅಧ್ಯಾಯ ೫. ರೈತರ ಸಾಲ

೧

೧ ರೈತರು ಸಾಲ ಮಾಡುವುದಕ್ಕೆ ಕಾರಣಗಳೇನು? ಗ್ರಾಮದಲ್ಲಿಯೇ ವಾಸವಾಗಿದ್ದು ಹಣ ಸಾಲ ಕೊಡತಕ್ಕವರು, ಹೊರಗಿನವರು ಸಾಲ ಕೊಡತಕ್ಕವರು, ಸಹಕಾರ ಸಂಘ, ಸಾಗುವಳಿಮಾಡುತ್ತಾ ಹಣ ಸಾಲ ಕೊಡತಕ್ಕವರು ಮತ್ತು ಸರ್ಕಾರದಿಂದ ಸಾಲ ಪಡೆಯುತ್ತಿರುವುದು—ಇವುಗಳೆಲ್ಲಾ ಗ್ರಾಮದ ಸಾಲವನ್ನು ಎಷ್ಟರ ಮಟ್ಟಿಗೆ ಹೆಚ್ಚಿಸುತ್ತಿವೆ ಎಂಬುದನ್ನು ವಿಶದವಾಗಿ ವಿವರಿಸಿ?

೨ ಸಾಲಗಳು ತೀರುತ್ತಿವೆಯೇ? ಹಾಗಿದ್ದರ ಯಾವ ರೀತಿ—ಧಾನ್ಯಗಳ ಮಾರಾಟ, ದನಕರುಗಳ ಮಾರಾಟ, ಜಮೀನುಗಳ ಮಾರಾಟ, ಜಮೀನು ಆಧಾರ, ಭೋಗ್ಯ—ಇವೇ ಮುಂತಾದವುಗಳು ಸಾಲತೀರ್ವೆ ಮಾಡುವುದಕ್ಕೆ ಹೆಚ್ಚುತ್ತಿವೆಯೇ? ಇವುಗಳ ಅವಶ್ಯಕತೆಯನ್ನು ವಿಮರ್ಶೆ ಮಾಡಿ?

೩ ಗ್ರಾಮದಲ್ಲಿರುವ ಸಹಕಾರ ಸಂಘದಿಂದ ರೈತರ ಸಾಲ ಪರಿಹಾರಕ್ಕೆ ಸಹಾಯವಾಗುತ್ತಿದೆಯೇ? ಆಗದಿದ್ದರೆ ಇದಕ್ಕೆ ಪರಿಹಾರೋಪಾಯವೇನು? ಅಡಮಾನದ ಬ್ಯಾಂಕಿನ ಕಾರ್ಯಕಲಾಪವು ಗ್ರಾಮಕ್ಕೆ ವಿಸ್ತರಿಸಿದೆಯೆ?

೪ ಸರ್ಕಾರದಿಂದ ರೈತರು ಜಮೀನು ಅಭಿವೃದ್ಧಿ ತಕಾವಿ, ಸಾಲಗಳನ್ನು ಪಡೆಯುತ್ತಿದ್ದಾರೆಯೆ? ಹಾಗೆ ಪಡೆಯುತ್ತಿದ್ದರೆ, ಅವು ಸರಿಯಾದ ರೀತಿಯಲ್ಲಿ ಉಪಯೋಗವಾಗುತ್ತಿದೆಯೇ? ಇಂತಹ ಸಾಲಗಳ ಪ್ರಯೋಜನವು ರೈತರಿಗೆ ತಿಳಿದಿದೆಯೇ? ಈ ಸಾಲಗಳನ್ನು ತೀರಿಸುವುದಕ್ಕೆ

ರೈತರು ಸಾಹುಕಾರರಲ್ಲಿ ಸಾಲಮಾಡುತ್ತಿದ್ದಾರೆಯೆ? ಸಾಲದ ಕಂತುಗಳು ಸಕಾಲದಲ್ಲಿ ಪಾವತಿಯಾಗುತ್ತಿವೆಯೇ? ಇವುಗಳನ್ನೆಲ್ಲಾ ವಿಮರ್ಶೆಮಾಡಿ?

೫ ಕಂದಾಯ, ತೆರಿಗೆ ಮುಂತಾದುವನ್ನು ಪಾವತಿ ಮಾಡುವುದಕ್ಕೆ ರೈತರು ಸಾಲಮಾಡುತ್ತಿದ್ದಾರೆಯೇ? ಹಾಗೆ ಮಾಡುತ್ತಿದ್ದರೆ ಯಾವ ರೀತಿ ಸಾಲಗಳನ್ನು ಪಡೆಯುತ್ತಾರೆ? ಬಡ್ಡಿ ದರವೇನು? ಕಂದಾಯದ ಕಂತುಗಳನ್ನು ಬದಲಾಯಿಸಿದರೆ ರೈತರಿಗೆ ಅನುಕೂಲವೆ?

೬ ಗ್ರಾಮದ ಸಾಲವು ದಿನೇ ದಿನೇ ಹೆಚ್ಚುತ್ತಿದೆಯೇ? ಹೆಚ್ಚುತ್ತಿದ್ದರೆ ಅದರ ಪ್ರಮಾಣವೇನು? ಅಂಕಿಗಳ ಮೂಲಕ ಇದನ್ನು ವಿಶದಪಡಿಸಿ ಸಾಲದಿಂದ ಉಂಟಾಗುತ್ತಿರುವ ಪರಿಣಾಮವನ್ನು ವಿವರಿಸಿ

೨

೧ ಈ ಕೆಳಗೆ ಕಂಡ ಅಂಶಗಳನ್ನೊಳಗೊಂಡ ತಃಖ್ತೆಯನ್ನು ತಯಾರುಮಾಡಿ —

ನಂ. 1

| ಗ್ರಾಮದಲ್ಲಿರುವ ಸಂಸಾರಗಳ ಸಂಖ್ಯೆ | ಒಟ್ಟು ಅವರಿಗೆ ಇರುವ ಜಮಾನು ವಿಸ್ತೀರ್ಣ | ಆಧಾರ, ಭೋಗ್ಯ ಮಾಡಿರುವ ಜಮಾನು ವಿಸ್ತೀರ್ಣ | ಸಾಲದ ಒಟ್ಟು ಮೊಬಲಗು | ಪಾವತಿ ಯಾಗಿರುವ ಬಡ್ಡಿ | ಬಡ್ಡಿ ದರ ಮತ್ತು ಕಾರಣ |
|---|---|---|---|---|---|
| | | | | | |

ನಂ. 2

| ನಂ | ಸಾಲಗಾರನ ಹೆಸರು ಕಸಬು | ಅವನಿಗಿರುವ ಜಮೀನು ವಿಸ್ತೀರ್ಣ | ಆಧಾರ, ಭೋಗ್ಯ ಮಾಡಿರುವ ಜಮೀನು | ಸಾಗುವಳಿ ಮಾಡುತ್ತಿರುವ ಜಮೀನು | ಒಟ್ಟು ಸಾಲದ ಮೊಬಲಗು | ಬಡ್ಡಿ ದರ ಪಾವತಿಯಾದ ಬಡ್ಡಿ | ಸಾಲದ ವಾಯಿದೆ |
|---|---|---|---|---|---|---|---|
| | | | | | | | |
| ಜುಮ್ಲಾ | | | | | | | |

೨ ಸಾಲವನ್ನು ಕಡಿಮೆಮಾಡುವುದಕ್ಕೆ ಆಗಬೇಕಾದ ಉಪಾಯಗಳೇನು? ಸ್ಥಳವಿದ್ಯಮಾನಕ್ಕೆ ತಕ್ಕುದಾದ ಕಾರ್ಯಕ್ರಮವನ್ನು ವಿವರಿಸಿ.

## ಅಧ್ಯಾಯ ೬. ಕಂದಾಯ ಮತ್ತು ತೆರಿಗೆ

೧

೧ ತರಿ, ಖುಷ್ಕಿ, ಬಾಗಾಯ್ತು ಜಮೀನುಗಳಮೇಲೆ ರರಾವಾಗಿರುವ ಕಂದಾಯದ ದರವೆಷ್ಟು? ಪ್ರತಿಯೊಂದು ಸರ್ವೆ ಸೆಟ್ಲಮೆಂಟ್ ಕಾಲದಲ್ಲಿ ದರವು ಹೆಚ್ಚುತ್ತಿದೆಯೇ? ವ್ಯವಸಾಯದ ಆದಾಯಕ್ಕೂ, ಎಕರೆಯೊಂದಕ್ಕೆ ಇರುವ ಕಂದಾಯದ ದರಕ್ಕೂ ಇರುವ ಶೇಕಡ ದರವನ್ನು ತೋರಿಸಿ?

೨ ಕಂದಾಯ ಪಾವತಿಮಾಡುವುದಕ್ಕೆ ಇರುವ ಕಷ್ಟಗಳೇನು? ಇದಕ್ಕೋಸ್ಕರ ರೈತರು ಅಕಾಲದಲ್ಲಿ ತಮ್ಮ ದವಸವನ್ನು ಕಡಿಮೆ ಬೆಲೆಗೆ ಮಾರುತ್ತಿದ್ದಾರೆಯೇ? ಹಾಗೆ ಮಾರುತ್ತಿದ್ದರೆ, ಅವರಿಗೆ ಅದರಿಂದ ಉಂಟಾಗುವ ನಷ್ಟದ ಅಂದಾಜು ಎಷ್ಟು?

೩. ಕಂದಾಯದ ವಸೂಲಿಗೆ, ಸರ್ಕಾರದವರು ಆಚರಿಸುತ್ತಿರುವ ಬಲಾತ್ಕಾರಕ ಮಾರ್ಗಗಳಾವುವು? ಅದರಿಂದ ರೈತರಿಗುಂಟಾಗುತ್ತಿರುವ

ಕಷ್ಟಗಳೇನು? ಕಂದಾಯ ರಿಯಾಯಿತಿ ಮಾಡುವುದಕ್ಕೆ ಸರ್ಕಾರದವರು ಅನುಸರಿಸುತ್ತಿರುವ ವಿಧಾನವು ಸಮರ್ಪಕವಾಗಿದೆಯೇ?

೪ ಕೆಳಗೆ ಕಂಡ ಅಂಶಗಳನ್ನು ತೋರಿಸುವ ಒಂದು ತಃಖ್ತೆಯನ್ನು ತಯಾರುಮಾಡಿ —

| ವರ್ಷ | ಗ್ರಾಮದ ಒಟ್ಟು ಜಮೀನು ಕಂದಾಯ | ಮನೆ ಕಂದಾಯ | ಇತರ ತೆರಿಗೆ | ನಿವ್ವಳ ಆದಾಯಕ್ಕೂ, ಕಂದಾಯಕ್ಕೂ ಇರುವ ಶೇ ದರ | ತೆರಿಗೆಯ ದರ (Incidence of Taxation) |
|---|---|---|---|---|---|
| 1910 | | | | | |
| 1915 | | | | | |
| 1920 | | | | | |
| 1925 | | | | | |
| 1930 | | | | | |
| 1935 | | | | | |
| 1938 | | | | | |

೨

೧ ಗ್ರಾಮದಲ್ಲಿ ರೈತರು ಸಾಗುವಳಿ ಜಮೀನನ್ನು ಮಾರುತ್ತಿದ್ದಾರೆಯೆ? ಇದ್ದರೆ ಇದಕ್ಕೆ ಕಾರಣವೇನು? ಹೀಗೆ ಮಾರಿ ಎಷ್ಟು ಜನರು ಬರಿ ಸಾಗುವಳಿದಾರರಾಗಿದ್ದಾರೆ? ಎಷ್ಟು ಜನರು ವ್ಯವಸಾಯವನ್ನೇ ಬಿಟ್ಟಿದ್ದಾರೆ? ಜಮೀನಿಲ್ಲದವರು ಎಷ್ಟು ಜನ ಜಮೀನುದಾರರಾಗಿದ್ದಾರೆ? ಜಮೀನು ಮಾರಾಟವನ್ನು ತೋರಿಸತಕ್ಕ ಒಂದು ತಃಖ್ತೆಯನ್ನು ತಯಾರಿಸಿ?

| ವರ್ಷ | ಕ್ರಯದಾರರಿಗೆ ಇರುವ ಒಟ್ಟು ಜಮೀನು ವಿಸ್ತೀರ್ಣ | ಕ್ರಯ ಮಾಡಿರುವ ಜಮೀನು ವಿಸ್ತೀರ್ಣ | ಕ್ರಯದ ಮೊಬಲಗು ಮತ್ತು ದರ | ಕ್ರಯದಾರರಿಗೆ ಇದರಿಂದ ಕಡಿಮೆಯಾದ ವರಮಾನದ ಅಂದಾಜು | ಕ್ರಯಕ್ಕೆ ಕಾರಣ |
|---|---|---|---|---|---|
| 1920 | | | | | |
| 1925 | | | | | |
| 1930 | | | | | |
| 1935 | | | | | |
| 1938 | | | | | |

## ಅಧ್ಯಾಯ ೭. ಗ್ರಾಮದ ಆರ್ಥಿಕ ಜೀವನ

### ೧

೧ ಗ್ರಾಮದಲ್ಲಿ ವಾಸಮಾಡುತ್ತಿರುವವರಲ್ಲಿ ಕೆಲವು ಮಾದರಿ ಸಂಸಾರಗಳನ್ನು ಆರಿಸಿಕೊಂಡು, ಅದರಲ್ಲಿ ಇರುವವರ ಸಂಖ್ಯೆ, ವಯಸ್ಸು, ಜಾತಿ ಅವರು ಮಾಡತಕ್ಕ ಕೆಲಸ, ಅವರಿಗುಂಟಾಗುವ ಆದಾಯ — ಇವೇ ಮುಂತಾದುವನ್ನು ವಿವರವಾಗಿ ವರ್ಣಿಸಿ? ಹೀಗೆ ಮಾಡುವಾಗ, ಧನಿಕ ಜಮಿನ್ದಾರರು, ಸಾಮಾನ್ಯ ಜಮೀನ್ದಾರರು, ಸಾಗುವಳಿದಾರರು, ಕೂಲಿ ಕಾರರು, ವ್ಯವಸಾಯಗಾರರಲ್ಲದ ಧನಿಕರು— ಇವರುಗಳಲ್ಲೆಲ್ಲಾ ವಿಚಾರಣೆ ನಡೆಯಿಸಿ

೨ ಮೇಲ್ಕಂಡ ಸಂಸಾರಗಳ ಆದಾಯ ವೆಚ್ಚವನ್ನು ತೋರಿಸತಕ್ಕ ಒಂದು ಪಟ್ಟಿಯನ್ನು ತಯಾರುಮಾಡಿ —

| ಸಂಸಾರದ ಒಟ್ಟು ಜನಸಂಖ್ಯೆ ಕಸಬು ಸ್ವಭಾವ | ಆದಾಯ ಮಾರ್ಗಗಳು | ಆದಾಯದ ಕಿಮ್ಮತ್ತು | ಸಂಸಾರಕ್ಕೆ ಆಗತಕ್ಕ ಖರ್ಚು—ಮಾರ್ಗ | ಖರ್ಚಾಗುವ ಮೊಬಲಗು | ಲಾಭ ಅಥವಾ ನಷ್ಟ |
|---|---|---|---|---|---|
| | | | | | |

೩ ಗ್ರಾಮದಲ್ಲಿ ಉತ್ಪತ್ತಿಯಾಗುತ್ತಿರುವ ಧಾನ್ಯಗಳು ಹೊರಗೆ ಹೋಗುತ್ತಿವೆಯೇ? ಅಲ್ಲಿ ಬೆಳೆದ ದವಸವು ಸಾಕಾಗದೆ ಹೊರಗಿನಿಂದ ಗ್ರಾಮಸ್ಥರು ತರಿಸುತ್ತಿದ್ದಾರೆಯೇ? ದುರ್ಭಿಕ್ಷ ಕಾಲದಲ್ಲಿ ಜನರು ಆಹಾರಕ್ಕೆ ಏನು ಮಾಡುತ್ತಾರೆ?

೪ ಗ್ರಾಮಕ್ಕೆ ಒಟ್ಟು ಬೇಕಾಗುವ ರಾಗಿ, ಅಕ್ಕಿ, ಮಾಂಸ, ಹೆಂಡ— ಇವೇ ಮುಂತಾದ ಪದಾರ್ಥಗಳ ಒಟ್ಟು ಬೆಲೆಯನ್ನು ಅಂದಾಜುಮಾಡಿ?

೫. ಗ್ರಾಮದಲ್ಲಿ ಉತ್ಪತ್ತಿಯಾಗುವ ಹಾಲು, ಮೊಸರು, ಬೆಣ್ಣೆ

ಮುಂತಾದುವುಗಳ ಕಿಮ್ಮತ್ತು ಎಷ್ಟು? ಇವುಗಳನ್ನು ಗ್ರಾಮಸ್ಥರೇ ಸ್ವಂತಕ್ಕೆ ಉಪಯೋಗಿಸಿಕೊಳ್ಳುತ್ತಿದ್ದಾರೆಯೆ? ಅಥವಾ ಮಾರುತ್ತಿದ್ದಾರೆಯೇ? ಮಾರುತ್ತಿದ್ದರೆ ಅದರಿಂದ ಬರುವ ಉತ್ಪತ್ತಿಯ ಅಂದಾಜು ಎಷ್ಟು?

೬ ಜನಗಳ ಆರ್ಥಿಕ ಜೀವನದಲ್ಲಿ ಏನಾದರೂ ಬದಲಾವಣೆಯಾಗುತ್ತಿದೆಯೇ? ಅಲ್ಲಿ ಆಗುತ್ತಿರುವ ಆರ್ಥಿಕಾಭಿವೃದ್ಧಿ ಅಥವಾ ಕ್ಷೀಣತೆಗೆ ಕಾರಣಗಳನ್ನು ತಿಳಿಸಿ? ಆರ್ಥಿಕಾಭಿವೃದ್ಧಿಗೆ ಅನುಕೂಲವಾದ ಕಾರ್ಯಕ್ರಮವನ್ನು ಸೂಚಿಸಿ?

೭ ಗ್ರಾಮಾಭ್ಯುದಯವನ್ನು ತೋರಿಸುವ ಒಂದು ತಃಖ್ತೆಯನ್ನು ತಯಾರುಮಾಡಿ —

| ವರ್ಷ | ಗ್ರಾಮದ ಒಟ್ಟು ಆದಾಯ | ಒಟ್ಟು ಜನಸಂಖ್ಯೆ | ಒಟ್ಟು ಸಾಗುವಳಿ ವಿಸ್ತೀರ್ಣ | ಪ್ರತಿಯೊಬ್ಬರ ಸರಾಸರಿ ತಾಕು | ಪ್ರತಿಯೊಬ್ಬರ ಸರಾಸರಿ ಆದಾಯ | ಪ್ರತಿಯೊಬ್ಬರ ಸರಾಸರಿ ಸಾಲ |
|---|---|---|---|---|---|---|
| 1920 | | | | | | |
| 1925 | | | | | | |
| 1930 | | | | | | |
| 1935 | | | | | | |
| 1938 | | | | | | |

೨

ಗ್ರಾಮ ತಾಲ್ಲೂಕು ಡಿಸ್ಟ್ರಿಕ್ಟು
ಸಂಸಾರದ ಸಂಖ್ಯೆ
ಜಾತಿ
ಕಸಬು

I

೧. ಊಟದ ಸ್ವಭಾವ, ಕಾಲ, ವಿಧಾನ
೨ ವಾಸಿಸುವರ ಸ್ಥಿತಿ ಮತ್ತು ಸ್ವಭಾವ
೩ ಆಚರಣೆಯಲ್ಲಿ ಇರುವ ಉಪವೃತ್ತಿ
೪ ಮದುವೆ, ಹಬ್ಬ, ಉತ್ತರಕ್ರಿಯಾದಿಗಳಲ್ಲಿ ಸಾಮಾನ್ಯವಾಗಿ ಖರ್ಚು ಮಾಡುವ ಮೊಬಲಗಿನ ಅಂದಾಜು
೫. ಕೆಲಸವಿಲ್ಲದಿರುವ ಕಾಲ, ಸೂಕ್ತವಾದ ಉದ್ಯೋಗ, ಮನೆ ಮತ್ತು ಆರೋಗ್ಯ.

II

೧ ಮನೆಯಲ್ಲಿ ವಾಸವಾಗಿರುವವರ ಸಂಖ್ಯೆ.
೨ ಮನೆಯ ವಿಸ್ತಾರ, ಕೊಠಡಿಗಳು, ಹಜಾರ, ಅವುಗಳ ಅಳತೆ —ಇತ್ಯಾದಿ
೩ ಮನೆಯ ಕಟ್ಟಡದ ವರ್ಣನೆ ಮತ್ತು ಅದರ ಪರಿಸ್ಥಿತಿ
೪. ದಾರಿ, ಬೆಳಕು, ನೀರು, ಚರಂಡಿ—ಇವುಗಳ ಸೌಕರ್ಯ.
೫. ಮನೆಯ ಬೆಲೆಯ ಅಂದಾಜು.

# III

## ಆದಾಯ

| ನಂ | ಆದಾಯ | ಪ್ರಮಾಣ | ಕಿಮ್ಮತ್ತು | ಸಂಪಾದಿಸುವವರ ಸಂಖ್ಯೆ | ಕಸಬು | ಕಸಬಿನಿಂದ ಬರುವ ಆದಾಯ |
|---|---|---|---|---|---|---|
| 1 | ತರಿ, ಖುಷ್ಕಿ, ಬಾಗಾಯ್ತು ಸಾಗುವಳಿಯಿಂದ ಬರುವ ಆದಾಯ | | | | | |
| 2 | ಜಮೀನು ಗೇಣಿಯಿಂದ ಬರುವ ವರಮಾನ | | | | | |
| 3 | ಕೂಲಿ ಕೆಲಸದಿಂದ ಬರುವ ವರಮಾನ | | | | | |
| 4 | ಕೈಗಾರಿಕೋದ್ಯಮಗಳಿಂದ ಬರುವ ವರಮಾನ | | | | | |
| 5 | ಹಾಲು, ಮೊಸರು, ಬೆಣ್ಣೆ—ಇವುಗಳಿಂದ ಬರುವ ವರಮಾನ | | | | | |
| 6 | ಮನೆಬಾಡಿಗೆ, ಬಡ್ಡಿ, ಇತರೆ ವಿಧಗಳಿಂದ ಬರುವ ವರಮಾನ | | | | | |
| 7 | ಇತರ ವಿಧಾನಗಳಿಂದ ಬರುವ ವರಮಾನ | | | | | |
| | ಒಟ್ಟು ವಾರ್ಷಿಕ ವರಮಾನ | | | | | |

## IV

### ಖರ್ಚು ಪಟ್ಟಿ

| ನಂ | ಪದಾರ್ಥಗಳ ಖರ್ಚು | ಪ್ರಮಾಣ | | ಕಿಮ್ಮತ್ತು | | | ಷರಾ |
|---|---|---|---|---|---|---|---|
| | | ಖಂ | ಕೊಳಗ | ರೂ | ಆ | ಪೈ | |
| 1 | ರಾಗಿ, ಭತ್ತ, ಬೇಳೆ ಮುಂತಾದ ಆಹಾರಪದಾರ್ಥಗಳ ಖರ್ಚು | | | | | | |
| 2 | ಸೌದೆ, ಎಣ್ಣೆ ಮುಂತಾದ ಪದಾರ್ಥಗಳು | | | | | | |
| 3 | ಬಟ್ಟೆ | | | | | | |
| 4 | ಮನೆಬಾಡಿಗ, ರಿಪೇರಿ, ಇತ್ಯಾದಿ | | | | | | |
| 5 | ದನಕರುಗಳ ಖರ್ಚು | | | | | | |
| 6 | ಹಬ್ಬಹರಿದಿನಗಳ ಖರ್ಚು | | | | | | |
| 7 | ಔಷಧಿ ವಗೈರೆ | | | | | | |
| 8 | ವಿದ್ಯಾಭ್ಯಾಸ, ಬಡ್ಡಿ, ಇತ್ಯಾದಿ | | | | | | |
| 9 | ಜಮೀನು ಕಂದಾಯ, ತೆರಿಗೆ, ಇತ್ಯಾದಿ | | | | | | |
| 10 | ಇತರೆ ಖರ್ಚು | | | | | | |

## V

| ಒಟ್ಟು ಜಮೀನು ವಿಸ್ತೀರ್ಣ | ಆಧಾರ ಭೋಗ್ಯ ಮಾಡಿರುವ ಜಮೀನು ವಿಸ್ತೀರ್ಣ | ಸಾಲದ ಮೊಬಲಗು | ವಾಯಿದೆ ಮತ್ತು ಕಾರಣ | ಪಾವತಿ ಯಾಗಿರುವ ಬಡ್ಡಿ | ಪಾವತಿಯಾಗ ಬೇಕಾದ ಅಸಲು ಮತ್ತು ಬಡ್ಡಿ |
|---|---|---|---|---|---|
| | | | | | |

ಒಟ್ಟು ಆಸ್ತಿಯ ಬೆಲೆ ಒಟ್ಟು ವಾರ್ಷಿಕಾದಾಯ ಒಟ್ಟು ಖರ್ಚು

## ಗ್ರಾಮಾಭಿವೃದ್ಧಿ ತಃಖ್ತೆ

| ವರ್ಷ | ಗ್ರಾಮದ ಒಟ್ಟು ವಿಸ್ತೀರ್ಣ | ಸಾಗುವಳಿ ಯಾಗುತ್ತಿರುವ ವಿಸ್ತೀರ್ಣ | ಗ್ರಾಮದ ಒಟ್ಟು ಸಂಸಾರ | ಗ್ರಾಮದ ಒಟ್ಟು ಜನಸಂಖ್ಯೆ | ಗ್ರಾಮದ ಒಟ್ಟು ಆದಾಯ | ಸರಾಸರಿ ಸಂಸಾರದ ಆದಾಯ | ಸರಾಸರಿ ಮನುಷ್ಯರ ಆದಾಯ | ಗ್ರಾಮದ ಒಟ್ಟು ಸಾಲ | ಸರಾಸರಿ ಪ್ರತಿಯೊಂದು ಸಂಸಾರಕ್ಕೆ ಬರುವ ಸಾಲ | ಷರಾ |
|---|---|---|---|---|---|---|---|---|---|---|
| 1915 | | | | | | | | | | |
| 1920 | | | | | | | | | | |
| 1925 | | | | | | | | | | |
| 1930 | | | | | | | | | | |
| 1935 | | | | | | | | | | |
| 1938 | | | | | | | | | | |

## ವಿದ್ಯಾಭಿವೃದ್ಧಿ ತಃಖ್ತೆ

| ವರ್ಷ | ಗ್ರಾಮದ ಒಟ್ಟು ಸಂಸಾರ | ಗ್ರಾಮದ ಜನಸಂಖ್ಯೆ | | ಓದು ಬರಹ ಬರುವವರ ಸಂಖ್ಯೆ | | ಪಾಠಶಾಲೆಗೆ ಹೋಗುತ್ತಿರುವವರ ಸಂಖ್ಯೆ | | ಹೊರಗಡೆ ವಿದ್ಯಾಭ್ಯಾಸ ಮಾಡುತ್ತಿರುವವರ ಸಂಖ್ಯೆ | | ಕೈಗಾರಿಕೆಗಳಲ್ಲಿ ತರಪೇತಾಗುತ್ತಿರುವವರ ಸಂಖ್ಯೆ | | ಷರಾ |
|---|---|---|---|---|---|---|---|---|---|---|---|---|
| | | ಗಂಡಸರು | ಹೆಂಗಸರು | ಗಂಡಸರು | ಹೆಂಗಸರು | ಗಂಡಸರು | ಹೆಂಗಸರು | ಗಂಡಸರು | ಹೆಂಗಸರು | ಗಂಡಸರು | ಹೆಂಗಸರು | |
| 1915 | | | | | | | | | | | | |
| 1920 | | | | | | | | | | | | |
| 1925 | | | | | | | | | | | | |
| 1930 | | | | | | | | | | | | |
| 1935 | | | | | | | | | | | | |
| 1938 | | | | | | | | | | | | |

## ಗ್ರಾಮದ ಆರ್ಥಿಕಸ್ಥಿತಿ

| ನಂ | ಯಜಮಾನನ ಹೆಸರು | ಜಾತಿ | ಸಂಪಾದಿಸುವವರ ಸಂಖ್ಯೆ | ಜಮೀನು ವಿಸ್ತೀರ್ಣ | ಸಾಗುವಳಿ ಮಾಡುತ್ತಿರುವ ಜಮೀನು ವಿಸ್ತೀರ್ಣ | ಒಟ್ಟು ಇರುವ ಜಮೀನು ತಾಕುಗಳು | ಮುಖ್ಯವೃತ್ತಿ ಮತ್ತು ಸ್ವಭಾವ | ಉಪವೃತ್ತಿ ಇದ್ದರೆ |
|---|---|---|---|---|---|---|---|---|
| | | | | | | | | |

# SOME OPINIONS

RAJASEVASAKTA B M SRIKANTIA, ESQ, M A, B L, *Professor of English, Central College, Vice-President, Karnataka Sahitya Parishat, Bangalore* —

"Perhaps the most urgent problem in India to-day is Village Reconstruction and Mr D Krishna Iyengar has produced in Kannada a very interesting book containing much useful matter on agriculture, village education, indebtedness of the ryots, village industries and other allied topics Mr Krishna Iyengar is a Sub-Registrar and has lived in villages and has first-hand knowledge of the subjects he deals with He is a keen worker in Kannada and has started Karnataka Sanghas in Bannur and other places, and worked with the Sanghas at Channarayapatna and Tirthahalli I heartily recommend his well-written book to all interested in rural uplift"

* * *

V L D'SOUZA, ESQ, B A, B COM (London), *Professor of Economics, Maharaja's College, Mysore* —

"Mr D Krishna Iyengar's book in Kannada, on the Indian Cultivator meets a greatly felt want These are days of Rural Reconstruction and everyone connected with rural welfare is supposed to take a hand in it There is hardly anyone among us who does not derive his sustenance directly and indirectly from land Rural welfare in a country like India whose population in the main lives in villages almost amounts to national welfare There is a fair amount of literature in English on our agricultural economics, but English is not the medium through which the country-folk can be reached Books written in the vernacular will make an instantaneous appeal to the rural population and those interested in rural welfare And when these books in the vernacular

reach the high standard that is attained by Mr D. Krishna Iyengar's book, we have to be genuinely grateful to the authors and thank them for having done a national service The book under review is written with great care and with a sense of accuracy It abounds in practical suggestions, so much so that it will serve as a village guide There is no Government which identifies itself so closely with the needs and aspirations of the people as the Government of Mysore, and in the great task of Rural Reconstruction that is undertaken in Mysore, the book will serve as a mine of information and a plan for effective action The first step in the re-building of our villages is enlightenment — a clear understanding of the needs of the cultivating classes and a concrete picture of the things that must be done All these objects are well served by Mr D Krishna Iyengar's book "

---

ಬೆಂಗಳೂರು ಪ್ರೆಸ್